# ಮಾಧವಿ

ಮಾಸಿಕ ರಸಗಂಗೆ

ವಿಚಾರ * ವಿನೋದ * ವಿಜ್ಞಾನ





ಎಪ್ಪತ್ತೈದು ಪೈಸೆ

# ಕಲ್ಪನ

'ಮಾಧವಿ' ಬಳಗಕ್ಕೆ ವಂದನೆಗಳು

ಮಾಧವಿ ಸಂಚಿಕೆ ಕ್ರಿಸ್ತಾರಿತಂ

ಸರ್ವಾಂಗ ಸುಂದರವಾಗಿ ಬೆಳೆದ 'ಮಾಧವಿ' ದಿನೇ ದಿನೇ ಅಭಿವೃದ್ಧಿ ಹೊಂದಿ ಸರ್ವಾಲಂಕಾರ ಸಂಪನ್ನಳಾಗಿ ಪತ್ರಿಕೋದ್ಯಮದ ನಾಯಕಿಯಾಗಿ ಮೆರೆಯಲೆಂದು ಮನಸಾ ಹಾರೈಸುತ್ತೇನೆ

'ಮಾಧವಿ' ಸದಸ್ಯರನ್ನು ಸಂತೋಷವಾಗಿ ಪ್ರೇರಣೆ ಉತ್ತೇಜನ ನೀಡಿ ಸಹಕರಿಸುತ್ತಿರುವ ಆ ಮಾನ್ಯರಿಗೆ ಕೃತಜ್ಞತೆ

ಉಳಿದಂತೆ ಬಳಗದವರೆಲ್ಲರಿಗೂ ಹಾರ್ದಿಕ ಮತ್ತೊಮ್ಮೆ ಶುಭಕೋರಿ ಮಾಡುವ ವಂದನೆಗಳೊಂದಿಗೆ

ಕಲ್ಪನ

---

## ಪ್ರೇಮ-ಪಕ್ಷಿಗಳು

" ಒಲುಮೆಯಲಿ_ನಲುಮೆಯಲಿ
ಸುಖ ಪಡೆದ ಪ್ರಣಯಿಗಳು,
ತಲ್ಲೀನರಾಗಿಹರು, ತನ್ಮಯತೆಯಲಿಹರು
ರಾಧಾ_ಕೃಷ್ಣರೇ ಪ್ರೇಮಪಕ್ಷಿಗಳು "

[ ಮುಖಪುಟ – ಕಾಂಗ್ರೋ ಕೊಳ್ಳದ ಚಿತ್ರಗಳ ಸಂಗ್ರಹದಿಂದ ]

ಸೆಪ್ಟಂಬರ್—೧೯೬೭

*

ಸಂಚಾಲಕರು :
ವ್ಹಿ. ಆರ್. ಪಾಟೀಲ, ಬಿ.ಎ.,ಎಲೆಲ್ ಬಿ.

ವ್ಯವಸ್ಥಾಪಕ ಸಂಪಾದಕರು :
ಕೃಷ್ಣಮೂರ್ತಿ, ಎಂ. ಎ.

ಸಂಪಾದಕರು :
ಕುಂವಲಯ್ಯ, ಎಂ. ಎ.

ಸಹ ಸಂಪಾದಕರು :
ಅನಂತ, ಬಿ. ಎಸ್‌ಸಿ.

ಉತ್ಪಾದನೆ
ಕೃಷ್ಣ ಪೋತದಾರ

ಚಿತ್ರಕಲೆ,
ಭಾಸ್ಕರ್ ಭೋಸಲೆ

ಮುದ್ರಣ :
ಹಿಂದಮಾತಾ ಮುದ್ರಣಾಲಯ, ಧಾರವಾಡ

ಚಂದಾ ವಿವರ :

| | | |
|---|---|---|
| ದ್ವಿ ವಾರ್ಷಿಕ : | ರೂ. | ೧೫-೦೦ |
| ವಾರ್ಷಿಕ : | ರೂ. | ೮-೦೦ |
| ಅರ್ಧ ವಾರ್ಷಿಕ : | ರೂ. | ೪-೫೦ |
| ಬಿಡಿ ಸಂಚಿಕೆ : | ರೂ. | ೦-೭೫ |

ಪ್ರಕಟಣೆ :
ಪ್ರತಿ ತಿಂಗಳು ೧ನೇ ತಾರೀಖು

# ಮಾಧವಿ

ಮಾಸಿಕ ರಸಗಂಗೆ

**ವಿಚಾರ * ವಿನೋದ * ವಿಜ್ಞಾನ**

## ಕೃಷಿಕತತಿ ನಲಿದುದೊಡನೆ

ಎದ್ದುವು ಮುಗಿಲ್ಗಳೆಣ್ಟಿಸೆಗಳೊಳ್, ತರತರದೊ
ಳಿದ್ದುವು ಗಿರಿಗಳಂತೆ, ಮಿಂಚಿದುವು ದಿಗ್ವಧುಗ
ಳುದ್ದಂಡದಿಂದ ಪರ್ಜನ್ಯನಂ
ಸೆಣಸಿನೋಡುವಚಲಾಪಾಂಗದಂತೆ ||
ಸದ್ದಾತೃವಾಗಿ, ತನ್ನ ಪೊಲಿರದ ಲೋಭಿಯಂ
ಗದ್ದಿಸುವ ತೆರದಿಂದೆ
ಮೊಳಗಿದುವು ಧರಣಿಯೊಳ್,
ಬಿದ್ದ ಮುಂಬನಿಯ ಕಂಪಿಗೆ
ಸೊಗಸಲಾನೆಗಳ್ ಕೃಷಿಕತತಿ ನಲಿದುದೊಡನೆ||

ಲಕ್ಷ್ಮೀಶ. ೭-೨.

ಮೇಘಗಳು ಸಾಲು ಸಾಲುಗಳಾಗಿ ಎಂಟು ದಿಕ್ಕುಗಳಲ್ಲಿಯೂ ಬೆಟ್ಟಗಳಂತೆ ಎದ್ದು ನಿಂತವು. ಅವುಗಳಲ್ಲಿ ಹುಟ್ಟುತ್ತಿರುವ ಮಿಂಚುಗಳು ಇಂದ್ರನೊಡನೆ ಸೆಣಸುತ್ತ ಅವನನ್ನು ಕೋಪದಿಂದ ನೋಡುತ್ತಿರುವ ದಿಗ್ವನಿತೆಯರ ಕಟಾಕ್ಷ ದೃಷ್ಟಿಗಳೋ ಎಂಬಂತಿದ್ದವು. ಮೇಘಗಳಿಂದ ಬಿದ್ದ ನೀರ ಹನಿಗಳಿಂದ ನೆಲದಲ್ಲಿ ಸುವಾಸನೆ ಹುಟ್ಟಲು ಆನೆಗಳು ಅದನ್ನು ಮೆಚ್ಚಿದವು. ಮುಂಗಾರಿನ ಮಳೆಯನ್ನು ನೋಡಿ ತಮ್ಮ ಕೃಷಿಗೆ ನೆಲವನ್ನುಳಲು ಅನುಕೂಲವಾಗುವುದೆಂದು ಕೃಷೀವಲರು ನಲಿಯುತ್ತಿದ್ದರು. ತಾನು ಹೀಗೆ ದಾತೃವಾಗಿದ್ದುಕೊಂಡು ಜನರನ್ನು ಸಂತೋಷಪಡಿಸುವಂತೆ, ಲೋಭಿಯು ದಾತೃವಲ್ಲದಿರುವುದನ್ನು ನೋಡಿ ಅವನನ್ನು ಗದರಿಸಿ ನಿಂದಿಸುತ್ತಿದೆಯೋ ಎಂಬಂತೆ ಮೇಘವು ಗುಡಾಗಿ ಗರ್ಜಿಸುತ್ತಿದ್ದಿತು.

ಸಂಪುಟ ೧ * ಸಂಚಿಕೆ ೨ * ಕ್ರಮಾಂಕ ೨

# 'ಮಾಧವಿ' ಅಂತರಂಗ




'ಮಾಧವಿ' ಕಾರ್ಯಾಲಯ, ದೀಕ್ಷಿತ್ ಕಂಪೌಂಡ, ಯು. ಬಿ. ಹಿಲ್., ಧಾರವಾಡ–೭.

# ಇದೆಲ್ಲ ನಮಗಾಗಿ

**ಪ್ರತಿಭಾವಂತರಾರು : ಮನೆಯಲ್ಲಿ ಅಘಾತ : "ಸುಳ್ಳು" ಮೀಮಾಂಸೆ**

## ಇವರು ಪ್ರತಿಭಾವಂತ ವಿದ್ಯಾರ್ಥಿಗಳು

ಮಿಚಿಗನ್ ರಾಜ್ಯ ವಿಶ್ವ ವಿದ್ಯಾಲಯದ ಪ್ರಾಧ್ಯಾಪಕಿ ಡಾ॥ ಎಲಿಜಬತ್ ಎಂ. ಡ್ರೂಸ್ ಪ್ರತಿಭಾನ್ವಿತ ವಿದ್ಯಾರ್ಥಿಗಳನ್ನು ನಾಲ್ಕು ವಿಭಾಗಗಳಲ್ಲಿ ವಿಭಜಿಸುತ್ತಾಳೆ. ಪ್ರಥಮ, ವಿಭಾಗ 'ಅ'. ಈ ವಿಭಾಗಕ್ಕೆ ಸೇರುವ ವಿದ್ಯಾರ್ಥಿಗಳು ಅಭ್ಯಾಸ ಪ್ರಿಯರು. ಇವರು ತಮ್ಮ ಸತತಾಭ್ಯಾಸದಿಂದ ಪರೀಕ್ಷೆಗಳಲ್ಲಿ ಹೇಗೆ ಉತ್ತಮ ಯಶಸ್ವಿ ಸ್ಥಾನ ಪಡೆಯಬೇಕೆಂಬುದನ್ನು ಚೆನ್ನಾಗಿ ಅರಿತಿರುತ್ತಾರೆ. ಎರಡನೆಯ ವಿಭಾಗ 'ಬ'. ಇವರಿಗೆ ಸಾಮಾಜಿಕ ನಾಯಕತ್ವದ ಒಲವು. ಜನ ಸಾಮಾನ್ಯರ ಮೇಲೆ ತಮ್ಮ ಪ್ರಭಾವ ಹೇಗೆ ಬೀರಬೇಕು ಎಂಬುದರಲ್ಲಿ ಇವರು ಪ್ರವೀಣರು. ಬೆಳೆದು ದೊಡ್ಡವರಾದಾಗ ಕಾರ್ಯ ಸಿರ್ವಾಹಕರ ವರ್ಗಕ್ಕೆ ಇವರು ಹೊಂದುತ್ತಾರೆ. ಮೂರನೆಯದು 'ಕ' ವರ್ಗ. ಇವರನ್ನು ಶಿಕ್ಷಕರು ಹೇಯವಾಗಿ ನೋಡುತ್ತಾರೆ; ಪ್ರೀತಿಸುವದಿಲ್ಲ. ಏಕೆಂದರೆ ಇವರು 'ವಿಚಾರವಂತರು-ಪ್ರತಿಭಾನ್ವಿತರು.' ಇವರೇ ಭವಿಷ್ಯದ ಶಿಲ್ಪಿಗಳು-ವಿಜ್ಞಾನಿಗಳು, ಸಾಹಿತಿಗಳು, ಕಲಾವಂತರು. ನಾಲ್ಕನೆಯದು 'ಡ' ವರ್ಗ. ಇವರೇ 'ದಂಗೆಕೋರರು ಬಂಡಾಯಗಾರರು.' ಇವರು ಉಚ್ಚ ಸೂಕ್ಷ್ಮ ಬುದ್ಧಿಯುಳ್ಳವರು. ಆದರೆ ಸಮಾಜದಲ್ಲಿ-ಅಭ್ಯಾಸದಲ್ಲಿ ಹೀನ ಮಟ್ಟ ಹೊಂದುವವರು.

ಆದರೆ ಈ ವರ್ಗಗಳವರು ಯಾರೂ ಪುಸ್ತಕ ಹುಳುಗಳಲ್ಲ.

## ಮನೆಯಲ್ಲೂ ಅಘಾತ ಸಾಧ್ಯ

ಅಮೆರಿಕೆಯಲ್ಲಿ ವಾಹನಗಳ ಅಪಘಾತಗಳಿಂದ ಆಗುವ ಸಾವು-ನೋವುಗಳು ಬಹಳವಾದರೂ, ಇದರಂತೆಯೇ ಇನ್ನೊಂದು ಕಾರಣ ಸಾವು ನೋವು ಅಘಾತಗಳಿಗೆ ಎಡೆಕೊಟ್ಟಿದೆ. ಅದು ಅಮೆರಿಕದಲ್ಲಿಯ ಮನೆಗಳಲ್ಲೇ ನಡೆಯುವ ಅಪಘಾತಗಳು. ವಾಹನಗಳು ಅಪಘಾತದಿಂದ ಆದ ಮರಣಗಳ ಸಂಖ್ಯೆಗೆ ನಂತರ ಮನೆಗಳಲ್ಲಿ ಆದ ಅಘಾತಗಳಿಂದಾದ ಮರಣಗಳ ಸಂಖ್ಯೆ ಬರುತ್ತದೆಂದು ಒಮ್ಮೆ ಡಾ॥ ಗಾರ್ಡನ್ ಡಿ. ಜೆನ್‌ಸನ್‌ರವರು ಸಿರೂಪಿಸಿದರು. ಮನೆಗಳಲ್ಲಿ ಮಹಡಿಯಿಂದ ಕಾಲು ಜಾರಿ ಬೀಳುವುದು, ಜಮಾಖಾನೆ ಮೇಲೆ ಜಾರಿ ಬೀಳುವುದು, ಪಾವಟಣಿಗೆಯ ಮೇಲಿಂದ ಜಾರುವುದು, ಕಾಫಿ ಟೀ ಬಿಸಿಯಿದ್ದಾಗ ಚೆಲ್ಲಿಕೊಂಡು, ಸುಟ್ಟ ಗಾಯ ಮಾಡಿಕೊಳ್ಳುವುದು, ವಿದ್ಯುತ್ ಒಲೆ ಮುಂತಾದ ವಿದ್ಯುದ್ಯುಪಕರಣಗಳಿಂದ ಹಾನಿಮಾಡಿಕೊಳ್ಳುವುದು, ಮುಂತಾದ ಅನೇಕ ಕಾರಣಗಳಿಂದ ಮನೆಗಳಲ್ಲಿಯ ಅಘಾತಗಳು ಬಹಳಷ್ಟು ಪ್ರಮಾಣದ ಸಾವು ನೋವುಗಳಿಗೆ ಎಡೆಮಾಡಿಕೊಟ್ಟಿದೆ.

ಭಾರತದಲ್ಲಿ ಈ ಪ್ರಕರಣಗಳಿಗೆ ಕೊರತೆಯಿಲ್ಲ. ಜಾಗರೂಕತೆಯೇ ಈ ಅಘಾತಗಳಿಗೆ ಉತ್ತಮ ಪರಿಹಾರ.

## ನಿಮಗೆ ಬೋಳುತಲೆ ಇದೆಯೇ? ಇದನ್ನು ಗಮನಿಸಿ.

ನ್ಯೂಯಾರ್ಕ್ ಸ್ಮಾರಕ ಆಸ್ಪತ್ರೆಯ ಶಸ್ತ್ರ ಚಿಕಿತ್ಸಕರೊಬ್ಬರು ಬೋಳುತಲೆಗೆ ಶಸ್ತ್ರಚಿಕಿತ್ಸೆ ಮಾಡಿದರೆ ಕೂದಲು ಬೆಳೆದೀತು ಎಂಬ ಸಂಶೋಧನೆ ನಡೆಸಿದರು. ತಲೆ ಏಕೆ ಬೋಳಾಗುತ್ತದೆ ಎಂಬುದರ ಬಗ್ಗೆ ಬಹಳಷ್ಟು ತಾತ್ವಿಕ ಪ್ರತಿಪಾದನೆಗಳು ಬಂದಿವೆಯಾದರೆ ಆ ಎಲ್ಲ ತತ್ವಗಳು ಒಂದಕ್ಕೊಂದು ತದ್ವಿರುದ್ಧ ವಿದ್ದು ಒಂದೂ ತತ್ವ ಬೋಳುತಲೆಯವರಿಗೆ ಕೂದಲನ್ನು ಕೊಡಿಸುವ ಪರಿಹಾರ ನೀಡಿಲಿಲ್ಲ. ಡಾ|| ಕಾರ್ಸೂರರವರು ತಮ್ಮ ಶಸ್ತ್ರಕ್ರಿಯೆಯ ಪರಿಹಾರ ನೀಡುವ ಮೊದಲು ಬೇರೆ ತತ್ವಯಿತ್ತು. ತಲೆಯ ನೆತ್ತಿಯ ಚರ್ಮದ ಕೆಳಗಿನ ಭಾಗದ ಶುದ್ಧ ರಕ್ತವಾಹಿನಿಯಲ್ಲಿ ರಕ್ತ ಹರಿಯುವುದು ಕಡಿಮೆಯಾದರೆ ಕೂದಲು ಬೀಳುತ್ತದೆ ಎಂಬ ನಂಬಿಕೆಯಿತ್ತು. ಡಾ|| ಕಾರ್ಸೂರರವರು ತಮ್ಮ ಸಂಶೋಧನೆಯ ಫಲವಾಗಿ ಮಲಿನ ರಕ್ತನಾಳವೇ ಕೂದಲಿನ ಬೀಳುವಿಕೆಗೆ ಕಾರಣ; ಶುದ್ಧರಕ್ತನಾಳವಲ್ಲ ಎಂದು ಪ್ರತಿಪಾದಿಸಿದ. ಇವನ ವಿಶ್ಲೇಷಣೆಯಂತೆ ಈ ಮಲಿನ ನಾಳಗಳ ಮೇಲಿನ ಅಂಗಾಂಶದ ಮೇಲೆ ಎಳೆಗಳ ಪೊರೆ ಬೆಳೆದಿರುತ್ತದೆ. ಇದರಿಂದ ರಕ್ತ ಪ್ರಸಾರ ಕಡಿಮೆಯಾಗಿ ಈ ಭಾಗದ ಕೂದಲು ಬೀಳಲು ಪ್ರಾರಂಭವಾಗುತ್ತದೆ. ಶಸ್ತ್ರ ಚಿಕಿತ್ಸೆಯಿಂದ ಈ ಪೊರೆಯನ್ನು ಸಡಿಲಗೊಳಿಸಿದರೆ ರಕ್ತ ಪ್ರಸಾರ ಸರಿಯಾದ ಪ್ರಮಾಣದಲ್ಲಿ ನಡೆದು ಕೂದಲಿನ ಬೆಳವಣಿಗೆಗೆ ಅಣಿಮಾಡಿಕೊಡುತ್ತದೆ.

## ಸುಳ್ಳು–ಮೀಮಾಂಸೆ

ಸುಳ್ಳು–ನಿಜಗಳ ಸಮ್ಮಿಶ್ರದ ಜಂಜಾಟದಲ್ಲಿ ಸುಳ್ಳು ಯಾವದು ನಿಜಯಾವುದು ಎಂದು ಅರಿಯುವುದೇ ಒಂದು ದೊಡ್ಡ ಸಮಸ್ಯೆಯಾಗಿದೆ ಈಗಿನ ವಾತಾವರಣದಲ್ಲಿ. ಆದರೆ ಯಾರು ಎಷ್ಟರ ಮಟ್ಟಿಗೆ ಸುಳ್ಳು ಹೇಳುತ್ತಾರೆ, ಎಂಬುದು ಅಮೇರಿಕದ ಓರ್ವ ಸಂಶೋಧಕನಿಗೆ ಸಂಶೋಧನಾ ವಸ್ತುವಾಯಿತು. ನಿಜ ಹೊರಬಿತ್ತು–ಸುಳ್ಳಿನ ಬಗ್ಗೆ.

ಅಮೆರಿಕೆಯ ಡಾ|| ನಾತನ್ ಮಾಸರ್‌ರವರು ಎಂಟು ವರ್ಷಗಳ ಕಾಲ ಸುಳ್ಳು–ನಿಜಗಳನ್ನು ವರೆಗೆ ಹಚ್ಚುವ ಸಂಶೋಧನೆಯನ್ನೇ ಮಾಡಿದರು. ಅವರು ಅನೇಕ ಸ್ತ್ರೀ–ಪುರುಷರನ್ನು ೧೮–೨೫, ೩೦–೫೦ ಹಾಗೂ ೫೦ ಮೀರಿದವರು ಎಂಬ ಮೂರು ವಯಸ್ಸಿನ ಗುಂಪುಗಳಲ್ಲಿ ವಿಭಜಿಸಿದ್ದರು. ಅದರಲ್ಲಿ ೩೦–೫೦ ವಯಸ್ಸಿನ ಗುಂಪಿಗೆ ಸೇರಿದವರು, ಅದರಲ್ಲಿ ಹೆಚ್ಚಾಗಿ ಪುರುಷರು ಸುಳ್ಳು ಹೇಳುತ್ತಾರೆಂಬುದು ಅವರ ನಿರ್ಣಯ. ಆದರೂ ಸಾಮಾನ್ಯವಾಗಿ ವಿಧುರರು ಹಾಗೂ ವಿಧವೆಯರೂ ಇತರರಿಗಿಂತ ಹೆಚ್ಚಾಗಿ ಕ್ಷಣಕ್ಷಣಕ್ಕೂ ಸುಳ್ಳು ಹೇಳುವದನ್ನು ಅವರು ಗಮನಿಸಿದ್ದಾರೆ. ಆದರೆ ಸ್ತ್ರೀಯರು ಪುರುಷರಿಗಿಂತ ಕಡಿಮೆ ಸಲ ಸುಳ್ಳುಹೇಳಿದರೂ ಅವರ ಸುಳ್ಳುಗಳು ದೊಡ್ಡ ಪ್ರಮಾಣದ್ದು. ಎಂದು ಡಾ|| ಮಾಸರ್ ರವರ ಪ್ರತಿಪಾದನೆ.

ಭಾರತ ಧರ್ಮನು ಆಗಿಹೋದ ರಾಷ್ಟ್ರ. ಇಲ್ಲಿಯ 'ಸುಳ್ಳು' ಮೀಮಾಂಸದ ಸಂಶೋಧನೆಗಳ ವರದಿ ಇನ್ನೂ ಬಂದಂತೆ ತೋರುವದಿಲ್ಲ.

---

"ವಸ್ತುಸ್ಥಿತಿ ಕೆಲವೊಮ್ಮೆ ಕಾಲ್ಪನಿಕತೆಗಿಂತಲೂ ವಿಚಿತ್ರವಾಗಿರುತ್ತದೆ"

ಮಾಧವಿ

ಮಾಧವಿ

# ವ ನ ಮಾ ನ ವ – ೨

ಡಾ|| ದ. ರಾ. ಬೇಂದ್ರೆ, ಎಂ.ಎ. ಡಿ.ಲಿಟ್.

## ನ ವ ಮ ದ ಶ ಮ
### ( ಗುರು–ಶಿಷ್ಯ )

[ ವರಕವಿ ಡಾ|| ದ. ರಾ. ಬೇಂದ್ರೆಯವರು ರೂಪಿಸಿರುವ 'ವನ ಮಾನವ' ನ ಬಗ್ಗೆ ಪ್ರಥಮ ಲೇಖನ 'ಮಾಧವಿ' ಯ ಕಳೆದ ತಿಂಗಳಿನ ಸಂಚಿಕೆಯಲ್ಲಿ ಪ್ರಕಟಿಸಲಾಗಿತ್ತು. ಇದರ ಎರಡನೆಯ ಲೇಖನ 'ನವಮುದಶಮ'. ಈ ಲೇಖನದಲ್ಲಿ ವರಕವಿಗಳು ಮಾನವನು ನವಮಾನವನಾಗಿ ಹೇಗೆ ಶಿಷ್ಯತ್ವವನ್ನು ಹೊಂದಬಹುದು ಎಂಬುದರ ಕ್ರಿಯೆಯನ್ನು, ಆ ನವಮ ಸ್ಥಾನವನ್ನು ಪಡೆಯುವ ಗುಟ್ಟನ್ನು ವಿವರಿಸಿದ್ದಾರೆ.

— ಸಂ.]

ಮಾನವನು ತನ್ನ ನವತ್ವವನ್ನು ಅರಿತುಕೊಂಡು, ನವಮಾನವನಾಗಬೇಕಾದರೆ; ದಶಮದ ಆನಂದ ವನದಲ್ಲಿ ಇರುವ ಗುರು, ಶಿಷ್ಯನನ್ನು ಹತ್ತಿರ ಎಳೆದುಕೊಂಡು, ಅಧೋಮುಖನಾಗಬೇಡ ಎಂದು ಎಚ್ಚರಿಸಿ, ಅವನ ಹೃದಯವನ್ನೇ ಮಾಧ್ಯಮವನ್ನಾಗಿ ಮಾಡಿಕೊಂಡು, ಉತ್ತಮಿಕೆಗಾಗಿ ಉನ್ಮುಖನನ್ನಾಗಿ ಮಾಡುತ್ತಾನೆ.

ಮಾನವನಿಗೆ ದ್ವಿಧಾ ವೃತ್ತಿ ಸಹಜ. ಅದರಷ್ಟೇ ಸಮತೋಲವಿರುವುದೂ ಸಹಜವೇ. ಎರಡು ಕಡೆ ಎಳೆತವಿರುವಾಗ, ತನ್ನ ತೋಲ ಕಳೆದುಕೊಳ್ಳದೆ, ಧೀರನಂತೆ ಸ್ಥಿರವಾಗಿರುವುದೇ ಸಮತೋಲ. ನಾವು ಎಡ–ಬಲ ಎಂದು ಹೊಯ್ದಾಡಬಹುದು. ಹಿಂದೆ–ಮುಂದೆ ಎಂದು ಜಗ್ಗಾಡಬಹುದು. ಮೇಲೆ–ಕೆಳಗೆ ಎಂದು ಅಸ್ಥಿರರಾಗಬಹುದು. ಒಳಗೆ – ಹೊರಗೆ ಎಂದು ಧೃತಿಗೆಡಬಹುದು. ಈ ಎಂಟರ ಕುಸ್ತಿಯಲ್ಲಿ, ಒಂಬತ್ತನೆಯ ಸ್ಥಾನದಲ್ಲಿ ನಿಂತು ತನ್ನತನ ಅರಿತುಕೊಳ್ಳಲು ದಶಮದಲ್ಲಿರುವ ಗುರುವನ್ನು ಸಮೀಪಿಸುವುದೇ ಉಪನಯನ. ಆಗ ಗುರು, ಕಾಲಿಗೆ ಬಿದ್ದ ಶಿಷ್ಯನನ್ನು ಅವನ ಜುಂಡಿಕೆ (ಶಿಖಾ) ಹಿಡಿದು ಎತ್ತುತ್ತಾನೆ; ಆಶೀರ್ವದಿಸುತ್ತಾನೆ. ಅವನ ಕ್ಷೇತ್ರ ಸಹಸ್ರದಳ

ದಲ್ಲಿದೆ ಎಂಬ ಎಚ್ಚರಕ್ಕೆ ಹಂತ ಹಂತದಿಂದ ತರುತ್ತಾನೆ.

ಮಾನವನಿಗೆ ತ್ರಿಗುಣ ತೀರ ಸ್ವಾಭಾವಿಕ. ಆಲಸ್ಯ ಅವನಿಗೆ ಅನುಕೂಲ. ಪ್ರತಿಕೂಲವನ್ನು ಸ್ವಾನುಕೂಲವನ್ನಾಗಿ ಮಾಡಿಕೊಳ್ಳುವ ಸತ್ತ್ವ ಜಾಗೃತವಾಗಬೇಕಾದರೆ, ಅವರಿಗ ರಸದಲ್ಲಿ ಹರಿದಾಟ ಬೇಕು. ಎಚ್ಚರ, ನಿದ್ದೆಗಳಲ್ಲಿ, ಅವನ ಕನಸು ಮನಸ್ಸಿನಲ್ಲಿ ಪಂಚೇಂದ್ರಿಯ ಪ್ರಪಂಚ ಹಬ್ಬಿಕೊಂಡಿರುತ್ತದೆ. ಅವುಗಳ ಓಲಗದಲ್ಲಿ ಮನ, ಬುದ್ಧಿ, ಅಹಂಕಾರ, ಚಿತ್ತ ಇವು ಓಲಗ ಮಾಡುತ್ತವೆ. ಚಿತ್ತದಾಚೆಯ ಚೈತನ್ಯ ಪ್ರಭುವಿನ ಎಚ್ಚರ ಅವನಿಗೆ ಸಾಮಾನ್ಯವಾಗಿ ಇರುವದಿಲ್ಲ. ಬುದ್ಧಿ ಭಾವಗಳ ಜಂಜಾಟದಲ್ಲಿ ಬಳಲಿದ ಅವನು ಶಮ ಪ್ರಾಪ್ತಿಗಾಗಿ ಅಜ್ಞಾನದ ನಿದ್ದೆಗೆ ಶರಣು ಹೋಗುತ್ತಾನೆ. ನಿದ್ದೆ ಇಲ್ಲದ ನಾಕ–ಅವನಿಗೆ ಗೊತ್ತಿಲ್ಲ. ಅವನಿಗೆ ಅದರ ಮಂತ್ರ ಕಲಿಸಬೇಕಾಗುತ್ತದೆ. ಆ ನಾಮದ ಜಪ, ಧ್ಯಾನ ಅವನಿಗೆ ಸಹಜವಾಗಬೇಕು. ಇದು ಗುರು ಶಿಷ್ಯ ಸಂಬಂಧ. ಈ ಗುರುತ್ವ ಕಾಣದಿದ್ದರೆ, ಶಿಷ್ಯ ಲಘು. ಅಲ್ಲಿಯವರೆಗೆ ಶಮ ಕಿಂಚಿತ್ ಉಪಶಮ. ಮತ್ತೆಮತ್ತೆ ಅಶಮ; ಮತ್ತೆ ಮತ್ತೆ ಉಪಶಮ. ಜೀವನದಲ್ಲಿ ಶಾಂತನಾದವನು ಕಲೆಗಳಿಂದ ಉಪಶಾಂತಿ ಪಡೆಯಲು ಬಯಸುತ್ತಾನೆ. ಆದರೆ ಈ ರುಚಿ ವಿಷಯ ಪ್ರಪಂಚ ಭೋಗಕ್ಕೇ ವ್ಯಂಜಕ ಪದಾರ್ಥ. ಇದು ನಿಜ ರಸವಲ್ಲ. ದಶಮದಲ್ಲಿ ನಿಜಕ್ಕೆ ಆರಂಭ. ದಶಾರದಿಂದ ಶತಾರಕ್ಕೂ, ಶತಾರದಿಂದ ಸಹಸ್ರಾರಕ್ಕೂ ಹೆಜ್ಜೆ ಇಕ್ಕುವ ತ್ರಿವಿಕ್ರಮತ್ವವನ್ನು ಬಟುವಾಮನು ಮಾಡಬೇಕು.



[1]ಷಡ್ರಿಪುಗಳಿಗೂ, ಸಪ್ತ ವ್ಯಸನಗಳಿಗೂ ಅಷ್ಟಮದ[2]ಗಳಿಗೂ ಎಂಥೆಂಥ ರಾಜಮಹಾ ರಾಜರೂ ದಾಸರಾಗಿರುತ್ತಾರೆ. ಕ್ಷುದ್ರ ದೇವತೆಗಳು ಇದಕ್ಕೆ ಹೊರತಲ್ಲ. ನವ ಮಾನವನು ಇದನ್ನು ದಾಟಿ ಹೆಜ್ಜೆ ಹಾಕಬೇಕಾಗಿದೆ. ಈ ಸ್ಥಾಯಿಯಲ್ಲಿ ಒಂದು ಆಶ್ರಮವನ್ನೊ, ಲೋಕವನ್ನೂ ಕಟ್ಟಬೇಕಾಗಿದೆ. ಆಗ ಈಗಿನ ಮಾನವನ ಉದ್ಧಾರವಾದೀತು.

ನಮ್ಮ ಸಭ್ಯದ ಸಾಹಿತ್ಯಶಾಸ್ತ್ರ ನಾಲ್ಕು ಸುಖಸ್ಥಾಯಿ, ನಾಲ್ಕು ದುಃಖ ಸ್ಥಾಯಿಗಳನ್ನು ಮಾಡಿಕೊಂಡಿದೆ. ಆ ಸುಖ ದುಃಖದಲ್ಲಿ ರುಚಿ ಬೆಳೆಸಿಕೊಂಡಿದೆ. ಆದರೆ ಬುದ್ಧಿ, ಭಾವಯುಕ್ತವಾದ ಶಮದ ಸುಖವನ್ನು ಅದು ಇನ್ನೂ ನೆಲೆ ಮಾಡಿಕೊಂಡಿಲ್ಲ. ಅಷ್ಟಭಾವಗಳ ಪಂಜರದಲ್ಲಿ ನವಮದ ಸತ್ತ್ವ ಪರೀಕ್ಷೆ ನಡೆದಿದೆ. ಶ-ಮ-ದ-ನಾದ ದಶಮ ಗುರು ತನ್ನ ಶಿಷ್ಯನಿಗೆ ರಹಸ್ಯ ಹೇಳಿ ಅವನ ಹೃದಯಸ್ಥ ಪುಂಡರೀಕವನ್ನು ಮೇಲ್ಮುಖ ಮಾಡಬೇಕಾಗಿದೆ. ಪ್ರತಿಯೊಬ್ಬನ ಚೈತನ ಪ್ರಭುವು ಅವನ ಸೀಮೊಂತಭೇದಿಸಿ ಹೃದಯದ ನೆಲೆಗೆ ಇಳಿಯುತ್ತಾನೆ. ಸ್ವತಃ ಶಿಷ್ಯನು ಮಾತ್ರ ಕೆಳಗಿನ ಎರಡು ಚಕ್ರಗಳ ಒದ್ದಾಟದಲ್ಲಿಯೇ ತನ್ನ ಮೂರನೆಯ ಚಕ್ರದ ತೇಜಸ್ಸನ್ನು ವ್ಯಯಗೊಳಿಸುತ್ತಿದ್ದಾನೆ. ಅದಕ್ಕೆ ಪ್ರಾಣ ನೀಡುವುದೆ. ಹೃದಯದ ಕೆಲಸವಾಗಿ ಬಿಟ್ಟಿದೆ. ಅದರ ಮಂತ್ರ ಭ್ರೂಮಧ್ಯಕ್ಕೆ ಏರವುದೇ ಇಲ್ಲ. ಗುರುವಿನ ಆದೇಶ ಅವನನ್ನು ಸ್ವಕ್ಷೇತ್ರಕ್ಕೆ ಎತ್ತಬೇಕು. ಶಿಷ್ಯನಿಗೆ ಸ್ವ-ಕ್ಷೇತ್ರಜ್ಞಾನ ಅಲ್ಲದೆ, ಸ್ವಾತ್ಮಜ್ಞಾನವೂ ಆಗಿ ಅವನು ಶಾಶ್ವತ ಜ್ಞೇಯದ ಭಕ್ತನಾಗಬೇಕು. ಇದು ಗುರು ಮಾಡುವ ಭಕ್ತ ಹಿತ. ಈ ಹಾದಿಯಲ್ಲಿ ನವಮಾನವ ಹೆಜ್ಜೆ ಇಕ್ಕಬೇಕು.

'ಅಲ್ಪ ಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋಭಯಾತ್.'

• • •

1 ಷಡ್ರಿಪು : ಕಾಮ, ಕ್ರೋಧ, ಮೋಹ, ಲೋಭ, ಮದ, ಮತ್ಸರ.
ಸಪ್ತವ್ಯಸನ : ದ್ಯೂತ, ಮಾಂಸ, ಸುರಾ, ವೇಶ್ಯಾ, ದಿವಾನಿದ್ರಾ, ಪರನಿಂದಾ, ಮೃಗಯಾ.

2 ಅಷ್ಟಮದ : ಜ್ಞಾನಮದ, ಪೂಜಾಮದ, ಶರೀರಮದ, ಕುಲಮದ, ಜಾತಿಮದ, ತಪೋಮದ, ಧನಮದ, ಬಲಮದ.

'ಮಾಧವಿ'ಯು ಸಮಗ್ರ ವಿಶ್ವ ದರ್ಶನಕ್ಕೆ ಸಹಾಯಕವಾಗ ಬಲ್ಲ ಮಾಸ ಪತ್ರಿಕೆ. ಎಂದು ಬಿರುದು ತೊಟ್ಟು ಹೊರಟಿದೆ. ಆಗಸ್ಟ ೧೯೬೭ ರ ಈ ಮೊದಲು ಸಂಚಿಕೆ, ತನ್ನ ವಿಷಯ ವೈವಿಧ್ಯದಿಂದ, ಗುರಿಯ ಎಚ್ಚರ ಇದಕ್ಕಿದೆ ಎಂದು ಪ್ರಕಟಿಸಿದೆ. ಲೇಖನಗಳು ಅತಿವಿಸ್ತಾರ, ಅತಿ ಸಂಕೋಚ ಹೊಂದದೆ ಉಚಿತ ಪ್ರಮಾಣದಲ್ಲಿವೆ. ಚಿತ್ರ ವೈಖರಿಯಲ್ಲಿಯೂ ಅನೇಕ ವಿಧಗಳಿವೆ. ಲೇಖಕರ ಬಳಗದ ಸಹಕಾರದಿಂದ 'ಮಾಧವಿ ಯಶಸ್ವಿಯಾಗಿ ಪರಿಣಾಮಿಸುವದೆಂದು ನಾನು ಗಂಬಿದ್ದೇನೆ.

—ದ. ರಾ. ಬೇಂದ್ರೆ

"ತಮ್ಮ ಸತತ ಪ್ರಯತ್ನದಿಂದ ಕನ್ನಡಿಗರಲ್ಲಿ ಸಾಹಿತ್ಯಾಭೀಮಾನವನ್ನು ತುಂಬಿ ಅವರನ್ನು ಆನಂದ ಸಾಗರದಲ್ಲಿ ತೇಲಿಸಲು ಹೊರಟ 'ಮಾಧವಿ'ಯನ್ನು ಓದಿದೆ. ಹೃದಯ ತುಂಬಿ ಬಂತು. ವಿಶೇಷ ಪುರವಣಿ 'ಆಗಷ್ಟ-೧೫' ತುಂಬಾ ಉತ್ತಮವಾಗಿದೆ. ಕನ್ನಡಿಗರಿಗಾಗಿ ಉತ್ತಮ ಮಾಸಿಕವನ್ನು ಒದಗಿಸಲು ನೀವು ಮಾಡಿದ ಕಾರ್ಯ ನಿಜನಾಗಿಯೂ ಆದರ್ಶಪ್ರಾಯವಾಗಿದೆ. 'ಮಾಧವಿ'ಯು ಕನ್ನಡಿಗರ ಕನ್ಮಣಿಗಳನ್ನು ಆನಂದಿಸಲೆಂದು ಹಾರೈಸುವೆ"

—ಶ್ರೀ ಕೃಷ್ಣ ಜೋಶಿ

ಬಹು ದಿನಗಳ ಕನ್ನಡಿಗರ ಆಸೆ ಪೂರೈಸಿದೆ. ದೀಪ ಲಕ್ಷ್ಮಿಯ ರೂಪದಲ್ಲಿ ಪ್ರಕಟವಾದ ಮಾಧವಿ ಕನ್ನಡದ ಮನೆಮನಗಳೆಲ್ಲವನ್ನು ತುಂಬಲಿ.

—ಆರ್. ಎಚ್. ಫಡಕೆ

ಆಗಸ್ಟ್, ಕನ್ನಡ ಸಾಹಿತ್ಯಭಿಮಾನಗಳಿಗೆ ಆನಂದದ ದಿನ. 'ಜಾತಕಪಕ್ಷಿ ಮಳೆಯ ದಾರಿಯನ್ನು ಕಾಯುತ್ತಿದ್ದಂತೆ ಕನ್ನಡಿಗರು 'ಮಾಧವಿ'ಯ ದಾರಿಕಾಯ್ದು ಕಾಯ್ದು ಅವಳನ್ನು ಪಡೆದು ಕೊಂಡ ಪವಿತ್ರ ದಿನ. ಕನ್ನಡಿಗರಲ್ಲಿ ದೇಶಾಭಿಮಾನ ಸಾಹಿತ್ಯಭಿಮಾನಗಳನ್ನು 'ಮಾಧವಿ' ಕನ್ನಡಿಗರಲ್ಲಿ ತುಂಬುತ್ತಾ, ಕನ್ನಡಿಗರ ಪ್ರೀತಿಯ ಮಗಳಾಗಿ ನಲಿದಾಡಲಿ"

—ಶ್ರೀ ಸುದರ್ಶನ ದೇಶಪಾಂಡೆ

ಮಾಧವಿ ಕೈಸೇರಿತು. ಪ್ರಕಾಶನದ ಸಾಹಸಕ್ಕೆ ಧನ್ಯವಾದಗಳು. ಬಹುದಿನಗಳಿಂದ ಹುದುಗಿದ್ದ ಆಶೆ ಮೈದೋರಿದಂತಿದೆ. ಕನ್ನಡ ರಾಜ್ಯದ ಪ್ರತಿ ಮನೆ ಮನೆಗಳಲ್ಲಿಯೂ ಮಾಧವಿ ಬೆಳಗಲಿ.

—ಎಸ್. ಕೆ. ನವರತ್ನ
ಎಂ.ಎ

ಆಂಗ್ಲ ಸಾಹಿತಿಗಳ ದೃಷ್ಟಿ






ಮಹಾನುಭಾವರು ಕಂಡ

# ಹೆಣ್ಣಿನ ಮುಖಗಳು

ಹೆಣ್ಣು ಸ್ವಾಭಾವಿಕವಾಗಿ ಮಹತ್ವಾಕಾಂಕ್ಷಿ — **ಮಾರ್ಲೋ**

* * *

ಮಹಾನುಭಾವರು ಮುದುಕರೇ ಇರಲಿ ಯುವಕರೇ ಇರಲಿ ಎಲ್ಲಾ ಸ್ತ್ರೀಯರಿಗೂ ಅವರ ಮೇಲೆ ಪ್ರೀತಿ. — **ರಾಬರ್ಟ್ ಬ್ರೌನಿಂಗ್**

* * *

ಸ್ತ್ರೀ ನಮ್ಮ ಸಂಗಾತಿ. ಆಕೆಯನ್ನು ನಾವು ತಿರಸ್ಕರಿಸಲಿ–ಧಿಕ್ಕರಿಸಲಿ ಒಂದು ಮಾತು ನಿಜ : ಆಕೆ ಇದ್ದರೆ ಬಾಳಬಲ್ಲೆವು, ಇಲ್ಲದಿದ್ದರೆ ಬಾಳಲಾರೆವು.

— **ಎಫ್. ರೆನಾಲ್ಡ್ಸ**

* * *

ಪುರುಷರಲ್ಲಿ ಪರಸ್ಪರ ವ್ಯತ್ಯಾಸ ಬಂದರೆ ಅದರ ಅಂತರ ಭೂ–ಸ್ವರ್ಗಗಳಷ್ಟು. ಆದರೆ, ಸ್ತ್ರೀಯರಲ್ಲಿ ಪರಸ್ಪರ ವ್ಯತ್ಯಾಸ ಭಾವದ ಅಂತರ ಸ್ವರ್ಗ–ಪಾತಾಳಗಳಷ್ಟು.

— **ಟೆನಿಸನ್**

* * *

ಭಾಗ್ಯಶಾಲೀ ರಾಷ್ಟ್ರಗಳಂತೆ ಭಾಗ್ಯಶಾಲೀ ಸ್ತ್ರೀಯರೂ ಚರಿತ್ರ್ರರಹಿತರಾಗಿರುತ್ತಾರೆ. — **ಜಾರ್ಜ ಈಲಿಯಟ್**

ಪುರುಷರು ಅನೇಕ ದೋಷಗಳನ್ನು ಪಡೆದವರು. ಆದರೆ, ಪಾಪ ! ಸ್ತ್ರೀಯರಲ್ಲಿ ಎರಡೇ ದೋಷಗಳಿವೆ: ಒಳ್ಳೆಯದನ್ನು ಎಂದೂ ಹೇಳುವುದಿಲ್ಲ; ಸರಿಯಾದದ್ದನ್ನು ಎಂದೂ ಮಾಡುವುದಿಲ್ಲ. — ಅನಾಮಿಕ

* * *

ಪುರುಷರು ಸ್ತ್ರೀಯರಿಗಿಂತ ಹೆಚ್ಚು ಮಾತನಾಡಬಲ್ಲರು; ಆದರೆ ಸ್ತ್ರೀಯರು ಬಹಳ ಪ್ರಭಾವೀಯುತವಾಗಿ ಮನ ಒಲಿಸಿಕೊಳ್ಳಬಲ್ಲರು. — ರಾನ್ ಢಾಲ್ಫ್

* * *

ಅನೇಕ ಸ್ತ್ರೀಯರು ಶೀಲವನ್ನೇ ಹೊಂದಿರುವುದಿಲ್ಲ. — ಪೋಪ್

* * *

ಜಗತ್ತಿನ ಪ್ರಾರಂಭದಿಂದ ಅನೇಕ ಸ್ತ್ರೀಯರಿಗೆ ಟೊಂಕ ಸಣ್ಣದಾಗಿಯೇ ಇರುತ್ತದೆ, ನಿಜ. ಆದರೆ, ಅವರ ಆಕಾಂಕ್ಷೆಗಳ ವಿಶಾಲತೆ ಮೈಲುಗಟ್ಟಲೆ ಹಬ್ಬಿರುತ್ತವೆ. — ಟೌರ್ನರ್

* * *

ಸ್ತ್ರೀಯರು ಬಹಳ ಸಣ್ಣ ಆತ್ಮವನ್ನು ಹೊಂದಿರುತ್ತಾರೆ ಎಂದು ಕೆಲವರು ಹೇಳಿದರೆ, ಅವರಿಗೆ ಆತ್ಮ ಎಲ್ಲಿಯದು ? ಎಂದು ಹಲವರು ಪ್ರಶ್ನಿಸುತ್ತಾರೆ. ಕೆಲವರು ಅವರಿಗೆ ಆತ್ಮವಿದ್ದರೇನಾಯಿತು. ಅದು ಊನಗೊಂಡಿರುತ್ತದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಆದರೆ, ಅವರಿಗೆ ಸಂಕಲ್ಪಸಿಧ್ಧಿ ಪರಿಪೂರ್ಣವಾಗಿದೆ ಎಂಬದು ನಿರ್ವಿವಾದ. — ಬಟ್ಲೆರ್

* * *

ಸ್ತ್ರೀಯರು ದೇವತೆಗಳೇನೋ ನಿಜ, ಆದರೆ ವಿವಾಹವು ಅವರನ್ನು ದೆವ್ವಗಳನ್ನಾಗಿಸುತ್ತದೆ. — ಬೈರೆನ್

* * *

ಯುದ್ಧ ಮಾಡುವುದು ಸ್ತ್ರೀಯರ ಸಹಜಗುಣ. ಕನಿಷ್ಟಪಕ್ಷ ಅವರು ಇತರ ಸ್ತ್ರೀಯರೊಡನೆಯಾದರೂ ಯುದ್ಧ ನಡೆಸೇಯಿರುತ್ತಾರೆ. — ಸಿಡ್ನಿ ಸ್ಮಿತ್

* * *

ಹೆಣ್ಣೆಲ್ಲದಿದ್ದಿರೆ ಗಂಡು ದೇವರಂತೆ ಜೀವಿಸಬಹುದಿತ್ತೇನೋ? — ಡೆಕ್ಕರ್

* * *

ಶಬ್ದಗಳು ಹೆಣ್ಣಾದರೆ, ಕೃತಿಗಳು ಗಂಡು. — ಹರ್ಬರ್ಟ್

# ‘ಸಾಯೋ ಆಟ’

“ ವಿವೇಕ ಇರತದೆ–ಇರೋದಿಲ್ಲ. ವಿವೇಕಿದ್ದವ ಸಾವನ್ನೂ ಗೆಲ್ಲಬಲ್ಲ. ವಿವೇಕ ಇಲ್ಲದವ ಸಾವಿನ-ಜೋಡಿ ಸರಸಾಟ ಆಡ್ತಾನೆ.”

—ಇದೇ ಇದರ ಸೂತ್ರ



ಸಾಯೋತನಕ ಆಟ ಆಡೋರು, ಆಟಾ ಆಡೋಕೆ ಸಾಯೋರು ಸಮಾಜದಲ್ಲಿ ಚಿರಪರಿಚಿತರು. ಜೀವನವೇ ಒಂದು ಕ್ರಿಡಾ ರಂಗವೆಂದು ಭಾವಿಸಿ ಉತ್ತಮ ಕ್ರಿಡಾಪಟುಗಳಾಗಿ, ಚಿರಸ್ಮರಣೀಯ ರಾಗಬೇಕೆನ್ನುವ, ಕ್ರೀಡಾಸಾಹಸಿಗಳು ‘ಸಾಯೋ ಆಟಕ್ಕೆ’ ಬಿದ್ರೆ, ಜೀವನ ಇರೋದು ಸಾಯೋಕೋ, ಅಥವಾ ಸಾಯೋದು ಜೀವನ ಸಾರ್ಥಕತೆಗೋ ಅನ್ನೋದು ಬಿಡಿಸಲಾರದ ಸಮಸ್ಯೆಯೇ ಅಗುತ್ತದೆ. ಕೆಲವರು ಸಾಯೋಕು ಧೈರ್ಯ ಬೇಕು. ಅನ್ನೋ ತತ್ವ ಪ್ರತಿಪಾದಿಸಿದರೆ, ಮತ್ತೆ ಕೆಲವರು ಸಾಯೋದೇನು ಮಹಾ, ಹೇಡಿನೂ ಸಾಯಬಲ್ಲ. ಆದರೆ ಸಾವಿನ ದವಡೆಯಲ್ಲಿ ಬದುಕೋದ್ರಲ್ಲಿದೆ ಸಾಮರ್ಥ್ಯ

ಅಂತ ಪ್ರತಿಪಾದಿಸುತ್ತಾರೆ. ಏನು 'ಸಾವಿನ ವೇದಾಂತ' ಇದು? ಸತ್‌ವೇದಾಂತನೋ ಸತ್ತವೇದಾಂತಾನೋ? ಅಂತು ಸಾವಿಗೂ ವೇದಾಂತಕ್ಕೂ ಗಂಟು. ಅವೆರಡೂ ಹಳೆಯ ಸಂಬಂಧಿಗಳು. ನಮಗ್ಯಾಕೆ ಅವುಗಳೊಡನೆ ಸೆಣಸಾಟ?

ಸಾಯೋದು ಹುಟ್ಟೋಕೋ ಅಥವಾ ಹುಟ್ಟಿದ್ದು ಸಾಯೋಕೋ ಅನ್ನೋದ್ವಂದ್ವ ಒಂದು ಕಡೆ ಆದರೆ ಹುಟ್ಟು ಸತ್ರೇ ಏನ್ಪ್ರಯೋಜನ? ಸತ್ತು ಬದುಕ ಬೇಕು ಅಂತ ಒಂದು ಪಂಗಡ ಹೇಳುತ್ತೆ. ಸತ್ತುಕೋತಾ ಬದುಕ್ತಾ ಇರೋ ಈ ಕಾಲ್ದಲ್ಲಿ ಸತ್ತು-ಬದುಕೋಕೆ ಹ್ಯಾಗೆ ಸಾಧ್ಯ ಅಂತ ಕೆಲವರ ಅಭಿಮತ. ಸಾವು-ಬದುಕುಗಳ ಸಮಸ್ಯೆ ಹೀಗಿರೋವಾಗ ಒಬ್ಬ ಸಾಯೋ ಧೈರ್ಯ ಮಾಡಿದ ಸಾಹಸಿಯ ಕತೆ ವಿವೇಚಿಸೋಣ.

ಜೀವನದಲ್ಲಿ ಬೇಸತ್ತು, ಅಪಜಯಗಳ ಸುರಿಮಳೆಯನ್ನೇ ಎದುರಿಸಿ ತಡೆಯಲಾರದೇ ಸೋತು ಒಬ್ಬ ಯುವಕ ಸಾಯುವ ಧೈರ್ಯ ಮಾಡಿದ. ರಾತ್ರಿ ೧೨ ಗಂಟೆಗೆ ಎದ್ದ. ಅಂದು ಅಮಾವಾಸ್ಯೆ. ದೀಪ ಹಚ್ಚಿದ. ತನ್ನ ಖೋಲಿಯಲ್ಲಿದ್ದ ಗೆಳೆಯ ನಿದ್ದೆ ಮಾಡಿದ್ದಾನೇ ಇಲ್ಲವೋ ಎಂದು ನೋಡಿದ. ಅವನು ಗೊರಕೆ ಹೊಡೆಯುವದನ್ನು ಕೇಳಿ ಅಲ್ಲಿಯ ಹಗ್ಗ ಒಂದು ಬಿಚ್ಚಿಕೊಂಡು ಜಂತಿಗೆ ಕಟ್ಟಿದ, ಕೊಕ್ಕಿಯನ್ನೂ ಹಾಕಿದ ಕುರ್ಚಿ ಮೇಲೆ ನಿಂತ, ತಂದೆ-ತಾಯಿಗಳನ್ನು ನೆನೆಸಿದ, ಗೆಳೆಯರನ್ನು ನೆನೆಸಿದ, ಹಗ್ಗವನ್ನು ಕುತ್ತಿಗೆಯ ಸುತ್ತು ಎಳೆದ. ಅದು ಬಹಳ ಒರಟಾದ ಹಗ್ಗ. ಕುತ್ತಿಗೆ ತರಿಯಿತು. ನೋವಾಯಿತು. ತಕ್ಷಣ ಗಂಟಿನ ಬಿಗಿ ಸಡಿಲು ಮಾಡಿದ, ಕುರ್ಚಿ ಮೇಲಿಂದ ಇಳಿದ – 'ಏನು ಹಾಳು ಹಣೇಬರಹ! "ಸಾಯಬೇಕು ಅಂದ್ರೂ ಸುಖವಾಗಿ ಸಾಯೋ ಹಾಗಿಲ್ಲ?" ಎಂದುಕೊಂಡು ಅವನಿಗ್ನೇಕೋ ನೇಣು ಹಾಕಿಕೊಳ್ಳೋದು ಸಮತೋಚಲಿಲ್ಲ: ಮತ್ತೇನು ಮಾಡೋದು. ...........ಸಮಸ್ಯೆ. ವಿಷ ನುಂಗಿ ಸಾಯೋಣವೆಂದರೆ ಅಷ್ಟು ಹೊತ್ತಿನಲ್ಲಿ ಅವನಿಗೆ ವಿಷವೆಲ್ಲಿ ಸಿಕ್ಕಬೇಕು? ತಕ್ಷಣ ಅವನಿಗ ಮತ್ತೊಂದು ಯೋಜನೆ ಬಂತು. ವಿಷ ತೆಗೆದುಕೊಂಡು ಸತ್ತರೆ ನಂತರ ಶಸ್ತ್ರಕ್ರಿಯೆ ಮಾಡುತ್ತಾರೆ. ಅಬ್ಬಾ ಹೊಟ್ಟೆಕೊಯ್ಯುತ್ತಾರೆ? ........ಬೇಡಪ್ಪಾ ಬೇಡ, ಎನಿಸಿತು.

ಸದ್ದಿಲ್ಲದೆ ಖೋಲಿ ಬಾಗಿಲನ್ನು ತೆಗೆದು ಹೊರಗೆ ಹೊರಟ. ರಾತ್ರಿ—ಕತ್ತಲೆ. ಚಳಿ ಬೇರೆ. ಅಂತೂ ಧೈರ್ಯ ಮಾಡಿ ಹೊರಟ. ಕೆರೆಯಲ್ಲಿ ಬೀಳೋಣವೆಂಬ ಭಾವನೆ ಅವನಿಗ ಬಂದಿತ್ತು. ಕೆರೆಯನ್ನು ಸೇರಿದ ಬಟ್ಟೆ ತೆಗೆದು ಧುಮುಕೋಣವೆಂದು ಒಮ್ಮೆ ತೋಚಿತು.ಸಾಯೋದೇ ಉಂಟಂತೆ ಬೆಚ್ಚಗೇ ಏಕೆ ಸಾಯಬಾರದು? ಅಂತ ಯೋಚಿಸಿದವನೇ ಎಲ್ಲಾ ವಸ್ತ್ರಗಳಿದ್ದಂತೆಯೇ ಧುಮುಕಲು ನಿರ್ಧರಿಸಿ ನೀರಿನ ಬಳಿಗೆ ಹೋದ. ನೀರನ್ನು ಕೈಯಲ್ಲಿ ಮೊದಲು ಮುಟ್ಟಿ ನೋಡಿದ. ಅದು ಕೊರೆಯುತ್ತಿ

ತ್ತು. ಅವನಿಗೆ ಬಹಳ ದುಃಖವಾಯಿತು. ಸ್ವಲ್ಪ ನಿಂತ. ಮತ್ತೆ ಘಟ್ಟಿಮನಸ್ಸು ಮಾಡಿ ಒಂದೇ ಕಾಲನ್ನು ನೀರಿನಲ್ಲಿಟ್ಟ. ಮೈಯಲ್ಲ 'ಜುಂ' ಎಂದಿತು. ಚಳಿಗೆ-ತಂಡಿಗೆ ನಡುಗಿ ದಂತಾಯಿತು. ತಕ್ಷಣ ಕಾಲನ್ನು ಹೊರಗೆ ತೆಗೆದ. ಕಟ್ಟೆಯ ಮೇಲೆ ಕುಳಿತು, 'ಸಾಯೋಣಾ ಅಂದ್ರೆ ಬಿಸಿನೀರಿನ ಕೆರೇ ಕೂಡಾಯಿಲ್ಲ. ಇದರಲ್ಲಿ ಬಿದ್ದು ಸಟೆದು ಹೊಗೋಕಿಂತ, ಸೂರ್ಯ ಬಂದ ಮೇಲೆ ಈ ನೀರು ಬೆಚ್ಚಗಾಗ್ಲಿ. ನಂತರ ಬಿದ್ದೇ ಬಿಡ್ತೇನೆ' ಅಂದು ಕೊಂಡ. ಹೊರಗಿನ ಚಳಿ ತಡೆಯಲಾಗದೆ ಅಲ್ಲಿಯೇ ಇದ್ದ ಒಂದು ಗುಡಿಗೆ ಹೊದ. ಯಾರೂ ಇರಲಿಲ್ಲ. ಒಂದು ಸಣ್ಣ ದೀಪ ಇತ್ತು. ಅಲ್ಲಿಯೇ ಇದ್ದ ಕೆಲವು ಕಟ್ಟಿಗೆ ತುಂಡು ಆರಿಸಿ ಕೊಂಡು ಬೆಂಕಿ ಮಾಡಿಕೊಂಡು ಬೆಂಕಿ ಕಾಯುತ್ತಾ ಬೆಚ್ಚಗೆ ಕುಳಿತ. ಕೆರೆಯ ನೀರು ಬೆಚ್ಚಗಾಗಲಿ ಎಂದು ಹಾಗೇ ಕುಳಿತಿದ್ದಾಗ ಅವನ ಗಳೆಯರ ನೆನಪು ಬಂತು. ಮನೆಯ ನೆನಪು ಬಂತು. ತನ್ನ ಸಣ್ಣತಂಗಿ ಒಂದು ದಿನ " ಅಣ್ಣ ನೀನೂ ನೆಹ್ರು ಆಗಣ್ಣ. ನನಗ ರಾಜಾ ಅಣ್ಣ ಇದ್ದಾನೆ ಅಂತ ಹೇಳ್ತೇನಿ ಎಲ್ಲಾರ್ಗೂ" ಅಂದ ಮಾತು ನೆನಪು ಬಂತು. ಎಚ್ಚತ್ತಂತೆ ಎದ್ದ. ಮತ್ತೆ ಕುಳಿತ. ಬೆಳಗಾದ ಮೇಲೆ ಹೋಗೋಣವೆಂದು. ರವಿ ಉದಯಿಸಿ ದಾಗ ಅವನು ಕೆರೆಕಡೆ ಹೋಗ ಲಿಲ್ಲ. ರೂಮಿನ ಕಡೆ ಮರಳಿ ಬಂದ; ಹೊಸ ಜೀವ ಪಡೆದು.



ಇದು ಒಂದು ತರದ ಸಾಯೋ ಆಟ. ನಾಟಕದಲ್ಲಿ Mono-actting ಇದ್ದ ಹಾಗೆ. Solitary ಏಕಪಾತ್ರ ಸಾಯೋ ಆಟ ಇದು ಇದರಲ್ಲಿ ಬದುಕಿದವನು ಸೋತ, ಸತ್ತವನು ಗೆದ್ದ ಎಂಬುದೇ ಸೂತ್ರ. ಇದಕ್ಕೆ ನ್ಯಾಯ ನಿರ್ಣಾಯಕ ರಾರೂ ಇಲ್ಲ. ಎಲ್ಲಾ ಸ್ವನಿರ್ಣಯ.

ಆದರೆ ದ್ವಿದಳ ಸಾಯೋ ಆಟ ಬಹಳ ರೋಮಾಂಚಕಾರಿ. ಇದಕ್ಕೆ ನಿಯಮಗಳು ಬಂಧನಗಳು ಬಹಳ. ನ್ಯಾಯನಿರ್ಣಾಯ ಕರು ಬಹಳ ಮಹತ್ವದ ಪಾತ್ರ ವಹಿಸು

ತ್ತಾರೆ. ಆದರೆ ಇದರ ಮೂಲ ಅನ್ಯಾಯ, ಹಿಸ್ನೆಲೆ ಅತ್ಯಾಚಾರ. ಇದರ ಫಲ ಮಾನ ವಾಹುತಿ. ಈ 'ಸಾಯೋ ಆಟಕ್ಕೆ' ಎರಡು ದಳಗಳು ಬೇಕು. ಆಯುಧಪಾಣಿಗಳಾಗಿ, ಕೈ ಕೈ, ಮೈ ಮೈ, ಯುದ್ಧ ಮಾಡೋದೇ ಇದರ ರೀತಿ-ನೀತಿ. ಹೆಚ್ಚು ಸತ್ತರೆ ಸೋಲು. ಹೆಚ್ಚು ಕೊಂದರೆ ಜಯ. ಭೂ-ತಳದ ಮೇಲೆ ಪ್ರಾರಂಭವಾಗೋ ಈ ಆಟ ರಕ್ತ ನದಿಯ ಮೇಲೆ ಮುಂದುವರಿಯು ತ್ತದೆ. ರಕ್ತ ಹರಿದಷ್ಟು ಕ್ರೀಡಾಪಟುಗಳಿಗೆ ಸ್ಫೂರ್ತಿ. ರಕ್ತಗರ್ಭಿತ ಮಸಣದಲ್ಲಿ ನಿರ್ಣಾಯಕ ಆಟ. ನಿರ್ಣಯವಾದಾಗ ಇದ್ದ ವರೇ ಗೆದ್ದವರು. ಸತ್ತವರೇ ಪಾರಾದವರು; ಓಡಿ ಹೋದವರೇ ಸೋತವರು ಆದರೆ ವೇದಾಂತದಲ್ಲಿ ಇಲ್ಲಿ ಸತ್ತವರೇ ಗೆದ್ದ ವರು. ಬದುಕಿದವರೇ ಸತ್ತವರು. ಈ ಕ್ಷೇತ್ರದಲ್ಲಿ ಕೆಲವು ತಜ್ಞರು–ಸಂಶೋಧ ಕರು ಯುದ್ಧದಲ್ಲಿ ಸದ್ದಾದರೆ, ಯುದ್ಧ ಮಾಡುವವರಿಗೆ ಹೆದರಿಕೆ ಆಗುತ್ತದೆ. ಬಂದೂಕುಗಳಿಗೆ silencer (ನಿಶ್ಶಬ್ದ ಯಂತ್ರ) ಹಚ್ಚಿ ಯುದ್ಧ ಮಾಡಬೇಕೆಂದು ಹೊಸ ತಂತ್ರ ಪ್ರತಿಪಾದಿಸಿದ್ದಾರೆ. (Victory of the Dead' and 'Dead Victory,; 'ಸತ್ತವರ ವಿಜಯ', 'ಸತ್ತ ವಿಜಯ' ಎಂದು ಎರಡು ವಿಧದ ನಿರ್ಣಯ ಗಳಿವೆ. ಎಲ್ಲಾ ಸತ್ತು ಹೋದ್ರೆ ಅದು Draw— ಸರಿಸಮ ಅಥವಾ ನೆಲಸಮ ಆಗುತ್ತದೆ.

ಇದರಂತೆಯೇ ಅನೇಕ ವಿಧದ ಸಾಯೋ ಆಟಗಳಿವೆ. ಮಾಸ್ ಮೆಸಾಕರ್, ಡ್ಯೂಯಲ್, ಸೂಯಿಸೈಡ, ಮರ್ಡರ್ ಮುಂತಾದ ಪ್ರಾಚೀನ ಪದ್ಧತಿಗಳೂ ಇವೆ. ರೆಲ್ವೆ ಆಕ್ಸಿಡೆಂಟ್ಸ್, ಏರ್‌ಕ್ರಾಷಸ್, ಡಿಸ್ಟರ್ಬನ್ಸಸ್, ಪೋಲೀಸ್ ಅಟ್ರಾಸಿಟೀಸ್, ಮುಂತಾದ ನವೀನ ವಿಧದ ಸಾಯೋ ಆಟಗಳೂ' ಇವೆ.

ಸಾಯೋ ಆಟ ಆಡೋ ಅಷ್ಟ ಅವಿವೇಕಿ ಗಳು! ಸಾಯೋ ಬಗ್ಗೆ ವಿಚಾರ ಮಾಡ್ತಾ ಕೂತ್ರೇ ಸಾವು ಬಂದೀತೇ, ಹೋದೀತ? ಸಾವು ಆಗೋದು ಕ್ಷಣದೊಳಗೆ, ವಿವೇಕ ತಪ್ಪೋದು ಅದೇ ಕ್ಷಣದಲ್ಲೇ. ಸಾಯೋ ಆಟ ಯಾವ ರೀತೀದೇ ಇರ್ಲಿ ಅದಕ್ಕೆ ಒಂದೇ ಸೂತ್ರ: 'ವಿವೆಕ ಇರತದೆ' ಇರೋದಿಲ್ಲ ವಿವೇಕಿದ್ದವ ಸಾವನ್ನೂ ಗೆಲ್ಲಬಲ್ಲ. ವಿವೇಕ ಇಲ್ಲದವ ಸಾವಿನ ಜೋಡಿ ಸರ ಸಾಟ ಆಡ್ತಾನೆ'.

ಆದರೆ ಕೆಲವು ಅತ್ಯಾಧುನಿಕ 'ಸಾಯೋ ಆಟಗಳು' ಮಾತ್ರ ಬಹಳ ಮೋಜಿನವು. ಅದರಲ್ಲಿ ಸ್ವಾತಂತ್ರ್ಯ ಸಾಯೋ ಆಟ, ಸ್ಪಿರಿಟ್ ಸಾಯೋ ಆಟ, ವೈಕುಂಠ್ ಸಾಯೋ ಆಟ ಬಹಳ ವೈಚಿತ್ರ್ಯಪೂರ್ಣ ವಾದವು.

ಸ್ವಾತಂತ್ರ್ಯ ದಿನೋತ್ಸವದಂದು ಉತ್ಸಾಹಭರಿತರಾಗಿ, ಸ್ವೇಚ್ಛಾಚರಣೆಗಳಿಂದ ಸಾಯೋದು 'ಸ್ವಾತಂತ್ರ್ಯ ಸಾಯೋ ಆಟ' ಮೊನ್ನೆ ಗೌಹಾತಿಯ ಬಳಿ ನಮ್ಮ ೨೦ ನೆಯ ಸ್ವಾತಂತ್ರ್ಯೋತ್ಸವದಲ್ಲಿ ಭಾಗವಹಿಸಿ ಉತ್ಸಾಹೋಪೇತರಾದ ಜನ ಜಂಗುಳಿ

ರೈಲ್ವೆ ಡಬ್ಬಿ ಮೇಲೆ ಕುಳಿತು ಪ್ರಯಾಣ ಮಾಡಿದರು. ಆ ರೈಲೂ ಸ್ವಾತಂತ್ರ್ಯ ಪ್ರಿಯ ವಾಹನ. ಸ್ವತಂತ್ರವಾಗಿ ವೇಗದಿಂದ ಓಡಿತು. ಮೇಲಿದ್ದವರು ಮೇಲಕ್ಕೇ ಹೊರಟು ಹೋದರು. ಶಾಶ್ವತವಾಗಿ. ೨೦ ಜನ ಮರಣ ಹೊಂದಿದರು. ಇದು ಬಹಳ ಸಾಂಕೇತಿಕವಾಗಿದೆ. ೨೦ನೆಯ ಸ್ವಾತಂತ್ರ್ಯೋತ್ಸವದಲ್ಲಿ ಸಾಯಲು ನಮಗೆ ಸ್ವತಂತ್ರವಿದೆ ಎಂದು ನಮ್ಮ ಭಾರತ ವೀರರು ೨೦ ಮಂದಿ ನಿರೂಪಿಸಿದ್ದಾರೆ. ೨೧ನೆಯ ಉತ್ಸವದಂದು ೨೧ ಜನರ ಪಾಳಿಯೋ ಹೇಗೆ ನೋಡಬೇಕು? ನಮ್ಮ ಸ್ವತಂತ್ರ ಭಾರತದಲ್ಲಿ ಸಾಯೋಕೆ ಸ್ವತಂತ್ರವಿದೆ ಎಂದು ಸ್ವಾತಂತ್ರ್ಯ ದಿನದಂದು ತೋರೋದು ಸ್ವಾತಂತ್ರ್ಯ ಸಾಯೋ ಆಟದ ಒಂದು ಉದಾಹರಣೆ.

ಈಗ 'ಸ್ಪಿರಿಟ್ ಸಾಯೋ ಆಟದ' ವಿವೇಚನೆ ಮಾಡೋಣ. ಸ್ಪಿರಿಟ್ ಕುಡಿದೂ ನಾವು ಸಾಯಬಲ್ಲವಿ' ಅಂತ ತೋರ್ಸೋ ಆಟ 'ಸ್ಪಿರಿಟ್ ಸಾಯೋ ಆಟ' ಭಾರತವು ಸ್ವತಂತ್ರ ರಾಷ್ಟ್ರ, ಪ್ರಜೆಗಳಿಗೆ ಪಾನ-ಅಪಾನಗಳ ಬಗ್ಗೆ ನಿರ್ಧರಿಸುವ ಸ್ವಾತಂತ್ರ್ಯ ಇರೋ ಹಾಗೇ ರಾಜ್ಯ ಸರ್ಕಾರಗಳಿಗೂ ಪಾನಪ್ರತಿಬಂಧ, ಪಾನ ಮುಕ್ತ ಮಾರಾಟಗಳ ಬಗ್ಗೆ ನಿರ್ಧರಿಸುವ ಸ್ವಾತಂತ್ರ್ಯ ಇದೆ. ಆದ್ದರಿಂದ ಪಾನಪ್ರತಿಬಂಧಕ್ಕೆ ಅಂಟಿಕೊಂಡ ರಾಜ್ಯಗಳಲ್ಲಿಯ ಜನರು, 'ನೀವು ಮದ್ಯಪಾನಪ್ರತಿಬಂಧ ಮಾಡಿದರೆ ನಾವು ಅಪಾನ (ವಾರ್ನಿಷ್) ಕುಡಿಯುತ್ತೇವೆ' ಎಂದು ಸರ್ಕಾರಕ್ಕೆ ಹೇಳಿ, ಸ್ವತಂತ್ರ ವೀರರಾಗಿ, ಸರ್ಕಾರದೊಡನೆ ಪ್ರತಿಭಟಿನೆ ಸಾರಿ ಸ್ಪಿರಿಟ್ ಕುಡಿದು ಸ್ವತಂತ್ರರಾಗಿ ಸತ್ತರು. ಮದ್ರಾಸಿನಲ್ಲಿ ನೂರಾರು ಮಂದಿ ಹೀಗೆ 'ಸ್ಪಿರಿಟ'ಗೆ 'ಸ್ಪಿರಿಟೆಡ್ ಆಗಿ ತುತ್ತಾಗಿದ್ದಾರೆ; ಕ್ಷಮಿಸಿ ಆತ್ಮಾರ್ಪಣೆ ಮಾಡಿಕೊಂಡಿದ್ದಾರೆ. ಈ ಸ್ವಾತಂತ್ರ್ಯಪ್ರಿಯ ತ್ಯಾಗಿಗಳೇ ಸ್ಪಿರಿಟ್ ವಿಕ್ಟಿಮ್ಸ್!' ಈ ಆಟವೇ ಸ್ಪಿರಿಟ್ ಸಾಯೋ ಆಟ.




## ರಾಂಗ್ ಟಿಕೆಟ್ ಟು ತಿರುಪತಿ

ಆದರೆ ಕೊನೆಯ ಮಾದರಿ ದೈವೀ ವರ್ಗಕ್ಕೆ ಸೇರಿದ್ದು, 'ವೈಕುಂಟ್ ಸಾಯೋ ಆಟ' ಎಷ್ಟು ultra-modern ನೋ.

ಅಷ್ಟೇ antiquated. ಅದು ಪ್ರಾಚೀನ ವಿದ್ದಷ್ಟೇ ನಾವೀನ್ಯ, ನಾವೀನ್ಯವಿದ್ದಷ್ಟೇ ಪ್ರಾಚೀನ.

'ರಾಮನ ಬಂಟ ಹನುಮಂತ, ತಿರುಪತಿ ಎಂಬುದು ವೈಕುಂಠ' ಎಂಬ ಭಜನೆ ಬಹಳ ಜನಪ್ರಿಯವಾದದ್ದು. ಭೂಲೋಕದ ವೈಕುಂಠ ತಿರುಪತಿ. ಅಲ್ಲಿಗೆ ಹೋಗಿ ಬಂದರೆ ಜೀವನಯಾತ್ರೆ ಸಾರ್ಥಕವಾದಂತೆ ಎಂಬುದು ಅನೇಕ ಭಾವುಕರ ಭಾವನೆ. ಜೀವನದಲ್ಲಿ ಭಕ್ತಿಭಾವವನ್ನು ಬೆಳೆಸಿಕೊಂಡು ದೇವರಲ್ಲಿ ಭಯದಿಂದ ಉತ್ತಮ ಜೀವನ ನಡಸೋದೇ ವೈಕುಂಠಕ್ಕೆ ಹೋಗೋಕೆ ಎಂದು ಎಲ್ಲ ಧರ್ಮಪ್ರವಾದಿಗಳ ಭೋದನೆ. ರೈಲು ಪ್ರಯಾಣ ಮಾಡೋವಾಗ ಒಮ್ಮೊಮ್ಮೆ ಮುಂಬೈಗ ಹೋಗೋಕೆ ಹೊರಟರೆ ಡೆಲ್ಲೀಗೆ ಸೇರಿರ್ತೀವೆ, — Wrong Train ಹತ್ತಿ wrong destination ಮುಟ್ಟೋ ಅವಸ್ಥೆ ಇದು. ಹಾಗೇ ಮೊನ್ನೆ ಕೆಲವು ಯಾತ್ರಿಕರು ಭೂಲೋಕದ ವೈಕುಂಠಕ್ಕೆ ಟಿಕೇಟ್ ತೆಗಸಿದರೆ ವಿಧಿ ಸ್ವರ್ಗದ ವೈಕುಂಠಕ್ಕೆ ಕರೆದೊಯ್ದು ಬಿಡಬೇಕೆ? What a wrong destination? ಎಂತಹ ತಪ್ಪು ಗುರಿ. ಆ?! ಇಲ್ಲವೇ right destination ನೋ?। Perhaps rightful destination ಇರಬೇಕು. ತಿರುಪತಿಯ ದೇವಸ್ಥಾನದಲ್ಲಿ ನೂಕು ನುಗ್ಗಲಲ್ಲಿ ಸಿಕ್ಕ ೮ ಮಕ್ಕಳು ೯ ಮುದುಕರು, 'ಸಂಕಟ ಬಂದರೆ ವೆಂಕಟರಮಣ' ಅಂತ ಉಸಿರಾಡೋಕೇ ತೊಂದರೆ ಆದಾಗ ಆ ವೆಂಕಟರಮಣನ್ನ ನೆನೆಸಿದರೆ ಅವರ ಆ ಉಸಿರನ್ನೇ ತಾನೆ ಉಸಿರು ಮಾಡಿ ಬಿಡೋದೇ ಆ ವೆಂಕಟರಮಣ? ಉಸಿರಿದ್ದರೆ ಕೊನೇ ಉಸಿರಾಡೋ ಸಂಕಟ ಅಂತ ಆ ವೆಂಕಟರಮಣ ಇವರುಗಳ ಉಸಿರಿಗೇ ಸ್ವಾತಂತ್ರ್ಯ ಕೊಟ್ಟುಬಿಟ್ಟ ಅಂತ ಕಾಣುತ್ತೆ. ಪರಾತ್ಪರ.........ಭಕ್ತಜನ ಪರಿಪಾಲಕ ........ವೆಂಕಟರಮಣ! ಇದು 'ವೈಕುಂಠ್ ಸಾಯೋ ಆಟ' ಆದರೆ ಇದಕ್ಕೆ ತನಿಖೆ ಇದೆ. ಚಿತ್ತೂರ್ ಜಿಲ್ಲಾ ಕಲೆಕ್ಟರ್ ತಿರುಪತಿಯಲ್ಲಿ ಸತ್ತವರ ಬಗ್ಗೆ ತನಿಖೆ ನಡೆಸಬೇಕೆಂಬ ಆಜ್ಞೆ ಹೊರಡಿಸಿದ್ದಾರಂತೆ. Poor Souls! ಆ ತನಿಖೆ ಅಧಿಕಾರಿಗಳು, "ತಿರುಪತಯಲ್ಲಿ ಸತ್ತರೇನಾಯಿತು ವೈಕುಂಠಕ್ಕೆ ಹೋದಂತಾಯಿತೇ?" ಇದು ಅವರ ಸಮಸ್ಯೆ. ಅದಕ್ಕೆ ತನಿಖೆ. ತನಿಖೆ ಅಧಿಕಾರಿಗಳು ಸ್ವತಃ ಸ್ವರ್ಗದ ವೈಕುಂಠಕ್ಕೆ ಭೆಟ್ಟಿಕೊಟ್ಟು ತಪಾಸು ಮಾಡಬೇಕಾಯಿತು?

ಏನೇ ಇರಲಿ, ಈ ಸಾಯೋ ಆಟ ಭಾರತದಲ್ಲಿ ಬಹಳ ಜನಪ್ರಿಯವಾಗುತ್ತಿದೆ. ಜಾಗತಿಕ ಮಟ್ಟದಲ್ಲಿ ಈ ಆಟವನ್ನು ಜನಪ್ರಿಯಗೊಳಿಸಬೇಕೆಂಬ ಮಹದೋದ್ದೇಶದಿಂದ ಹೊರಟಿದ್ದಾರೆ. 'ಸಾಯೋ ಆಟದ ಪೋಷಕರು.' ಭೂಲೋಕದಲ್ಲಿ ಪ್ರಜಾಸತ್ತೆ. ಯಶಸ್ವಿಯಾಗದಿದ್ದರೇನಾಯಿತು? ಸ್ವರ್ಗದಲ್ಲಿ ಅದು ಯಶಸ್ವಿಯಾಗಲಾ

ರದೇ? ಇದು ಸಮಸ್ಯೆ. Death is a great Equaliser' ಎಂದೆನ್ನುತ್ತಾರೆ: 'Something in the envy of the small, still loves the vast Democracy of Death, ಎಂದು ಲಿಟ್ಟನ್ ಹೇಳಿದ್ದಾನೆ. ಬಹುಶಃ ಈ ವಿಶಾಲ ವ್ಯತ್ಯುವಿನ ಪ್ರಜಾಪ್ರಭುತ್ವದ ಮೇಲಿನ ಪ್ರೀತಿಗಾಗಿ, ಈ ಪ್ರಜಾಸತ್ತೆಯ ಸ್ಥಾಪನೆಗಾಗಿಯೇ ಭಾರತದಲ್ಲಿ' ಸಾಯೋ ಆಟ' ದಿನೇ ದಿನೇ ಪ್ರವರ್ಧಮಾನವಾಗುತ್ತಾ ಜನಪ್ರಿಯವಾಗುತ್ತಿರಬೇಕು. Long Live Death! ಮೃತ್ಯುವು ಚಿರಾಯುವಾಗಲಿ.

**ಕುವಲಯ**

• • •

---

## ರಾಜ್ಯಪಾಲ – ರಾಜಕಾರಣಿ

ಓರ್ವ ಹಿರಿಯ ಶಿಕ್ಷಣತಜ್ಞರು ತಮ್ಮ ಸೇವಾ ನಿವೃತ್ತಿಯ ನಂತರ ರಾಷ್ಟ್ರಾಧ್ಯಕ್ಷ ರನ್ನು ಭೆಟ್ಟಿಯಾಗಿ ತಮ್ಮ ಸೇವಾಕಾಂಕ್ಷೆಯನ್ನು ವ್ಯಕ್ತಪಡಿಸಿ, ಯಾವುದಾದರೂ ರಾಜ್ಯದ ರಾಜ್ಯಪಾಲರಾಗಿ ನೇಮಿಸಿದರೆ ತಮ್ಮ ಸೇವೆಯನ್ನು ಸಲ್ಲಿಸುವುದಾಗಿ ವಿನಂತಿಸಿಕೊಂಡರು. ಆಗ—

ರಾಷ್ಟ್ರಾಧ್ಯಾಕ್ಷ: "ಕ್ಷಮಿಸಿ, ರಾಜ್ಯಪಾಲರಾಗುವವರು ರಾಜಕಾರಣಿಗಳಿದ್ದರೆ ವಿರೋಧಿಸುವುದಾಗಿ ರಾಜ್ಯಗಳ ಮುಖ್ಯಮಂತ್ರಿಗಳು ಸೂಚಿಸಿದ್ದಾರೆ."

ಶಿಕ್ಷಣತಜ್ಞ: "ನಾನು ಅನೇಕ ವರ್ಷ ವಿಶ್ವವಿದ್ಯಾಲಯದ ಉಪಕುಲಪತಿಯಾಗಿದ್ದೆ. ನಾನು ರಾಜ್ಯಕಾರಣಿಯಲ್ಲ."

ರಾಷ್ಟ್ರಾಧ್ಯಕ್ಷ: ಅದೇ ಮುಖ್ಯಮಂತ್ರಿಗಳ ದೂರು. ಈಗಿನ ಶಿಕ್ಷಣತಜ್ಞರು ರಾಜಕಾರಣಿಗಳನ್ನು ಮೀರಿಸಿದ್ದಾರೆಂದು."

* * * *

**ಸೂತ್ರ**: ೧) ರಾಜ್ಯಪಾಲರು ರಾಜಕೀಯ ಮಾಡಬಹುದು. ಆದರೆ ರಾಜಕಾರಣಿಗಳು ರಾಜ್ಯಪಾಲರಾಗುವಂತಿಲ್ಲ.

೨) ರಾಜಕಾರಣಿಗಳು ಶಿಕ್ಷಣತಜ್ಞರಾಗಿ, ಶಿಕ್ಷಣಾಧಿಕಾರಿಗಳಾಗಬಹುದು. ಆದರೆ ರಾಜಕಾರಣೀ ಶಿಕ್ಷಣತಜ್ಞರು ರಾಜ್ಯಪಾಲರಾಗುವಂತಿಲ್ಲ.

---

# ಕಹಿ ಬೇವಿನ ಸಿಹಿ

ಉಗಾದಿಯ ದಿನ ಬೇವು-ಬೆಲ್ಲ ತಿನ್ನು ತ್ತೇವೆ. ಬೇವು ನಮ್ಮ ಪಾಲಿಗೆ ಹೆಚ್ಚು ಬಂದರೆ ಮುಖಕಿವುಚುತ್ತೇವೆ. ಆದರೆ ಆ ಕಹಿಬೇವಿನಲ್ಲಿ ಎಷ್ಟು ಸಿಹಿ ಇದೆ ಎಂದು ತಿಳಿದರೇ ನಾವು ಬೆಲ್ಲ ತಿನ್ನುವುದು ಬಿಟ್ಟು ಬೇವನ್ನೇ ತಿನ್ನಲು ಪ್ರಾರಂಭಿಸುವ ಭಯ ಮಾತ್ರ ಇದೆ. ಏನೇ ಇರಲಿ ಬೇವಿನ ಸುಗುಣ ಗೊತ್ತಾದರೆ ಕಹಿಯಲ್ಲೂ ಸಿಹಿಯಿದೆ ಎಂಬ ಹೊಸ ಅಂಶ ಕಲಿತಂತಾಗುತ್ತದೆ. ಬೇವು ಔಷಧಿಗುಣಯುಕ್ತವಾದ ಸಸ್ಯ.

೧) ನಾವು ಬಹಳಕಾಲದಿಂದ ಬೇವಿನ ಕಡ್ಡಿಗಳನ್ನು ಹಲ್ಲು ಉಜ್ಜಲು ಬಹಳ ಶ್ರೇಷ್ಠವೆಂದು ಭಾವಿಸಿ ಬಳಸುತ್ತಿದ್ದವು. ToothPaste ಯುಗ ಪ್ರಾರಂಭವಾದ ಮೇಲೆ ಬೇವಿನ ಕಡ್ಡಿಗಳು ಮಹತ್ವ ಕಳೆದು ಕೊಂಡಂತೆ ತೋರಿತು. ಆದರೆ ಬೇವು ಹೊ ಸ ರೂ ಪ ತಾ ಳಿ ನಮ್ಮ ಹಲ್ಲನ್ನು ಈಗಲೂ ಉಜ್ಜುತ್ತಿದೆ. ಅದು ಈಗ 'ನೀಮ್ ಟೂತ್ ಪೇಸ್ಟ್' ರೂಪ ತಾಳಿದೆ.

೨) ಚರ್ಮರೋಗ ಬಂದರೆ ಬೇವಿನ ತಪ್ಪಲವನ್ನು ಅರಿದು ಅದರ ರಸ ಕುಡಿಯುವ ರೂಢಿಯಿತ್ತು. ದಿನಕ್ಕೆ ಮೂರು ನಾಲ್ಕು ಚಮಚೆ ರಸ ಸೇವಿಸಿದರೆ ಚರ್ಮರೋಗ ನಿವಾರಣೆ ಹೊಂದುತ್ತಿತ್ತು. ಬೇವಿನ ಬೀಜಗಳ ತೈಲವನ್ನು ಚರ್ಮರೋಗ ಪೀಡಿತ ಭಾಗಗಳಲ್ಲಿ ಹಚ್ಚಲು ಉಪಯೋಗಿಸುತ್ತಿದ್ದರು. ಈ ಬೇವಿನ ಅಂಶಹೊಂದಿದ ಮುಲಾಮುಗಳು ಈಗ ರೂಢಿಯಲ್ಲಿ ಬಂದಿವೆ. ಬೇವಿನ ಎಣ್ಣೆ ಹೇನಿನಂಥ ಕೀಟಕಗಳನ್ನು ಕೂಡ ನಾಶ ಮಾಡುತ್ತದೆ.

೩) ತೆಳ್ಳಗಿರಬೇಕೆಂಬುದು ಈಗಿನ ಒಂದು ಫ್ಯಾಷನ್. ಸಿನಿಮಾ ತಾರೆಯರಂತೂ ಪರದೇಶಗಳಿಗೆ ಹೋಗಿ ತಮ್ಮ ದೇಹದ ಗಾತ್ರ ಕಡಿಮೆ ಮಾಡಿಕೊಳ್ಳಲು ಉಪಚಾರ ಪಡೆದು ಬರುವುದನ್ನು ಕೇಳಿದ್ದೇವೆ. ಆದರೆ 'ಹಿತ್ತಲಿನ ಗಿಡ ಮದ್ದಲ್ಲ ಎಂಬಂತಾಗಿದೆ ನಮ್ಮ ಬೇವಿನ ಪಾಡು. ಆಧುನಿಕ ಔಷಧೋಪಚಾರದಿಂದ ಸಾಧಿಸದಿದ್ದನ್ನು ಬೇವಿನಿಂದ ಸಾಧಿಸಬಹುದೆನ್ನುವುದಕ್ಕೆ ಇದೊಂದು ಸಾಕ್ಷಿ. ಪ್ರತಿದಿನವೂ ಅರ್ಧ ಕಪ್ಪಿನಷ್ಟು ಬೇವಿನ ತಪ್ಪಲಿನ ರಸವನ್ನು ಕುಡಿಯುವುದರಿಂದ ಬೊಜ್ಜು ಮಾಯವಾಗುತ್ತದೆ. ಇದೇ ಕಾರಣಕ್ಕಿರಬೇಕು ಕೆಲವು ಜಾಣ ತಾರೆಯರು ಬೇವಿನ ಬೇಟೆಗ ಬಿದ್ದಿರುವುದು.

೪) ಈ ಸೊಪ್ಪಿನ ರಸ ಸೇವನೆ ಸರ್ವರೋಗನಿವಾರಕವೆಂದು ನಮ್ಮ ನಂಬಿಕೆ.

ಬೇವಿನ ಗುಣವನ್ನರಿಯದೆ ನಾವು ಅದನ್ನು ತಿರಸ್ಕರಿಸುತ್ತೇವೆ, ನಿಷೇಧಿಸಿದಂತೆ ಇಟ್ಟಿದ್ದೇವೆ. 'ಕಹಿಯಲ್ಲೂ ಸಿಹಿ ಇದೆ' ಎಂದು ತಿಳಿದ ಮೇಲೆ ಬೇವಿಗೆ ಹೊಸ ಸೇವಾಲಾಭ ದೊರೆತೀತೆಂದು ಆಶಿಸೋಣವೇ.

— **ಸಂಗ್ರಹ : ಶ್ರೀ ಅನಂತ**

# ಶ್ರೀ ಎನ್. ಡಿ. ದಿವಾನ್

**—ಅಂಗವಿಕಲರಾದರೂ ಸಂಪೂರ್ಣ ಆಶಾವಾದಿ**



"ಭಗವಂತಾ ! ನನ್ನ ಜೀವನದಲ್ಲಿ ನಾನು ಬದಲಿಸಲಾರದಂಥವುಗಳನ್ನು ಪ್ರಶಾಂತತೆಯಿಂದ ಅನುಭವಿಸುವ ತಾಳ್ಮೆಯನ್ನು; ನಾನು ಬದಲಿಸಬಹುದಾದ ಘಟನೆಗಳನ್ನು ಬದಲಿಸಲು ಬೇಕಾದ ಧೈರ್ಯವನ್ನು ನನಗೆ ಒದಗಿಸುವದಲ್ಲದೆ ಈ ಎರಡರ ಅಂತರವನ್ನು ಅರಿಯುವ ಜ್ಞಾನವನ್ನೂ ದಯಪಾಲಿಸು" —ಎಂದು ಪ್ರಾರ್ಥಿಸುವ ಶ್ರೀ ಎನ್. ಡಿ. ದಿವಾನ್ ರವರ ಗುರಿ ಬಹಳ ಹಿರಿದು.ೆ. ಇವರ ಜೀವನ ಪರಿಚಯು ಯೂರನ್ನಾದರೂ ವಿಸ್ಮಯಗೊಳಿಸುತ್ತದೆ. ಇವರಲ್ಲಿ ಮೂರ್ತೀಮಂತವಾಗಿರುವ ಆಶಾವಾದ ಸಂಪೂರ್ಣ ನಿರಾಶಾವಾದೀ ಪ್ರವೃತ್ತಿಯವರನ್ನು ಕೂಡ ಆಶಾವಾದಿಗಳನ್ನಾಗಿಸುವ ಶಕ್ತಿಯನ್ನು ಹೊಂದಿರುತ್ತದೆ.

ಭಾರತ ರಕ್ಷಣಾ ಪಡೆಯಲ್ಲಿ ಅಧಿಕಾರಿ ಸೈನಿಕ ಉಮೇದುವಾರ (Officer cadet) ರೆಂದು ತರಬೇತಿ ಪಡೆಯುತಿದ್ದಾಗ. ಕ್ರೂರ ವಿಧಿಯು ಶ್ರೀ ದಿವಾನರನ್ನು ಸಂಪೂರ್ಣ ಅಂಗವಿಕಲರನ್ನಾಗಿ ಮಾಡಿತು. ಸೈನಿಕ ತರಬೇತಿಯ ಕಾಲದಲ್ಲಿ ಅರ್ಧಾಂಗವಾಯು ಪೀಡಿತರಾಗಿ ಎರಡೂ ಕಾಲುಗಳನ್ನು ಕಳೆದುಕೊಂಡಿದ್ದಾರೆ. ಇವರು ಅಡ್ಡಾಡಲು ಆಗುವುದೇ ಇಲ್ಲ. ಇದಲ್ಲದೆ ಟೊಂಕಕ್ಕೂ ಅರ್ಧಾಂಗ ಬಡಿದಿದೆ. ಎದೆಯತನಕ ಈ ದುಷ್ಪರಿಣಾಮ ಆಗಿದ್ದು ದೈಹಿಕವಾಗಿ ಸಂಪೂರ್ಣ ಅಂಗವಿಕಲರಾಗಿದ್ದಾರೆ. ೧೯೪೮ರಲ್ಲಿ ಗಾಲಿಯ ಕುರ್ಚಿಗೆ

ಶರಣಾಗತರಾದವರು ಇಲ್ಲಿಯು ತನಕ ಅದರ ವಿನಃ ಚಲನೆ ಸಾಧ್ಯವಿಲ್ಲವೆಂಬಂತೆ ಆಗಿದ್ದಾರೆ.

೧೫ಮೇ ೧೯೨೨ರಲ್ಲಿ ಕೊಲ್ಹಾಪೂರದಲ್ಲಿ ಜನಿಸಿದ ಶ್ರೀ ಎನ್. ಡಿ. ದಿವಾನ್ ಮುಂಬೈ, ವಿಶ್ವವಿದ್ಯಾಲಯದಿಂದ ಬಿ. ಎಸ್.ಸಿ (ಅಗ್ರಿ) ಯನ್ನು ೧೯೪೪ರಲ್ಲಿ ಉತ್ತೀರ್ಣರಾಗಿ ಎಂ. ಎಸ್‌ಸಿ. ಅಭ್ಯಾಸ ಮುಂದುವರಿಸಿದರು. ಶಾಲಾದಿನಗಳಿಂದ ಕ್ರಿಕೆಟ್. ಟೆನಿಸ್, ಟೇಬಲ್ ಟೆನಿಸ್ ಆಟಗಳಲ್ಲಿ ಆಸಕ್ತಿ ವಹಿಸಿದ್ದ ಇವರಿಗೆ ಸೈನ್ಯದಲ್ಲಿ ಭರ್ತಿ ಹೊಂದುವ ಹಂಬಲ ವಿತ್ತು. ಸ್ವಾತಂತ್ರ್ಯ ಭಾರತದಲ್ಲಿ ಜವಾನ ನಾಗಿ ಬಾಳಬೇಕೆಂಬ ಈ ಉತ್ಸಾಹ ಇವರನ್ನು ಭಾರತ ಸೈನಿಕ ಅಕಾಡೆಮಿ ಸೇರಲು ಹಚ್ಚಿತು. ೧೯೪೮ರಲ್ಲಿ ಎಂ.ಎಸ್ ಸಿ. ಮುಗಿಸಬೇಕೆಂದಿದ್ದಾಗ ಭಾರತ ಸೈನ್ಯದ ಕರೆ ಬಂತು. ಈ ಕರೆಗೆ ಓಗೊಟ್ಟು ಸೈನಿಕ ಅಧಿಕಾರಿ ಉಮೇದುವಾರ (Military Officer Cadet) ಹುದ್ದೆ ಸ್ವೀಕರಿಸಿದರು. ಆದರೆ ತಾನೊಂದು ಬಗೆದಾದರೆ ದೈವ ಮತ್ತೊಂದು ಬಗೆ ಯಿತು. ಇವರು ಸೈನಿಕ ತರಬೇತಿ ಪಡೆಯುತ್ತಿದ್ದಾಗ ಒಂದು ದಿನ ದೂರದ ಓಟ ದಲ್ಲಿ ಭಾಗವಹಿಸುತ್ತಿದ್ದಂತೆ ದಾರಿಯಲ್ಲಿ ಎಚ್ಚರತಪ್ಪಿ ಬಿದ್ದರು. ಅಂದೇ ಅವರಿಗೆ ಪಾರ್ಶ್ವವಾಯು ಪೀಡೆ ಪ್ರಾರಂಭ ವಾಯಿತು. ತಕ್ಷಣ ಪ್ರಥಮ ಚಿಕಿತ್ಸೆ ಕೊಡಲಾಯಿತು. ಆದರೆ ಶ್ರೀ ದಿವಾನ್ ಶಾಶ್ವತವಾಗಿ ಹಾಸಿಗೆಯೇ ಹಿಡುಯು ವಂತಾಯಿತು. ಬಹಳ ವರ್ಷಗಳ ಚಿಕಿತ್ಸೆ ಯನಂತರ ಇವರಿಗೆ ಸ್ವಲ್ಪ ಸುಧಾರಿಸಿದೆ. ಆದರೂ ಇವರು ಪೂರ್ಣ ಅಂಗವಿಕಲರಾದಂತೆಯೇ ಕಾಲುಗಳೆರಡೂ ನಿರುಪಯುಕ್ತವಿದ್ದಂತೆಯೇ. ಗಾಲಿಯ ಕುರ್ಚಿ ಯಿಲ್ಲದೆ ಚಲನೆಯೇ ಸಾಧ್ಯವಿಲ್ಲ

## ವಿವಾಹ ವಿಚ್ಛೇದನೆ

ಶ್ರೀ ದಿವಾನರ ಸ್ಥಿತಿ ಹೀಗಾದಾಗ ಇವರಿಗೆ ಮತ್ತೊಂದು ಆಘಾತ ಸಂಭವಿಸಿತು. ಕವಿ ಷೆಲ್ಲಿ ಹೇಳಿದಂತೆ " ನೋವು ಮತ್ತಷ್ಟು ಕ್ಲಿಷ್ಟಕರ ನೋವಿಗೆ ಜನನ ವೀಯುತ್ತದೆ " (Pain still keener pain ever breeds). ಇವರ ಒಬ್ಬಳೇ ಮಗಳು ೧೯೪೮ರಲ್ಲಿ ಕಣ್ಮುಚ್ಚಿದಳು. ದೈಹಿಕ ಅಂಗಹೀನತೆಯೊಡನೆ ಮಾನಸಿಕ ಆಘಾತ ಇದರಿಂದ ತಲೆದೂರಿತು. ಅದೇ ಸಮಯಕ್ಕೆ ಇವರ ಪತ್ನಿಯು ಇವರಲ್ಲಿ ವಿವಾಹ ವಿಚ್ಛೇದನೆ ಬೇಡಿದಾಗ " ನಾನಂತೂ ಅಂಗವಿಕಲನಾದೆ, ನೀನಾದರೂ ಜೀವನದ ವಸಂತವನ್ನು ಅನುಭವಿಸು ಎಂದು ಬಹಳ ಉದಾರವಾಗಿ ವಿವಾಹ ವಿಚ್ಛೇದನಕ್ಕೆ ಅನುಮತಿ ಕೊಟ್ಟರು. ತಮ್ಮ ಜೀವನದ ಅಧಃಪತನದಲ್ಲಿದ್ದರೂ ಇವರು ತಮ್ಮ ಘನತೆಯನ್ನು ಕಾಪಾಡಿಕೊಂಡರು; ಶ್ರೀ ದಿವಾನ್ ಜೀವನದಲ್ಲೂ ಕ್ರೀಡಾ ಮನೋಭಾವವನ್ನು ಕಾಯ್ದುಕೊಂಡರು. ಇವರ ಮಾತಿನಲ್ಲೇ ಹೇಳಬೇಕೆಂದರೆ;

"I have scored a duck (zero) in cricket and this has taught me to take defeat in life" [ಕ್ರಿಕೆಟ್ ಆಟದಲ್ಲಿ ಸೊನ್ನೆ ಓಟಗಳನ್ನು ಪಡೆದಿದ್ದೇನೆ. ಈ ಅನುಭವವು ನನ್ನ ಜೀವನದಲ್ಲಿಯೂ ಸೋಲನ್ನು ಸ್ವೀಕರಿಸಲು ಪಾಠಕಲಿಸಿದೆ].

### ಅಂಗವಿಕಲರಾದರೂ ಉತ್ಸಾಹಿ

೧೯೪೮ರಲ್ಲಿ ಅಂಗವಿಕಲರಾದ ನಂತರ ಟೈಪಿಂಗ್ (ಇಂಗ್ಲಿಷ ಹಾಗೂ ಹಿಂದಿ) ಕಲಿತರು. ಪತ್ರವ್ಯವಹಾರದ ತರಬೇತಿ ಮೂಲಕ ಪತ್ರಿಕೋದ್ಯಮ ಹಾಗೂ ಸಣ್ಣ ಕಥನಕಲೆಗಳಲ್ಲಿ ಪ್ರಶಸ್ತಿ ಪರೀಕ್ಷೆಯಲ್ಲಿ ಉತ್ತೀರ್ಣರಾದರು. ನಂತರ ಹಿಂದೀ ಪರೀಕ್ಷೆಗಳು ಇವರನ್ನು ಆಕರ್ಷಿಸಿದವು. ಚೈತನ್ಯಪೂರ್ಣ ಜೀವನ ನಡೆಸಿದವರಿಗೆ ಸುಮ್ಮನೆ ಕೂಡಲು ಆದೀತೆ? ೧೯೫೭ ರಲ್ಲಿ ಅಲಹಾಬಾದದ ಹಿಂದೀ ಸಾಹಿತ್ಯ ಸಮ್ಮೇಲನದವರ ಸಾಹಿತ್ಯರತ್ನ ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಕಲಿತು ತೃಪ್ತಿ ಹೊಂದದ ಇವರು ಕಲಿಸಲು ಪ್ರಾರಂಭಿಸಿದರು. ಯಾವ ಹಿಂದೀ ಶಾಲೆಯನ್ನು ವಿಧ್ಯಾರ್ಥಿ ಎಂದು ಪ್ರವೇಶಿಸಿದರೋ ಅದೇ ಹಿಂದೀ ಶಾಲೆಯಲ್ಲಿ ಶಿಕ್ಷಕರಾದರು. ಇವರು ನೆಹ್ರೂ ಹಿಂದೀ ಪಾಠಶಾಲೆಯಲ್ಲಿ ಕಲಿಸುತ್ತಾರೆ. ಕಳೆದ ೧೨ ವರ್ಷಗಳಿಂದಲೂ ಇವರಿಗೆ ಈ ಸಂಸ್ಥೆಯೊಡನೆ ಸಂಬಂಧವಿದೆ. ಹಿಂದಿಯಲ್ಲಿ ಸಾಹಿತ್ಯರತ್ನ ಪದವಿಯಿಂದ ಇವರು ಸಂತೃಪ್ತರಾಗಲಿಲ್ಲ. ಜ್ಞಾನತೃಷೆ ಇವರನ್ನು ಉಚ್ಚ ಅಭ್ಯಾಸಕ್ಕೆ ಹಚ್ಚಿ. ೧೯೬೬ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದಿಂದ ಎಂ. ಎ. (ಬಾಹ್ಯ) ಪರಿಕ್ಷೆಯನ್ನು ತೆಗೆದುಕೊಂಡು ಎರಡನೆಯ ವರ್ಗದಲ್ಲಿ ಉತ್ತೀರ್ಣರಾದರು. ಅವರು ಪರೀಕ್ಷೆ ತೆಗೆದುಕೊಂಡ ವರ್ಷ ಪರೀಕ್ಷೆಗೆ ಬಂದಿದ್ದ ವಿಧ್ಯಾರ್ಥಿಗಳೆಲ್ಲರಿಗೂ ಶ್ರೀ ದಿವಾನ್ ಆಕರ್ಷಕ ಕೇಂದ್ರವಾಗಿದ್ದರು. ಆಗ ಅವರು ಹೇಳಿದ ಮಾತು ನನಗೆ ಇನ್ನೂ ನೆನಪಿದೆ: "I am also on the run. I shall run the race and if I deserve to win I win. Or else I lose. But failures never dishearten me" ಕಾಲಿಲ್ಲದೆ ಓಡಿದರು ಶ್ರೀ ದಿವಾನ್ ಹಿಂದೀ ಸ್ನಾತಕೋತ್ತರ ಪರೀಕ್ಷೆಯನ್ನು. ಅವರ ನಿರ್ಧಾರ, ಶ್ರದ್ಧೆ ಅವರಿಗೆ ವಿಜಯ ಮಾಲೆಯನ್ನು ದೊರಕಿಸಿತು.

### 'ಅಂಗವಿಕಲರಿಗೂ ದುಡಿಯಲು ಅವಕಾಶ ದೊರೆಯಬೇಕು'

ಶ್ರೀ ದಿವಾನರ ವಾದವನ್ನು ಕೇಳಿದವರಾದರೂ ಅಚ್ಚರಿ ಹೊಂದದೆ ಇರಲಾರರು. ಅವರು ಬೆಂಗಳೂರಿನ 'ಇಂಡಿಯನ್ ರೆಡ್ ಕ್ರಾಸ್ ಹೋಂ'ದಲ್ಲಿ ಇದ್ದರು. ದೈಹಿಕವಾಗಿ ಸ್ವಲ್ಪ ಆರಾಮಾದಾಗ ಇವರ ಹೋರಾಟ ಪ್ರಾರಂಭವಾಯಿತು. ಹೊಸ ಚೇತನದಿಂದ ಇವರು ಸರ್ಕಾರದೊಡನೆ

ಹೋರಾಡಲು ಪ್ರಾರಂಭಿಸಿದರು. 'ಅಂಗವಿಕಲರಿಗೂ ದುಡಿಯಲು ಅವಕಾಶ ಕೊಡಬೇಕು' ಇದು ಇವರ ವಾದ. 'ನಾವು ದೈಹಿಕವಾಗಿ ಅಂಗವಿಕಲರೇ ಹೊರತು ಮಾನಸಿಕವಾಗಿ, ಬೌದ್ಧಿಕವಾಗಿಯಲ್ಲ. ತಮ್ಮ ಬೌದ್ಧಿಕ ಕಾರ್ಯ ಮಾಡಿ ಗಳಿಸಲು ಅವಕಾಶ ಕೊಡಬೇಕು ಎಂಬುದು ಇವರ ಅಭಿಮತ. ಇದಕ್ಕಾಗಿ ಇವರದು ಹೋರಾಟ.

ಬೆಂಗಳೂರಿನ ಇಂಡಿಯನ್ ರೆಡ್ ಕ್ರಾಸ್ ಹೋಮಿನಲ್ಲಿ ಇವರಿಗೆ ಎಲ್ಲ ಪಾಲನೆ ಪೋಷಣೆ ಪುಕ್ಕಟೆಯಾಗಿ ಆಗುತ್ತಿತ್ತು. ಆದರೆ ಇವರಿಗೆ ಕೆಲಸ ಮಾಡದೆ, ಸರ್ಕಾರದ ಕೂಳು ತಿನ್ನಲು ರುಚಿಸಲಿಲ್ಲ. ಇವರು ಇಂಡಿಯನ್ ರೆಡ್ ಕ್ರಾಸ್ ಸೊಸೈಟಿಗೆ ಬರೆದು ಕೇಳಿದರು. 'ನಾನು ರೆಡ್ ಕ್ರಾಸ್ ಹೊಮ್‌ದಲ್ಲಿದ್ದುಕೊಂಡು ಹೊರಗೆ ಎಲ್ಲಾದರೂ ನೌಕರಿ ಮಾಡಲು ಅವಕಾಶ ಕೊಡಿ. ಆ ನೌಕರಿಯಿಂದ ಬಂದ ಹಣದಲ್ಲಿ ಒಂದು ಪಾಲು ರೆಡ್ ಕ್ರಾಸ್ ಹೋಮಿಗೆ ದೇಣಿಗೆಯಾಗಿ ಕೊಡುತ್ತೇನೆ'. ರೆಡ್ ಕ್ರಾಸ್ ಹೋಮ್‌ದವರ ಪರವಾನಿಗೆ ದೊರೆಯದೇ ಹೋಯಿತು. ಶ್ರೀ ದಿವಾನರು ರೆಡ್‌ಕ್ರಾಸ್ ಹೋಮನ್ನು ತ್ಯಜಿಸಬೇಕಾಯಿತು.

## ಹೊಸ ಹುದ್ದೆಯ ಸ್ವೀಕಾರ

೧೯೬೫ರಲ್ಲಿ ಶ್ರೀ ದಿವಾನ್ ಇನ್ನೂ ಕೆಲವರು ಅಂಗವಿಕಲ ಬಾಂಧವರನ್ನು ಕೂಡಿಸಿ ಬೆಂಗಳೂರಿನಲ್ಲೇ 'ಅಂಗವಿಕಲರ ಸಂಘ'ವನ್ನು ರಚಿಸಿ ಅದರ ಅಂಗವಾಗಿ ಒಂದು 'ಅಂಗವಿಕಲರ ತರಬೇತಿ ಕೇಂದ್ರ' ಪ್ರಾರಂಭಿಸಿದರು. ಇವರು ಈಗ ಈ ಕೇಂದ್ರದ ಮುಖ್ಯಸ್ಥರಾಗಿ ಹುದ್ದೆ ಸ್ವೀಕರಿಸಿದ್ದಾರೆ. ಅಂಗವಿಕಲರಾದ ಶ್ರೀ ದಿವಾನ್ ಅಂಗವಿಕಲರಿಗೆ ಜೀವನೋಪಾಯದ ಮಾರ್ಗ ತೋರಿಸುವ ತರಬೇತಿ ಕೇಂದ್ರದ ಮುಖ್ಯಸ್ಥರಾಗಿ ತಮ್ಮ ಜೀವನವನ್ನು ಅಂಗವಿಕಲರಿಗೇ ಮುಡಿಪಿಟ್ಟಿರುವುದು ಬಹಳ ಮಹತ್ವವಾದದ್ದು. ಅವರ ಈ ನಿರ್ಧಾರ ಅವರಲ್ಲಿ ಅಂಗವಿಕಲರ ಬಗ್ಗೆ ಇರುವ ತ್ಯಾಗ–ಸೇವಾಭಾವಗಳನ್ನು ವ್ಯಕ್ತಪಡಿಸುತ್ತದೆ.

## ವಿದೇಶಗಳಲ್ಲಿ ಸ್ಥಿತಿ

ವಿದೇಶಗಳಲ್ಲಿ ಅಂಗವಿಕಲರಿಗಾಗಿ ಶೇಕಡ ೪ರಷ್ಟು ನೌಕರಿಗಳು ಮೀಸಲಿಡಬೇಕೆಂಬ ಕಾಯ್ದೆಯಿದೆ. ಹೀಗೆ ಅಂಗವಿಕಲರೂ ಸಮಾಜದ ಉಪಯುಕ್ತ ನಾಗರಿಕರಾಗಲು ಸಹಕಾರ ಕೊಡಲಾಗುತ್ತಿದೆ. ಇಂಗ್ಲೆಂಡಿನಲ್ಲಿ ಅಂಗವಿಕಲ ಸೇವಾ-ನಿವೃತ್ತ ಸೈನಿಕರಿಗೆ ಅಂಗವಿಕಲರ ಕೇಂದ್ರಗಳಲ್ಲಿದ್ದುಕೊಂಡು ಹೊರಗಡೆ ಕೆಲಸ ಮಾಡಲು ಪರವಾನಿಗೆ ಕೊಡಲಾಗುವುದು. ಈ ಅಂಗವಿಕಲರು ತಮಗೆ ಬಂದ ಪಗಾರದಲ್ಲಿ ಶೇಕಡ ೩೦ರಷ್ಟು ಅಂಗವಿಕಲ ಕೇಂದ್ರಕ್ಕೆ ಸಲ್ಲಿಸುತ್ತಾರೆ. ಈ ಧೋರಣೆ ನಮ್ಮ ದೇಶದಲ್ಲೂ ಜಾರಿಗೆ ಬರಬೇಕು.

ಅಂಗವಿಕಲರನ್ನು ರೆಡ್‌ಕ್ರಾಸ್ ಕೇಂದ್ರಗಳಲ್ಲಿ ಕಾಲಕ್ಷಯ ಮಾಡಲು ಬಿಟ್ಟರೆ ಅಹರಲ್ಲಿಯ ಅಂತಃಚೈತನ್ಯ ಕುಗ್ಗಿ ಜೀವನದಲ್ಲಿಯ ಉತ್ಸಾಹ ನಂದಿ ಹೋಗುತ್ತದೆ. ದೈಹಿಕ ಅಂಗವಿಕಲರಾದ ಇವರಿಗೆ ಬೌದ್ಧಿಕ ಪಾರ್ಶ್ವವಾಯುವೂ ಬಂದೀತು." ಎಂದು ಶ್ರೀ ದಿವಾನರು ಅಭಿಪ್ರಾಯ ಪಟ್ಟಾಗ ಅವರಲ್ಲಿಯ ಅಂತಃಶಕ್ತಿ ಎಷ್ಟರ ಮಟ್ಟಿಗೆ ಚೇತನವಾಗಿದೆ ಎಂದು ತಿಳಿಯುತ್ತದೆ.

ಶ್ರೀ ದಿವಾನರು ಪ್ರಾರಂಭಿಸಿರುವ ಅಂಗ-ವಿಕಲ ಕೇಂದ್ರದಲ್ಲಿ ತಾಂತ್ರಿಕ ಯಂತ್ರಗಳ ಉಪಕರಣಗಳನ್ನು ಮಾಡುವ ತರಬೇತಿಗೆ ವ್ಯವಸ್ಥೆ ಮಾಡಿದ್ದಾರೆ. ಮೈಸೂರ ಎಲೆಕ್ಟ್ರಿಕಲ್ ಇಂಡಸ್ಟ್ರೀಸ್ ಹಾಗೂ ಇಂಡಿಯನ್ ಟೆಲೆಫೋನ್ ಇಂಡಸ್ಟ್ರೀಸ್— ಈ ಔದ್ಯೋಗಿಕ ಕೇಂದ್ರಗಳಿಂದ ಇವರಿಗೆ ಸಹಾಯ-ಸಹಕಾರ ದೊರೆತಿದೆ.

## ಉಪಕಾರ ಸ್ಮರಣೆ

ನಾನು ಪಾರ್ಶ್ವವಾಯು ಪೀಡಿತನಾಗಿ ಸಂಪೂರ್ಣ ಅಂಗವಿಕಲನಾದಾಗ ಇಂಡಿಯನ್ ರೆಡ್ ಕ್ರಾಸ್ ಹೋಂ ನನಗೆ ಆಶಾಕಿರಣವಾಗಿ ಸಹಕಾರ ಮಾಡಿತು. ಭಾರತ ಸೈನ್ಯದ ಅನೇಕ ಅಧಿಕಾರಿಗಳು ನನಗೆ ಸಹಾಯ ಮಾಡಿದ್ದಾರೆ. ಪ್ರೋತ್ಸಾಹ ಕೊಟ್ಟು ನನ್ನಲ್ಲಿ ಹೊಸಜೀವ ಮೂಡಿಸಿದ್ದಾರೆ. ದಿ|| ಡಾ. ಮೇಜರ್ ಭಟ್ಟಚಾರ್‌ಜಿ, ಮೇಜರ್ ಡಾ ದೊರೈರಾಜ್ ಇವರುಗಳು ನನ್ನಲ್ಲಿ ಆಶೆ-ವಿಶ್ವಾಸದ ಬೀಜ ಬಿತ್ತಿದರು. ಜ|| ತಿಮ್ಮಯ್ಯ; ಜ|| ಥೋರಾತ್, ಜ|| ಚೌದರೀ ಜ|| ಕುಮಾರಮಂಗಲಂ ಜ|| ಮಹದೇವ್‌ಸಿಂಗ್ ಇವರುಗಳು ನನ್ನಲ್ಲಿ ಬಹಳ ಶ್ರದ್ಧೆ ತೋರಿ ಅನೇಕ ವಿಧದ ಸಹಾಯ ಸಲ್ಲಿಸಿದ್ದಾರೆ. ನಾನು ಎಂ. ಎ. ಪರೀಕ್ಷೆಗೆ ಕುಳಿತಾಗ ಹಿಂದೀ ವಿಭಾಗದ ಪ್ರಾಧ್ಯಾಪಕರುಗಳಾದ ಪ್ರೊ|| ಮೊದಲಿಯೂರ್, ಪ್ರೊ|| ರಾಮಚಂದ್ರ, ಪ್ರೊ|| ಭಟ್ ಇವರುಗಳು ಮಾರ್ಗದರ್ಶನ ತೋರಿ ಸಹಕರಿಸಿದ್ದಾರೆ. ನನ್ನ ಜೀವನದಲ್ಲಿ ಪ್ರತಿ ಹೆಜ್ಜೆಗೂ ಒಬ್ಬರಲ್ಲ ಮತ್ತೊಬ್ಬರ ಸಹಾಯ ಪಡೆಯುತ್ತಲೇ ಇದ್ದೇನೆ. ಎಲ್ಲರ ಸಹಾಯ ನನ್ನನ್ನು ಜೀವಂತವಾಗಿರಿಸಿದೆ" ಎಂದಾಗ ಅವರ ಮಾತಿನಲ್ಲಿ ಕೃತಜ್ಞತೆಯ ಭಾವನೆ ತುಂಬಿ ತುಳುಕುತ್ತಿತ್ತು.

ಶ್ರೀ ದಿವಾನರನ್ನು ಧಾರವಾಡದ ಬಗ್ಗೆ ತಮ್ಮ ಪ್ರತಿಕ್ರಿಯೆ ಕೇಳಿದಾಗ "ಕರ್ನಾಟಕ ವಿಶ್ವವಿದ್ಯಾಲಯ ಕೇಂದ್ರವು ಬಹಳ ಸುಂದರವಾಗಿದೆ. ಆಗಸ ಮುಟ್ಟುವಂತೆ ನಿಂತ ಶಿಖರ ಪಡೆದ ಮುಖ್ಯ ಕಟ್ಟಡ, ಉತ್ತಮ ಉದ್ಯಾನವನಗಳು ಇದನ್ನು ನಿಜವಾದ ಛೋಟಾ ಮಹಾಬಲೇಶ್ವರವನ್ನಾಗಿ ಮಾಡಿದೆ. ನಮ್ಮ ರಾಜ್ಯಕ್ಕೇ ಏಕೆ ದಕ್ಷಿಣ ಭಾರತಕ್ಕೇ ಇದು ಒಂದು ಹೆಮ್ಮೆಯ ಕೇಂದ್ರ. ಇಂತಹ ಕಾರ್ಯವನ್ನು ನಿರ್ವಹಿಸಿದ ಉಪಕುಲಪತಿಗಳಾದ ಡಾ|| ಪಾವಟೆಯವರು ಇಲ್ಲಿ ಸರಸ್ವತೀ

ಮಂದಿರವನ್ನೇ ರಚಿಸಿದ್ದಾರೆ. ಸಾವಿರಾರು ಜನ ಇಲ್ಲಿಂದ ಸ್ಫೂರ್ತಿ ಪಡೆಯುತ್ತಿದ್ದಾರೆ." ಎಂದು ಬಹಳ ಅಭಿಮಾನದಿಂದ ಅವರು ಹೇಳಿದರು.

### ಆಶಾವಾದದ ಮೂರ್ತಿ

ಶ್ರೀ ದಿವಾನ್‌ರವರು ಅಂಗವಿಕಲರಾದರೂ ಅವರು ಜೀವನದಲ್ಲಿಯ ವಿಶ್ವಾಸ ಕಳೆದು ಕೊಂಡಿಲ್ಲ; ಜೀವನದಲ್ಲಿಯ ಆನಂದವನ್ನುಅದರ ಅಭಿದಾನವನ್ನುಅವರ ಸ್ವೀರಿಸುತ್ತಾರೆ ಅವರು ಜೀವನದಲ್ಲಿ ಬರುವ ಅಡೆತಡೆಗಳನ್ನು, ತೊಡಕು ತೊಂದರೆಗಳನ್ನು ನಿಂದಿಸುವುದಿಲ್ಲ; ಆದರೆ ಅದರಲ್ಲಿಯ ವರದಾನ, ಹಾಗೂ ಅನುಕೂಲತೆಗಳನ್ನು ಗಣನೆಗ ತೆಗದುಕೊಳ್ಳುತ್ತಾರೆ. "ಪ್ರತಿ ಕೆಟ್ಟದ್ದಕ್ಕೂ ಒಂದು ಅತಿಕೆಟ್ಟ ಸ್ಥಿತಿ ಇಲ್ಲದಿಲ್ಲ. ಯಾರಿಗಾದರೂ ಕಾಲು ಮುರಿದರೂ ಅವನು ಭಂಗವಂತನನ್ನು ಕೃತಜ್ಞತಾಪೂರ್ವಕ ಸ್ಮರಿಸಬೇಕು. ಏಕೆಂದರೆ ಮುರಿದದ್ದು ಕಾಲು ಮಾತ್ರ, ಅವನ ತಲೆಯಲ್ಲ". ಇದು ಅವರ ಜೀವನ ಸಿದ್ಧಾಂತ.

### ಅನುಕರಣೀಯ

ಶ್ರೀ ದಿವಾನರಿಗೆ ಕಾಲ್ಗಳಿಲ್ಲ— ನಿಜ. ಆದರೆ ಅವರು ಜೀವನಯಾತ್ರೆಯನ್ನು ಸಾಗಿಸಿದ್ದಾರೆ. ನಿರರ್ಥಕವಾಗಿಯಲ್ಲ; ಸಾರ್ಥಕವಾಗುವಂತೆ. ಇವರ ತುಂಬು ಆಶಾವಾದದಲ್ಲಿ ಒಂದು ಕಣ ದೇಹ ದಾರ್ಢ್ಯವಿದ್ದವರಲ್ಲಿದ್ದರೆ ಸಾಕು ಜೀವನದಲ್ಲಿ ಬೇಕಾದ್ದನ್ನು ಸಾಧಿಸಬಹುದೆಂಬ ಧೈರ್ಯ ಬಂದೀತು. ತುಂಬು ಚೇತನದ ಶ್ರೀ ದಿವಾನ್ ಅನುಕರಣೀಯ ಜೀವಂತ ಆದರ್ಶ ಮೂರ್ತಿ.



ಒಬ್ಬ ಲಕ್ಷಾಧಿಕಾರಿಯು ತನ್ನ ಶ್ರೀಮಂತಿಕೆಯ ಗುಟ್ಟಿನ ಬಗ್ಗೆ ಸಂದರ್ಶಿಸಲು ಬಂದ ಪತ್ರಿಕೋದ್ಯಮಿಯನ್ನುದ್ದೇಶಿಸಿ ಉತ್ತರಿಸುತ್ತಾ: "ಯಾವುದೇ ಕೆಲಸವಿರಲಿ; ಅದರಿಂದ ಬರುವ ಪಗಾರ ಲಾಭ ಮುಖ್ಯವಲ್ಲ—ಅದನ್ನು ಮನಃಪೂರ್ವಕವಾಗಿ, ಸರ್ವಶಕ್ತಿಯನ್ನು ತೊಡಗಿಸಿ ಯಶಸ್ವಿಯಾಗಿ ಮಾಡಬೇಕು. ತಾನು ಮಾಡುವ ಕೆಲಸದ ಯಶಸ್ಸಿನಲ್ಲಿ ಕೆಲಸಗಾರನಿಗ ಏನು ಸಮಾಧಾನ ದೊರೆಯುತ್ತದೆಯೋ, ಆ ಸಮಾಧಾನ ಕೇವಲ ಹಣಗಳಿಸುವುದರಿಂದ ದೊರೆಯುವುದಿಲ್ಲ. ಇದನ್ನು ಯಾರೂ ಮರೆಯಬಾರದು."ಇದನ್ನು ಕೇಳಿದ ಪತ್ರಿಕೋದ್ಯಮಿ: "ಈ ತತ್ವವನ್ನು ಪಾಲಿಸಲು ಪ್ರಾರಂಭಿಸಿದ ನಂತರ ನೀವು ಲಕ್ಷಾಧಿಪತಿಗಳಾದಿರಾ? " ಎಂದು ಕೇಳಿದ. ಅದಕ್ಕೆ ಉತ್ತರವನ್ನಿತ್ತ ಲಕ್ಷಾಧಿಪತಿ. " ಅಲ್ಲ, ಈ ತತ್ವವನ್ನು ನನ್ನ ನೌಕರರು ಪಾಲಿಸುವಂತೆ ಅವರ ಮನಸ್ಸಿನ ಮೇಲೆ ಬೀರಿದ್ದೇನೆ" ಎಂದು ನುಡಿದ.




# ಕಣ್ಣು—ಆರೋಗ್ಯದ ಕನ್ನಡಿ

ಗೂಗೆಯ ಕಾಲು ಮುರಿದಿರದಿದ್ದರೆ ಈ ಹೊಸ ಶೋಧಕ್ಕೆ ನಾಂದಿಯಾಗಿರುತ್ತಿತ್ತೋ ಇಲ್ಲವೋ ಗೊತ್ತಿಲ್ಲ. ಬುಡಾಪೆಸ್ಟಿನ ಬಾಲಕನೊಬ್ಬ ಗೂಗೆಯೊಂದನ್ನು ಹಿಡಿದ. ಅವನಿಗಾಗ ಹತ್ತು ವರ್ಷ. ಆಟದಲ್ಲಿ ತೊಡಗಿದ ಬಾಲಕ ಗೂಗೆಯ ಒಂದು ಕಾಲು ಮುರಿದು ಬಿಟ್ಟ. ಏನಾಶ್ಚರ್ಯ! ತಕ್ಷಣವೇ ಗೂಗೆಯ ಕಣ್ಣಿನಲ್ಲೊಂದು ಕರಿ ಚುಕ್ಕೆ ಕಾಣಿಸಿಕೊಂಡಿತು.

ಕಾಲು ಮಾಯುತ್ತ ಬಂದಂತೆಲ್ಲ ಈ ಚುಕ್ಕೆಯ ಸುತ್ತಲೂ ಒಂದು ಬಿಳಿರೇಖೆ ಕಾಣಿಸಿಕೊಂಡು ಕಾಲು ಪೂರ್ಣ ಗುಣವಾದ ಮೇಲೆ ಚುಕ್ಕೆ ಮಾಯವಾಗಿತ್ತು.

ಈ ಕುತೂಹಲಕಾರಿಯಾದ ಘಟನೆ ಆ ಬಾಲಕನ ಮನದಲ್ಲಿ ಅಚ್ಚಳಿಯದೇ ಉಳಿಯಿತು. ಅದೇ ಬಾಲಕನು ಮುಂದೆ ಬೆಳೆದು ಡಾಕ್ಟರನಾದ. ಅವನಿಗೆ ಈ ಬಾಲ್ಯದ ನೆನಪು ಹೊಸ ಶೋಧಕ್ಕೆ ಸ್ಫೂರ್ತಿಯನ್ನು ನೀಡಿತು.

ಕೆಲವು ರೋಗಗಳನ್ನು ಡಾಕ್ಟರರು ಮೊದಲಿನಿಂದಲೂ ಕಣ್ಣಿನ ಸಹಾಯದಿಂದ ಗುರುತಿಸುತ್ತಾರೆ. ರೋಗನಿದಾನ ವೈದ್ಯ ವಿಜ್ಞಾನದ ಮೊದಲು ಹಂತ. ಕಾಮಣಿ

ಯಾದಾಗ ಕಣ್ಣು ಹಳದಿಯಾಗುವದು ಎಲ್ಲರಿಗೂ ಗೊತ್ತು. ಆದರೆ ಎಲ್ಲ ರೋಗ ಗಳ ನಿದಾನವನ್ನು ಕಣ್ಣಿನ ಪರೀಕ್ಷೆ ಇಂದಲೇ ಮಾಡಬಹುದೆ ? ಹೌದೆಂಬುದೇ ಈ ಡಾಕ್ಟರರ ಉತ್ತರ. ಆಸ್ಟ್ರೇಲಿಯಾದ ಜಾಗತಿಕ ಕನಿನಿಕಾ ಸಂಘದಲ್ಲಿಂದು ಅನೇಕ ಸಾವಿರ ಡಾಕ್ಟರರು ಸದಸ್ಯ ರಾಗಿದ್ದಾರೆ. [World Iridology Fellowship ]

ಈ ಕನಿನಿಕಾ ನಿದಾನ ಪದ್ಧತಿಯಲ್ಲಿ ಕಣ್ಣಿನ ಕಪ್ಪು ಭಾಗದ [Iris] ರಚನೆ ಯನ್ನು ಅಭ್ಯಸಿಸುವದೇ ಮುಖ್ಯ ವಿಷಯ. ಕಣ್ಣಿನ ಕನಿನಿಕೆಯನ್ನು ಗಡಿ ಯಾರದ ಡಯಲ್‌ದಲ್ಲಿಯಂತೆ ವಿಭಾಗಿಸು ತ್ತಾರೆ. ಒಂದು ಕಣ್ಣಿನಲ್ಲಿ ಗಡಿಯಾರದ ಮುಳ್ಳಿನ ಚಲನೆಯನ್ನು ಅನುಸರಿಸಿ [clockwise] ಮತ್ತು ಇನ್ನೊಂದು ಕಣ್ಣಿನಲ್ಲಿ ಅಪ್ರದಕ್ಷಿಣಾ ರೀತಿಯಲ್ಲಿ ವಿಭಾಗ ಗಳನ್ನು ಗುರುತಿಸುತ್ತಾರೆ ಒಂದೊಂದು ರೋಗಕ್ಕೂ ಒಂದೊಂದು ಭಾಗದಲ್ಲಿ ಚಿಕ್ಕೆ ಕಂಡು ಬರುತ್ತದೆಂದು ಕನಿನಿಕಾ ನಿದಾನವನ್ನು ಅನುಸರಿಸುವ ಡಾಕ್ಟರರ ಅಭಿಮತ.

ಒಮ್ಮೊಮ್ಮೆ ಅತ್ಯಾಶ್ಚರ್ಯಕರವಾದ ರೀತಿಯಲ್ಲಿ ರೋಗಗಳನ್ನು ಗುರುತಿಸಿದ ವರದಿಗಳಿವೆ. ಕನಿನಿಕಾ ತಜ್ಞನೊಬ್ಬ ತನ್ನ ರೋಗಿಯ ಕಣ್ಣನ್ನು ಪರೀಕ್ಷಿಸಿ ಆರು ಘಂಟೆಯ ಸ್ಥಳವಲ್ಲೊಂದು ಚಿಕ್ಕೆ ಯನ್ನು ನೋಡಿದವನೇ ನಿನಗೆ ಮೂತ್ರ ಪಿಂಡದ ತೊಂದರೆಯುಲ್ಲವೆ? ಎಂದು ಕೇಳಿ ತನ್ನ ರೋಗಿಯನ್ನು ಆಶ್ಚರ್ಯ ಗೊಳಿಸಿದ.

ನಿವೃತ್ತ ಕರ್ನಲನೊಬ್ಬ ಒಂದುಸಲ ಕನಿನಿಕಾ ತಜ್ಞನನ್ನು ಸಂದರ್ಶಿಸಿದ "ನನಗೆಯುದ್ಧ ಕಾಲದ ಗಾಯ ತೊಂದರೆ ಕೊಡುತ್ತಿದೆ" ಎಂದನಾತ.

ಕಣ್ಣಿನ ಪರಿಕ್ಷೆ ನಡಿಸಿದ ತಜ್ಞ ತನ್ನ ಪರೀಕ್ಷೆಯ ನಂತರ "ಗಾಯ ಎದೆಯ ಗೂಡಿನಲ್ಲಿರಬೇಕು" ಎಂದ. ಡಾಕ್ಟರನ ನಿದಾನ ಎಷ್ಟು ಸರಿಯಾಗಿತ್ತೆಂದರೆ ಕರ್ನಲ್ ಮುಗ್ಧನಾಗಿ ಬಿಟ್ಟ.

ಥೈರಾಯಿಡ ಗ್ರಂಥಿ ಇಂದ ಏನಾದರೂ ತೊಂದರೆ ಇದ್ದರೆ ಎರಡೂವರೆ ಘಂಟೆಯ ಸ್ಥಳದಲ್ಲಿ ಒಂದು ಮಸುಕಾದ ಚಿಕ್ಕೆ ಕಾಣಬೇಕು ಎಂದೊಬ್ಬ ಕನಿನಿಕಾ ನಿದಾನ ತಜ್ಞ ಹೇಳುತ್ತಾನೆ.

"ಅಂತಃಚಕ್ಷು ಇದೆಯೋ ಇಲ್ಲವೋ ಅದು ಆತ್ಮ ದರ್ಶನಕ್ಕೆ ಕನ್ನಡಿ ಎನ್ನುತ್ತಾರೆ ಅನೇಕರು. ಆದರೆ ಬಾಹ್ಯ ಚಕ್ಷು ನಮ್ಮ ಶರೀರ ಆರೋಗ್ಯದ ಕನ್ನಡಿ" ಎನ್ನುತ್ತಾರೆ ಇದರ ಪ್ರತಿಪಾದ ಕರು ? ಆದರೆ ನಿಮ್ಮ ನೀರೀಕ್ಷಣೆಗೆ ವೈಜ್ಞಾನಿಕ ಆಧಾರಗಳಾವವು ಎಂದಾಗ ಮಾತ್ರ ಇದರ ನಾನೀ ಎನ್ನುವ ಪ್ರತಿ ಪಾದಕರೂ ತುಸುಮಟ್ಟಿಗೆ ನಿರುತ್ತರ ರಾಗುತ್ತಾರೆ. "ಇದರ ಮೂಲಕಾರಣ ಇನ್ನೂ ವಿಜ್ಞಾನದ ಮುಂದಿರುವ ರಹಸ್ಯ ವಾಗಿದೆ "ಎನ್ನುತ್ತಾರೆ ಕೆಲವರು. ಲಂಡನ್

ದೂಲ್ಲೊಂದು ಕನಿನಿಕಾ ನಿದಾನ ಆಸ್ಪತ್ರೆಯನ್ನು ನಡೆಸುತ್ತಿರುವ ಮೈಕೇಲ್ ವ್ಯಾನ ಸ್ವ್ರಾಟನ್ ಎಂಬವರು, "ನಿಜವಾಗಿಯೂ ರೋಗದ ಸಂದೇಶ ಕಣ್ಣಿಗ ಹೇಗೆ ತಲುಪುವದೆಂಬುದು ಚಿದಂಬರ ರಹಸ್ಯವಾಗಿದೆ" ಎಂದು ಉದ್ಗರಿಸುತ್ತಾರೆ.

ಇದನ್ನು ನಂಬದ ಮಡಿವಂತ ಡಾಕ್ಟರರೂ ಇದರತ್ತ ಕಣ್ಣು ಹೊರಳಿಸಿದ್ದಾರೆ. ಆದರೂ ಸಂಶಯ ದೃಷ್ಟಿ ಇಂದಲೇ ಈ ನಿದಾನ ಪದ್ಧತಿಯನ್ನು ಉಪಯೋಗಿಸುತ್ತಾರೆ. ಏನಿದ್ದರೂ ಅಪಾಯಕಾರಿಯಲ್ಲವಲ್ಲ ಎಂಬುದೊಂದು ಸಮಾಧಾನ ಈ ಜನರಿಗೆ. ಹತ್ತಿರು ದೇಶಗಳಲ್ಲಿಯ ಸಾವಿರಾರು ಡಾಕ್ಟರರು ವಿವಿಧ ಸ್ವಾಗತವನ್ನಿತ್ತಿದ್ದಾರೆ ಈ ವಿದ್ಯೆಗೆ. "ಎಂಥ ಉಪಾಯ" ಎಂದವರೂ ಉಂಟು. "ಟ್ರೈ ಮಾಡೋಣ" ಎಂದವರೂ ಉಂಟು. "ಎಲ್ಲಾದರೂ ಉಂಟೆ" ಎಂದು ಅಪನಂಬಿಕೆ ವ್ಯಕ್ತ ಮಾಡಿದವರೂ ಉಂಟು.

ಹೀಗೆ ಉಳಿದೀತು. ಒಂದು ದಿನ ಶರೀರ ಮತ್ತು ಕಣ್ಣಿನಲ್ಲಿ ಕಂಡು ಬರುವ ಸೂಚನಾತ್ಮಕ ಚಿಕ್ಕೆ ಇವುಗಳ ಸಂಬಂಧ ನಿಖರ ವೈದ್ಯಕೀಯ ಮೂಶೆಯಲ್ಲಿ ಕಾಯ್ದು ಒರೇಗಲ್ಲಿಗೆ ಹತ್ತಲೇ ಬೇಕಲ್ಲ?" ಎಂದೊಬ್ಬ ಡಾಕ್ಟರ ಉದ್ಗರಿಸಿದ್ದಾನೆ.

• • •

## ದೇವರಿಗೂ ಅನ್ನವಿಲ್ಲ !

ಆಹಾರ ಕೊರತೆಯಿಂದ ಕೇರಳದಲ್ಲಿ ದೇವರುಗಳು 'ಉಪವಾಸ' ಬಳಲುತ್ತಿದ್ದಾರೆಂದು ವರದಿಯಾಗಿದೆ. ಕಳೆದ ವರ್ಷ ಗುರುವಾಯುವಿ ದಿನ ಕೃಷ್ಣ ಪರಮಾತ್ಮನಿಗೆ ಮದ್ರಾಸವು ಅಕ್ಕಿ ನೀಡಿತ್ತೆಂದು 'ಅನ್ನಾಭಾವ' ದಿಂದ ಪಾರಾಗಿದ್ದನಂತೆ. ಈ ಸಲ ಮದ್ರಾಸ ಸರ್ಕಾರ ಅಕ್ಕಿ ಕೊಡಲು ನಿರಾಕರಿಸಿದೆಯೆಂದು ವೇದಿ ಬಂದಿದೆ.

ಬಹುಶಃ ನಾಸ್ತಿಕರ ರಾಜ್ಯದಿಂದ ಬಂದ ಅಕ್ಕಿ ತನಗೆ ನಿಷೇಧವೆಂದು ಕೇರಳದಲ್ಲಿಯ ಭಗವಂತ ಉಪವಾಸಕ್ಕೆ ತೊಡಗಿದ್ದಾನೋ ಅಥವಾ ಭಕ್ತರು 'ಜನಾದರ್ನಾ ದೀನ ರಕ್ಷಕಾ ! ನಮ್ಮ ಹಸಿವೆಯನ್ನು ನಿವಾಇಸು' ಎಂದು ಪ್ರಾರ್ಥಿಸಿದರೆ ಆಗ ದೇವರು " ಭಕ್ತ ಶಿಖಾಮಣಿಗಳೇ ! ನನಗೇ ಇಲ್ಲದ ಅನ್ನ ನಿಮಗೇನು ಕೊಡಲಿ "ಎಂದಾಗಲಿ" ನದ್ನ ಮಾರ್ಗ ನೀವು ಹಿಡಿದು ಉಪವಾಸ ಮಾಡ. ಎಲ್ಲವೂ ನೆಟ್ಟಗಾಗುತ್ತತೆ " ಎಂದಾನಲೀ ಹೇಳ ಬಹುದೆಂದು ಈ ಉಪಾಯ ಹೂಡಿದ್ದಾನೋ ಆದೇವರಿಗೆ ಗೂತ್ತು. ಆ ದಯಮಯನ ಲೀಲೆ ಅಪಾರ ' ಅಪಾರ ' ಎಂದರೆ ಆ ಲೀಲೆಗಳಿಂದ ಪಾರಾಗುವದು ಕಷ್ಟವೆಂದು ಅರ್ಥನಲ್ಲ). ಆ ದೀನ ರಕ್ಷಕನ ಹಸಿವನ್ನು ಆ ದೀನ ರಕ್ಷಕನೇ ಪಾರು ಮಾಡಬೇಕು.

# ಚಾಕುವಿನ ಪುನರ್ಜನ್ಮ








ಪತ್ತೇದಾರಿ ಕಥೆ ಕಾದಂಬರಿಗಳಲ್ಲಿ ಅನೇಕ ಕೌತುಕಮಯ ಸನ್ನಿವೇಶಗಳಲ್ಲಿ ಚಾಕುವಿನ ಉಪಯೋಗ ಕಂಡು ಬರುತ್ತದೆ. ಖೂನಿಮಾಡಲೋ, ಅಥವಾ ಹೆದರಿಸಿ ಜೀವ ಉಳಿಸಿಕೊಳ್ಳಲೋ, ಇಲ್ಲವೇ ಹಗ್ಗ ಕತ್ತರಿಸಿ ಪಾರಾಗಲೋ? ಯಾವದೋ ಒಂದಕ್ಕೆ ಚಾಕು ಅಂಥ ಸಾಹಿತ್ಯದಲ್ಲಿ ಕಂಡು ಬರುವ ಸಾಮಾನ್ಯ ಉಪಕರಣ.

ಆದರೆ ಇತ್ತೀಚಿನ ವರೆಗೆ ಚಾಕುವಿನ ವಿಸ್ತಾರ ಆಕಾರ ಗಾತ್ರಗಳಲ್ಲಿವ್ಯತ್ಯಾಸವನ್ನು ಕಾಣಬಹುದೇ ಹೊರತು ಅದನ್ನು ತಯಾರಿಸುವ ವಸ್ತುಗಳಲ್ಲಿ ಹೆಚ್ಚು ವೈಶಿಷ್ಟ ವಿರಲಿಲ್ಲ. ಅತ್ಯಂತ ಕೌತುಕಮಯವಾದ ವಸ್ತುಗಳಿಂದ ಚಾಕು ತಯಾರಿಸಿ ಅಪರಾಧ ವೆರಗಿದ ಉದಾಹರಣೆಗಳು ಅಮೆರಿಕದ ಪೋಲಿಸರಿಗೆ ವರದಿಯಾಗಿವೆ.

ಪ್ಲೆಕ್ಸಿಗ್ಲಾಸ ಇಲ್ಲವೆ ಲ್ಯುಸೈಟ ಎಂಬ ಪ್ಲಾಸ್ಟಿಕ್ಕಿನಿಂದ ತಯಾರಿಸಿದ ಆ್ಯಶ್‌ಟ್ರೆ (Ashtray) ಯನ್ನು ವಿದ್ಯುತ್ ಒಲೆಯಲ್ಲಿ ಕಾಯಿಸಿ ಅದನ್ನು ಬೇಕಾದ ಆಕಾರಕ್ಕೆ ತಿರುಗಿಸಿ ಓರ್ವ ಗೃಹಿಣಿ ಚಾಕು ತಯಾರಿಸಿದಳಂತೆ. ಸ್ಫಟಿಕದಂತೆ ಪಾರದರ್ಶಕವಾದ ಈ ಪ್ಲಾಸ್ಟಿಕ ಆ್ಯಶ್‌ಟ್ರೆ ಮಿದುವಾಗಿ ಕಾಯ್ದ ನಂತರ ಚಾಕುವಾಯಿತು. ಆರಲು ಬಿಟ್ಟರೆ ತಿರೀತು ಚಾಕು ಸಿದ್ಧವಾದಂತೆ.

ಅಪರಾಧ ವೆಸಗಿದ ನಂತರ ಇದನ್ನು ಪುನಃ ಅತ್ಯಂತ ಸುಲಭವಾಗಿ ಆಶ್‌ಟ್ರೆಯಾಗಿ ಪರಿವರ್ತಿಸಿದಳು ಆ ಮಹಿಳೆ. ಕೇವಲ ಅದನ್ನು ನೀರಿನಲ್ಲಿ ಹಾಕಿ ಸಾವಕಾಶವಾಗಿ ಕಾಯಿಸಿದರೆ ಮೊದಲಿನ ಆ್ಯಶ್‌ಟ್ರೆ ಮತ್ತೆ ಸಿದ್ಧವಾಗುತ್ತದೆ. ನೋಡುವವರಿಗೆ ಪ್ಲಾಸ್ಟಿಕ್ ವಸ್ತುವಿಗು ಪೂರ್ವ ಸ್ಥಿತಿಯು ನೆನಪಿತ್ತೆ ಎನ್ನಿಸುವಷ್ಟು ಸುಲಭವಾಗಿ ಈ ಕ್ರಿಯೆ ಜರುಗುತ್ತದೆ.

ಮಲಗಿದ ತನ್ನ ಪತಿಯನ್ನು ಇಂಥ ಚಾಕುವಿನಿಂದ ಕೊಂದಳೆಂದು ಹೇಳುವ ಕಥೆ ಕಾಲ್ಪನಿಕವಾದದ್ದಾದರೂ ಅದರ ವೈಜ್ಞಾನಿಕ ಅಂಶ ಸತ್ಯವಾದದ್ದು. ಲುಸೈಟ ಎಂಬ ಪ್ಲಾಸ್ಟಿಕ್ಕಿಗೆ ಈ ಪೂರ್ವ ಸ್ಥಿತಿಯನ್ನು ಪುನಃ ಹೊಂದುವ ಗುಣ-ಧರ್ಮವಿದೆ ಎಂದು ಕಂಡುಬಂದಿದೆ.

• • •

## ಮಂತ್ರಿ—ಮಂಗ

"ಪ್ರಧಾನ ಮಂತ್ರಿ ಶ್ರೀಮತಿ ಇಂದಿರಾ ಗಾಂಧಿಯವರು ತಿರುಪತಿಗೆ ಭೆಟ್ಟಿ ಕೊಟ್ಟಾಗ ತಿರುಪತಿದೇವಾಲಯದಲ್ಲಿದ್ದ ಭಂಗಾರದ 'ವಿಮಾನ ವೆಂಕಟೇಶ್ವರುಲು ಶಿಖರವನ್ನು ನೋಡಲು ತೆರಳಿದರು. ಎರಡು ಮಂಗಗಳು ಪ್ರಧಾನಿಗಳ ನೋಟಕ್ಕೆ ಅಡ್ಡವಾಗಿ ಕುಳಿತಿದ್ದವು. ಪ್ರಧಾನಿಗಳೊಡನೆ ಇದ್ದ ಆಂಧ್ರದ ಮುಖ್ಯ ಮಂತ್ರಿ ಶ್ರೀ ಬ್ರಹ್ಮಾನಂದರೆಡ್ಡಿಯವರು ಆ ಮಂಗಗಳಿಗೆ ಅಲ್ಲಿಂದ ಜಿಗಿದು ಹೋಗಲು ಆಜ್ಞೆ ಮಾಡಿದರು. ಈ ಆಜ್ಞೆಯನ್ನು ಶಿರಸಾವಹಿಸಿ ನಡೆದ ಮಂಗಗಳು ಹಾರಿಹೋದವು ಪ್ರಧಾನಿಗಳಿಗೆ ಗೋಪುರದ ದರ್ಶನವಾಯಿತು. —ಸುದ್ದಿ.

× × × ×

ಪ್ರಜಾರಾಜ್ಯದಲ್ಲಿ ಮಂಗಗಳು ಮಂತ್ರಿಗಳ ಮಾತು ಕೇಳುತ್ತವೆ ಎನ್ನುವುದಕ್ಕೆ ಇದೊಂದು ಉದಾಹರಣೆಯೇ ?

# ವರ್ಣಮಾಲೆಯಲ್ಲಿ ಗಣಪತಿ ಸ್ತೋತ್ರ

ಶ್ರೀ

ಅನುಪಮ ಮಹಿಮಾಂಭೋದಿ ಗಣೇಶಾ
ಆದಿ ಪೂಜ್ಯನುತ ದೇವ ಗಣೇಶಾ
ಇಷ್ಟ ಫಲಪ್ರದ ಸುಮುಖ ಗಣೇಶಾ
ಈಶತನಯ ಮಹನೀಯ ಗಣೇಶಾ
ಉರಗ ಭೂಷಣ ವಿಭವ ಗಣೇಶಾ
ಊರ್ಜಿತ ದನುಜ ನಿಪಾತ ಗಣೇಶಾ
ಋಷಿಗಣ ವಂದಿತ ವರದ ಗಣೇಶಾ
ಎಡರುಗಳನು ಕಡೆದಿಡುವ ಗಣೇಶಾ
ಏಕದಂತ ನಿತ್ಯಾತ್ಮ ಗಣೇಶಾ
ಐಕ್ಯಮತನಿಕ್ಷೇಪ ಗಣೇಶಾ
ಒಲಿಯುತ ಭಕ್ತರ ಪೊರೆವ ಗಣೇಶಾ
ಓಂಕಾರ ಪ್ರಿಯ ಪರಮ ಗಣೇಶಾ
ಔಪಾಸಕರಭಿಮಾನಿ ಗಣೇಶಾ
ಅಂಬಾತನಯನುಜಾತ ಗಣೇಶಾ
ಅಃಶತ್ರು ವಿನಾಶ ಗಣೇಶಾ
ಕರುಣಾಂಕರ ಕಮನೀಯ ಗಣೇಶಾ
ಖೇಚರಗಾನಾನಂದ ಗಣೇಶಾ
ಗಜಮುಖ ನಾಮದಿ ಮೆರೆವ ಗಣೇಶಾ
ಘಾತುಕ ದುರ್ಜನ ಭಂಗ ಗಣೇಶಾ
ಚಂದ್ರಗರ್ವ ವಿಧ್ವಂಸ ಗಣೇಶಾ
ಛತ್ರಾಲಂಕೃತ ಚಲುವ ಗಣೇಶಾ
ಜನನ ಮರಣ ಭವರಹಿತ ಗಣೇಶಾ
ಝೇಂಕೃತ ಕಿಂಕಿಣಿಯಾಂತ ಗಣೇಶಾ
ತತ್ವಗಾನಾ ನಂದ ಗಣೇಶಾ

ಥಳ ಥಳಪಾಮಣಿ ಮುಕುಟ ಗಣೇಶಾ
ದುಂಡು ವಿನಾಯಕವೆನುತ ಗಣೇಶಾ
ಧರೆಯೊಳು ಪರಮ ಪಾವನ ಗಣೇಶಾ
ನರೋತ್ತಮಾರ್ಚಿತ ಚರಣ ಗಣೇಶಾ
ಪರಮ ಪೂಜ್ಯ, ನವತಾರ ಗಣೇಶಾ
ಫಾಲ ಚಂದ್ರನುತ ಲೀಲ ಗಣೇಶಾ
ಬದ್ಧ ಪದ್ಮಾಸನಸ್ಥ ಗಣೇಶಾ
ಭವಾನಿ ತನಯ ಸುಕುಮಾರ ಗಣೇಶಾ
ಮೂಷಕ ವಾಹನ ಧೀರ ಗಣೇಶಾ
ಯದುಕುಲ ನಂದನ ನಮಿತ ಗಣೇಶಾ
ರತ್ನ ಖಚಿತ ಕಿರೀಟ ಗಣೇಶಾ
ಲಕ್ಷಗುಣ ಸಂಪೂರ್ಣ ಗಣೇಶಾ
ವಕ್ರತುಂಡ ರಿಪು ಗಂಡ ಗಣೇಶಾ
ಶಂಕರ ಸುತ ಸುಕುಮಾರ ಗಣೇಶಾ
ಷಣ್ಮುಖ ಸೋದರ ಸಿದ್ಧಿಗಣೇಶಾ
ಸಕಲಾಗಮ ಪರಿಪೂರ್ಣ ಗಣೇಶಾ
ಹರಿ ಹರ ವಿಧಿನುತಚರಣ ಗಣೇಶಾ
ಕ್ಷೇತ್ರ ಗುಣ ಸಂಪೂರ್ಣ ಗಣೇಶಾ
ತ್ರಯಂಬಕ ನಾಮದಿ ಮೆರೆವ ಗಣೇಶಾ
ಜ್ಞಾನಗಮ್ಯ ಸರ್ವಜ್ಞ ಗಣೇಶಾ
ಜಯ ಜಯ ಸಿದ್ಧಿ ಗಣೇಶಾ
ಜಯ ಜಯ ಮಂಗಳ ರೂಪ ಗಣೇಶಾ
ಜಯಾ ಜಯಾ ಮಂಗಳ ಚರಿತ ಗಣೇಶಾ

— ಶ್ರೀ ಶಂಕರಭಟ್ಟ ಕರ್ತಕೋಟಿ

# ಕರ್ನಾಟಕದಲ್ಲಿ ದೇವಾಲಯಗಳ ವಾಸ್ತುಶಿಲ್ಪ ಬೆಳವಣಿಗೆ

[ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಸಂಶೋಧನೆ ಸಂಸ್ಥೆಯವರ ಆಶ್ರಯದಲ್ಲಿ ಕಲಕತ್ತಾ ವಿಶ್ವವಿದ್ಯಾಲಯದ ಪ್ರಾಚ್ಯವಸ್ತುಶಾಸ್ತ್ರ ವಿಭಾಗದ ಮುಖ್ಯಸ್ಥರೂ, ತಜ್ಞ ಕಲಾವಿಮರ್ಶಕರೂ ಆದ ಡಾ|| ಎಸ್. ಕೆ. ಸರಸ್ವತಿಯವರ ವಿಸ್ತರಣೋಪನ್ಯಾಸವನ್ನು ಏರ್ಪಡಿಸಲಾಗಿತ್ತು. "ಕರ್ನಾಟಕದಲ್ಲಿ ದೇವಾಲಯಗಳ ವಾಸ್ತುಶಿಲ್ಪ ಬೆಳವಣಿಗೆ" ಎಂಬ ವಿಷಯದ ಬಗ್ಗೆ ಶ್ರೀಯುತರು ವಿಶ್ಲೇಷಣಾತ್ಮಕವಾಗಿ ಮಾತನಾಡಿದರು. ಅವರ ಭಾಷಣಗಳ ಸಾರಾಂಶವನ್ನು ಇಲ್ಲಿ ಸಂಗ್ರಹಿಸಲಾಗಿದೆ — ಸಂ.]

ದೇವಾಲಯಗಳ ರಚನೆಯಲ್ಲಿ ಕರ್ನಾಟಕದ ಶಿಲ್ಪಿಗಳು ತಮ್ಮದೇ ಆದ ವಿಶಿಷ್ಟಶೈಲಿಯನ್ನು ರೂಪಿಸಿಕೊಂಡಿದ್ದರು. ಈ ಶೈಲಿಯನ್ನು ವಿದ್ವಾಂಸರು ಚಾಳುಕ್ಯ' ಶೈಲಿ ಎಂದು ಕರೆದರು. ಆದರೆ ಯಾವುದೇ ಶಿಲ್ಪಶೈಲಿಯನ್ನು ಯಾವದೇ ರಾಜವಂಶದ ಹೆಸರಿನ ಮೇಲೆ ಕರೆಯುವುದು ಸೂಕ್ತವಲ್ಲ. ಭೌಗೋಲಿಕ ವಿಭಾಗಗಳಗನುಸಾರವಾಗಿ ಆಯಾ ಭಾಗಗಳ ಶಿಲ್ಪಶೈಲಿಗಳನ್ನು ಹೆಸರಿಸುವುದು ಸೂಕ್ತ. ಯಾವ ಶಿಲ್ಪ



ಶೈಲಿಯು ಕೇವಲ ಯಾವುದಾದರೊಂದು ರಾಜವಂಶದ ಆಶ್ರಯದಲ್ಲಿ ಬೆಳೆದಿಲ್ಲವಾದ್ದರಿಂದ ಪ್ರಾದೇಶಿಕ ಆಧಾರದ ಹೆಸರುಗಳು ಉಚಿತವಾದದ್ದು.

ಈ ಅಂಶವನ್ನು ವಿವರಿಸಬೇಕೆಂದರೆ ದ್ರಾವಿಡ ಶೈಲಿಯು ಪ್ರಾಥಮಿಕ ಹಂತದಲ್ಲಿ ಪಲ್ಲವರ ಆಶ್ರಯದಲ್ಲಿ ಬೆಳೆಯಿತು. ಅದು ಪರಿಪಕ್ವ ಹೊಂದಿದ್ದು ಚೋಳರಾಜರ ಆಶ್ರಯದಿಂದ. ವಿಜಯ ನಗರ ರಾಜರ ಪ್ರೋತ್ಸಾಹದಲ್ಲಿ ಅದು ಅತ್ಯುನ್ನತ ಸ್ಥಿತಿಗೇರಿತು. ಮಧ್ಯಯುಗದಲ್ಲಿ (Medieval Period) ರಾಜವಂಶಗಳ ಏರಿಕೆ, ಸ್ಥಾನಪಲ್ಲಟ, ಪತನ ಆಗಿಂದಾಗ್ಗ್ಯೆ ಆಯಿತು.

ಚಾಳುಕ್ಯ ವಾಸ್ತುಶಿಲ್ಪಶೈಲಿಯು ಚಾಳುಕ್ಯರ ಕಾಲದಲ್ಲಿ ಉದ್ಭವಿಸಿದ್ದು ನಿಜವಾದರೂ ಅದು ಚಾಳುಕ್ಯವಂಶದ ಪತನವಾದ ಅನೇಕ ವರ್ಷಗಳ ನಂತರದ ಮೇಲೆ ಪರಿಪಕ್ವವಾಯಿತು. ಈ ವಾಸ್ತು-ಶಿಲ್ಪಶೈಲಿ ಚಾಳುಕ್ಯ ಸಂಸ್ಥಾನಕ್ಕೆ ಮಾತ್ರ ಸೀಮಿತಗೊಂಡಿರದೆ ಅನೇಕ ಭಾಗಗಳಿಗೆ ವಿಸ್ತಾರಗೊಂಡಿತು. ಈ ಎಲ್ಲ ಕಾರಣದಿಂದ ಈ ವಾಸ್ತುಶಿಲ್ಪಶೈಲಿಯನ್ನು 'ಚಾಳುಕ್ಯ ಶೈಲಿ' ಎನ್ನುವುದಕ್ಕಿಂತ "ಕರ್ನಾಟಕ ಶೈಲಿ" ಎನ್ನುವುದೇ ಸಮಂಜಸವಾದೀತು.

ವಾಸ್ತುಶಿಲ್ಪಶಾಸ್ತ್ರಗಳಲ್ಲಿ 'ನಾಗರ' 'ದ್ರಾವಿಡ' ಮತ್ತು 'ವೇಸರ' ಎಂಬ ಮೂರು ಬಗೆಯ ಶೈಲಿಗಳನ್ನು ವಿವೇಚಿಸಲಾಗಿದೆ. ಈ ಶೈಲಿಗಳನ್ನು ಅಭ್ಯಾಸಮಾಡಿದಾಗ ಈ ಹೆಸರುಗಳು ಪ್ರಾದೇಶಿಕ ಆಧಾರದ ಮೇಲೆಯೇ ರಚಿಸಲಾಗಿದೆಯೆಂದು ಸಿದ್ಧವಾಗುತ್ತದೆ. ಉತ್ತರದ ಹಿಮಾಲಯದಿಂದ ವಿಂಧ್ಯಾ ಪರ್ವತಗಳವರೆಗಿನ ಭಾಗದಲ್ಲಿಯ ಪರಂಪರಾನುಗತ ಆರ್ಯಾವರ್ತಕ್ಕೆ 'ನಾಗರಶೈಲಿ' ಎಂದೂ, ಕೃಷ್ಣೆಯಿಂದ ಕನ್ಯಾಕುಮಾರಿಯ ವರೆಗಿನ ದಕ್ಷಿಣಭಾಗದ ದೇವಾಲಯಗಳ ವಾಸ್ತುಶಿಲ್ಪ ಶೈಲಿಗೆ 'ದ್ರಾವಿಡ' ಎಂದೂ ಕರೆಯಲಾಗುತ್ತಿತ್ತು. ಈ ಶೈಲಿಗಳ ಸೂಕ್ಷ್ಮ ಪರಿಶೀಲನೆ ಮಾಡಿದರೆ ನಾಗರ ಶೈಲಿಯ ದೇವಾಲಯ ಶಿಖರಗಳಲ್ಲಿ ಸ್ವಲ್ಪ ಪೀನ ಮಧ್ಯವಾಗಿದು ಮತ್ತು ಎತ್ತರವಾಗಿದ್ದು, ಎದ್ದು ಕಾಣುತ್ತದೆ. ದ್ರಾವಿಡ ಶೈಲಿಯ ಶಿಖರಗಳು ಅಷ್ಟೇನು ಎತ್ತರವಾಗಿರದೆ ಅಡ್ಡ ಹಂತಗಳಾಗಿ ವಿಂಗಡಿಸಲ್ಪಟ್ಟು, ಮೇಲೆ ಮೇಲೆ ಹೋದಾಗಲ್ಲ ಸಣ್ಣದಾಗುತ್ತ ಶಂಖದಾಕೃತಿಯ ಹಾಗೆ ಕಾಣುವುದು. ಇದರಲ್ಲಿ ಅಡ್ಡಗಲವು ಚೆನ್ನಾಗಿ ಸ್ಫುಟವಾಗಿರುವದು. ಶೈಲಿಗಳ ಮೂಲವು ಪ್ರಾಯಶಃ ಗುಪ್ತರ ದೇವಾಲಯಗಳಲ್ಲಿದ್ದಂತೆ ತೋರುತ್ತದೆ.

ಮೂರನೆಯ ರೀತಿ 'ವೇಸರ'. ಈ ಶೈಲಿಯು ವಿಂಧ್ಯಾಪರ್ವತಗಳಿಂದ ಕೃಷ್ಣಾ ತೀರದ ತನಕ ಇರುವ ದೇವಾಲಯಗಳಲ್ಲಿ ಕಾಣುತ್ತದೆ. ಈ ಶೈಲಿಯು ವಿಶಿಷ್ಟವಾದುದಾದರೂ ಸ್ವತಂತ್ರ ಶೈಲಿಯಲ್ಲ. ಇದು ಆಗಿನ ಕಾಲದಲ್ಲಿ ವಾಡಿಕೆಯಲ್ಲಿದ್ದ 'ನಾಗರ' ಹಾಗೂ 'ದ್ರಾವಿಡ' ಶೈಲಿಗಳ ಚಮತ್ಕಾರದ ಮಿಶ್ರವಾಗಿತ್ತು. ಆದರೆ ಈ ಮಿಶ್ರಣದ ಸಂಯಮವು ಈ ಶೈಲಿಗೆ ವಿಶಿಷ್ಟತೆ ಹಾಗೂ ಪ್ರತ್ಯೇಕತೆಯನ್ನು

ಕೊಡುವಂತೆ ಇತ್ತು. 'ವೇಸರಿ' ಪದದ ಅರ್ಥ 'ಮಿಶ್ರಣ' ಎಂದೂ ಇದೆ. ಇದೂ ಬಹಳ ಮಹತ್ವವಾದ ವಿಷಯು. ಈ ಶೈಲಿಯನ್ನು ಕ್ರಿ. ಶ. ೧೧ನೆಯ ಶತಮಾನ ಕಾಲದ ಶಿಲ್ಪಶಾಸ್ತ್ರ ಗ್ರಂಥಗಳು ಉಲ್ಲೇಖಿಸಿವೆ. ಇದಕ್ಕೆ ಈ ಗ್ರಂಥಗಳಲ್ಲಿ ಮನ್ನಣೆಯೂ ದೊರೆತಿದೆ.

ರಿಂದ ಇದು 'ಕರ್ನಾಟ' ಎಂಬ ಪದದ ಪರಿಶಿಷ್ಟ ಪದವಿರಬಹುದು ಎಂದು ತೋರುತ್ತದೆ. ಹಾಗೆಯೇ, ಭೋಜನು ತನ್ನ 'ಸಮರಾಂಗಣ ಸೂತ್ರಧಾರ' ದಲ್ಲಿ 'ಬಖಾಲೆ' ಶೈಲಿಯು ಉಲ್ಲೇಖ ಮಾಡಿದ್ದಾನೆ. ಈ ಹೆಸರು ಕೂಡಾ 'ಕರ್ನಾಟಿಯ ಅಪಭ್ರಂಶವೇ ಇರಬೇಕೆಂದು ಅಭಿ



ಇಂಥಹ ಒಂದು ವಾಸ್ತುಶಿಲ್ಪ ಗ್ರಂಥದಲ್ಲಿ ನಾಲ್ಕು ಶಿಲ್ಪ ಶೈಲಿಗಳ ಪ್ರಸ್ತಾವನೆ ಮಾಡಲಾಗಿದೆ. ಅವುಗಳೆಂದರೆ ನಾಗರ, ಲಾಟ, ದ್ರಾವಿಡ ಮತ್ತು ಖೈರೊಟ. ಆದರೆ 'ಲಾಟ' ಎಂಬ ಪ್ರತ್ಯೇಕ ಶೈಲಿ ಇರಲಿಕ್ಕಿಲ್ಲವೆಂದೂ, ಇದೂ 'ನಾಗರ' ಶೈಲಿಯ ಒಂದು ಭಾಗವೆಂದೂ ತೋರುತ್ತದೆ. ಇದಲ್ಲದೆ 'ಖೈರೋಟ' ಪದಕ್ಕೆ ಸಮಾಧಾನಕರ ವಿವರಣೆಯೂ ದೊರೆಯುವುದಿಲ್ಲ. ಆದ್ದ

ಪ್ರಾಯ ಪಡಬಹುದು. ಅದೂ ಅಲ್ಲದೆ 'ವೇಸರ' ಎಂಬ ಹೆಸರಿನ ಬಳಕೆಯೂ 'ಕರ್ನಾಟ'ಗೇ ಇತ್ತೋ ಏನೋ ಎಂದೂ ಅಭಿಪ್ರಾಯ ವ್ಯಕ್ತವಾಗುತ್ತದೆ. ಆದ್ದರಿಂದ ರಾಜಮನೆತನದ ಹೆಸರುಗಳನ್ನು ಶಿಲ್ಪ ಶೈಲಿಗಳಿಗೆ ಕೊಡುವದಕ್ಕಿಂತ ಭೌಗೋಲಿಕ, ಪ್ರಾಂತೀಯ ಹೆಸರು ಕೊಡುವುದು ಸೂಕ್ತವೆಂದೂ, 'ಕರ್ನಾಟಕ ಶೈಲಿ'ಗೆ ಶಿಲ್ಪಶಾಸ್ತ್ರಗಳಲ್ಲಿ ಆಧಾರವಿದೆ ಎಂದೂ

ಸಿದ್ಧವಾಗುತ್ತದೆ.

ಈ ಹಿನ್ನೆಲೆಯಲ್ಲಿ 'ಕರ್ನಾಟಕ ಶಿಲ್ಪ ಶೈಲಿ' ಹುಟ್ಟು ಬೆಳವಣಿಗೆಯಲ್ಲಿ ಮೂರು ಹಂತಗಳನ್ನು ಕಾಣಬಹುದು.

೧) ಪ್ರಯೋಗ ೨) ರಚನೆ

೩) ಪರಾಕಾಷ್ಠತೆ.

ಇದರಲ್ಲಿ ಪ್ರಥಮ ಹಂತವು ಬಾದಾಮಿ ಚಾಳುಕ್ಯರ ಆಳ್ವಿಕೆಯ ಕಾಲಕ್ಕೆ ಹೊಂದುತ್ತದೆ. ಎರಡನೆಯ ಹಂತವು ರಾಷ್ಟ್ರಕೂಟರು ಹಾಗೂ ಕಲ್ಯಾಣಿ ಚಾಳುಕ್ಯರ ಕಾಲಕ್ಕೆ ಬರುತ್ತದೆ. ಕೊನೆಯ ಹಂತವು ಹೊಯ್ಸಳರ ಆಳ್ವಿಕೆಯ ಕಾಲಕ್ಕೆ ನಡೆದು ಪರಿಪಕ್ವತೆ ಹೊಂದುತ್ತದೆ.

**೧. ಪ್ರಯೋಗಾತ್ಮಕ ಹಂತ:**

ಪ್ರಥಮ ಹಂತದಲ್ಲಿ ಶಿಲ್ಪಿಗಳು ತಮಗೆ ಅನುಕೂಲವಾಗುವ ಹಾಗೂ ಸೂಕ್ತವಾದ ಮಾದರಿಗಾಗಿ ಅನ್ವೇಷಣೆ ನಡೆಸಿದರು. ಇದರ ಪರಿಶ್ರಮವು ನಾಗರ ಹಾಗೂ ವೇಸರ ಶಿಲ್ಪಶೈಲಿಗಳ ಸಂಯಮದಲ್ಲಿ ಫಲಿಸಿತು. ಈ ಸಂಗಮವು ಒಂದು ವಿಶಿಷ್ಟತೆ, ಪ್ರತ್ಯೇಕತೆಗಳನ್ನುಳ್ಳದ್ದಾಗಿದ್ದು. ಕಲ್ಯಾಣಿ ಚಾಳುಕ್ಯರ ಕಾಲದ ಸಮಿಪಕ್ಕೆ ರೂಪುಗೊಂಡಿತು. ಹೊಯ್ಸಳರ ಕಾಲಕ್ಕೆ ವಾಸ್ತುಶಿಲ್ಪದಲ್ಲಿ ಹಿಂದಿನಷ್ಟು ಕಸುವು ಕಾಣದಿದ್ದರೂ ಅಲಂಕಾರ ಪ್ರಧಾನವಾಗಿ ಬೆಳೆಯಿತು. ಅಷ್ಟೆ ಅಲ್ಲ, ಈ ವಿಪುಲ ವೈವಿಧ್ಯ ಅಲಂಕಾರದಲ್ಲಿ ವಾಸ್ತುಶಿಲ್ಪವೇ ಲೀನವಾಗಿಹೋಯಿತು.

ಪ್ರಥಮ ಹಂತದಲ್ಲಿಯ ಪ್ರಯೋಗಗಳ ಫಲವಾಗಿ ರಚಿತವಾದ ದೇವಾಲಯಗಳು ವಿಪುಲವಾಗಿ ದೊರೆಯುತ್ತಿವೆ. ಆದರೆ ಇವು ಕೆಲವೇ ಕ್ಷೇತ್ರಗಳಿಗೆ ಸೀಮಿತಗೊಂಡಿದ್ದು, ಈ ಪ್ರಯೋಗಗಳ ಮಾದರಿಗಳು ಐಹೊಳೆ, ಬದಾಮಿ, ಪಟ್ಟದಕಲ್ಲು ಆಲಂಪೂರ್‌ಗಳಲ್ಲಿ ಕಾಣಬಹುದು.

ಐಹೊಳೆಯ ಮರ್ಗಾ ದೇವಾಲಯವು ಬೌದ್ಧ ಚೈತನ್ಯದ ಮಾದರಿಯಲ್ಲಿದೆ. ಅಲ್ಲಿಯ ಹುಚ್ಚಿಮಲ್ಲಿ ಗುಡಿಯು, ಕ್ರಿ. ಶ. ೧೧ನೆಯ ಶತಮಾನದಲ್ಲಿ ರಚಿಸಲಾದ ಭುವನೇಶ್ವರದಲ್ಲಿಯ ಪರಶುರಾಮೇಶ್ವರ ದೇವಾಲಯವನ್ನು ಹೋಲುತ್ತದೆ. ಮತ್ತು ಕೆಲವು ದೇವಾಲಯಗಳು ನಾಗರ ಶೈಲಿಯನ್ನು ಅನುಕರಿಸಿವೆ ಅದರಲ್ಲಿ ಕೆಲವು ದೇವಾಲಯಗಳಲ್ಲಿ ವಿಸ್ತಾರವಾದ ಸಭಾಮಂಟಪವನ್ನು ರಚಿಸಿವೆ. ಆದರೆ ನಾಗರ ಶೈಲಿಯಲ್ಲಿ ಸಭಾಮಂಟಪವು ಗರ್ಭಗುಡಿಯಷ್ಟೇ ವಿಸ್ತಾರವಿರುತ್ತದೆ. ಈ ಲಾಡಖನ್ ದೇವಾಲಯವು ಶಿಲ್ಪಕಲಾಕೃತಿಯ ಒಂದು ಹೊಸ ಮಾದರಿ ಎನ್ನಬಹುದು. ಮೇಲ್ಛಾವಣಿಗೆಯ ಮೇಲೆ ಮುಹಡಿಯಂತೆ ಗೋಪುರ ರಚಿಸಲಾಗಿದೆ. ಇದರ ಹೊರಗೋಡೆಗಳು ಅಲ್ಲಲ್ಲಿ ಸ್ವಲ್ಪ ಮುಂದಕ್ಕೆ ಉಬ್ಬಿಕೊಂಡಿದ್ದು ಅವುಗಳಿಗೆ ಸುಂದರವಾದ ಸರಳವಾದ ಜಾಲರಿಗಳು ಜೋಡಿಸಲಾಗಿವೆ. ಈ ಮಾದರಿಯು ದ್ರಾವಿಡ ಶೈಲಿಯ ಅನುಕರಣೆಯ ಪೂರ್ವತಯಾರಿಕೆ. ಮೇಗೂಲೆ ದೇವಾಲಯದಲ್ಲಿ ಗರ್ಭಗುಡಿಯನ್ನು ಹೊಂದಿ ಒಂದು ಪಕ್ಕ

ಕೋಣೆ ರಚಿಸಲಾಗಿದೆ. ಮಹಾಕೂಟದ ದೇವಾಲಯುಗಳು ನಾಗರ ಹಾಗೂ ದ್ರಾವಿಡ ಎರಡೂ ಶಿಲ್ಪಶೈಲಿಗಳನ್ನು ಅನುಕರಿಸಿ ರಚಿಸಲಾಗಿವೆ. ಇವು ಮೇಗತಿ ದೇವಾಲಯ ಕ್ಕಿಂತ ಪ್ರಗತಿ ಹೊಂದಿದಂತೆ ಭಾಸವಾಗು ತ್ತದೆ. ಗಳಗನಾಥ ಮತ್ತು ಪಾಪನಾಥ ದೇವಾಲಯುಗಳು ನಾಗರ ಶೈಲಿಗೆ ಸೇರಿ ದವು. ಆದರೆ ಪಾಪನಾಥ ದೇವಾಲಯುದ ಶಿಖರವು ನಾಗರ ಮಾದರಿಯಾಗಿದ್ದರೆ ದೇವಾಲಯು ರಚನೆಯು ದ್ರಾವಿಡ ಶೈಲಿಯ ರೂಪರೇಷೆಯುಂತೆ ಮಾಡಲಾಗಿದೆ. ಇಲ್ಲಿ ಒಂದು ಅಂಶವನ್ನು ಗಮನಿಸಬೇಕಾ ಗುತ್ತದೆ. ಆಗಿನ ಶಿಲ್ಪಿಗಳು ಶಿಲ್ಪಶೈಲಿಗಳಲ್ಲಿ ಪ್ರಯೋಗ ನಡೆಸುವಾಗ ಅವರು ದ್ರಾವಿಡ ಶಿಲ್ಪ ಶೈಲಿಯ ಬಗ್ಗೆ ಹೆಚ್ಚು ಲಕ್ಷ್ಯ ಕೊಟ್ಟಿ ದ್ದರು. ವಿರೂಪಾಕ್ಷ ದೇವಾಲಯ, ಮಲ್ಲಿ ಕಾರ್ಜುನ ದೇವಾಲಯ ಹಾಗೂ ಸಂಗ ಮೇಶ್ವರ ದೇವಾಲಯುಗಳು ದ್ರಾವಿಡ ಶೈಲಿಗೆ ಸೇರಿದವು. ಆಲಂಪುರದ ವಿಶ್ವ ಬ್ರಹ್ಮ ದೇವಾಲಯುವು ನಾಗರ ಶೈಲಿಯ ಶಿಖರವನ್ನು ಹೊಂದಿ ದ್ರಾವಿಡ ಶೈಲಿಯ ರೂಪರೇಷೆಯ ಮೇರೆಗೆ ರಚಿತವಾಗಿವೆ. ಇವುಗಳ ಗೋಡೆಗಳ ವಿಶಿಷ್ಟ ರಚನೆಯ ಲ್ಲಿದ್ದ ಉದ್ಭವಾವಸ್ಥೆಯಲ್ಲಿರುವ ಕರ್ನಾ ಟಕ ಶೈಲಿಯ ಸೂಚನೆಯುನ್ನು ಕೊಡು ತ್ತವೆ.

ಈ ಉದಾಹರಣೆಗಳಿಂದ ಅಂದಿನ ಎಲ್ಲ ವಾಸ್ತು ಶಿಲ್ಪಶೈಲಿಗಳ ಪ್ರಯೋಗ ಗಳನ್ನು ಮಾಡಿ ಅನೇಕ ವಿಧದ ಮಿಶ್ರಣ ಗಳ ಪ್ರಯೋಗಗಳನ್ನು ಪರಿಶೀಲಿಸಿ ತಮ್ಮ ದೇ ಆದ ವಿಶಿಷ್ಟ ರೀತಿಯ ತಯಾರಿಕೆ ಯನ್ನು ಹೊಂದಿತು.

**: ೩. ರಚನೆಯ ಹಂತ :**

ತಯಾರಿಕೆಯ ಹಂತದಲ್ಲಿ ನಡೆದ ಪ್ರಯೋಗಗಳಿಂದ ನಾಗರ ಹಾಗೂ ದ್ರಾವಿಡ ಶೈಲಿಗಳ ಸಂಗಮ-ಸಂಮಿಲನ ಗಳಿಂದ ವೈಶಿಷ್ಟ್ಯಪೂರ್ಣ ಸ್ವತಂತ್ರ ಶಿಲ್ಪ ಶೈಲಿಯ ಉದ್ಭವವಾಯಿತು. ಈ ಸಂಮಿ ಲನದಲ್ಲಿ 'ನಾಗರ' ಶೈಲಿಯು ಕೇವಲ ಪೂರಕ ಪಾತ್ರವನ್ನು ಮಾತ್ರ ವಹಿಸಿತು ಎಂದು ಹೇಳಬಹುದು. ಮಾಲೆಗಿತ್ತಿ ಶಿವಾಲಯುದ ಗರ್ಭಗೃಹಕ್ಕೆ ಪ್ರದಕ್ಷಿಣಾ ಮಂದಿರವಿಲ್ಲ ಹಾಗೂ ಗೋಡೆಗಳು ಅಲ್ಲಲ್ಲಿ ಉಬ್ಬಿಕೊಂಡಿವೆ. ಪ್ರಥಮ ಹಂತದ ವಿವೇಚನೆಯ ಕಾಲದಲ್ಲಿ ಸೂಚಿಸಿದ ಆಲಂಪುರದ ಬ್ರಹ್ಮೇಶ್ವರ ದೇವಾಲಯು ಹಾಗೂ ಈ ಉದಾಹರಣೆ ಇವುಗಳೆರಡೂ ಕರ್ನಾಟಕ ಶೈಲಿಯ ಉದ್ಭವದ ಸೂಚಕ ಗಳಾಗಿವೆ. ಕುಕ್ಕನೂರಿನ ಕಲ್ಲೇಶ್ವರ ಗುಡಿಯು ಕರ್ನಾಟಕ ಶೈಲಿಯ ಕಡೆ ಒಲವನ್ನು ನಿರೂಪಿಸುತ್ತದೆ. ಈ ಹೊಸ ಶೈಲಿಯಲ್ಲಿ ಲಕ್ಕುಂಡಿಯ ಜೈನ ದೇವಾ ಲಯುಗಳಲ್ಲಿ ಉಪಯೋಗಿಸಿರುವ ಕರಿಕ ಲ್ಲು(Deccan trap) ಉಪಯೋಗಿಸಲ್ಪ ಟ್ಟಿತು. ಗರ್ಭಗುಡಿಯ ಮೇಲೆ ಒಂದು ಅಂತಸ್ತಿನ ಮಹಡಿಯ ರಚನೆಯೂ ಪರಿ ಪಾಠಿಯಲ್ಲಿ ಬಂದದ್ದು, ಗೋಡೆಗಳ ಮೇಲೆ ಕೆತ್ತನೆ ಕೆಲಸ ಮುಂತಾದವು

ವೈಶಿಷ್ಟ್ಯಗಳಾದವು. ಮುಕ್ತೇಶ್ವರ ದೇವಾಲಯದಲ್ಲಿದ್ದಂತೆ ರಕ್ಷಾಸನವು ಸಭಾಮಂದಿರದ ಸಾಮಾನ್ಯ ಅಂಶವಾಯಿತು. ಇದು ಪ್ರಾಯಶಃ ನಾಗರ ಶೈಲಿಯ ದೇವಾಲಯದ ಅನುಕರಣೆಯಲ್ಲಿ ತೆಗೆದುಕೊಂಡ ಅಂಶವಾಗಿರಬಹುದು. ಹರಲಹಳ್ಳಿಯ ಸೋಮೇಶ್ವರ ದೇವಾಲಯದಲ್ಲಿ ಮೂರು ಗೋಪುರಗಳಿವೆ. ತ್ರಿಕೋಟಾದಲ್ಲಿ ನೀರಲಗಿಯ ಸಿದ್ಧೇಶ್ವರ ದೇವಾಲಯ ಲಕ್ಕುಂಡಿಯ ಕಾಶಿ ವಿಶ್ವೇಶ್ವರ ದೇವಾಲಯ ಇವು ಶೃಂಗಾರ ಭೂಯಿಷ್ಠ ವಾಸ್ತುಶಿಲ್ಪ ಮಾದರಿಯಾಗಿವೆ. ಇಟ್ಟಗಿಯ ಮಹಾದೇವ ದೇವಾಲಯವು ಹೊಸ ಶೈಲಿಯ ಪರಿಪೂರ್ಣತೆ ಹೊಂದಿದ ಉದಾಹರಣೆ.

ಒಂದು ಗಮನಾರ್ಹ ವಿಷಯವೆಂದರೆ ಈ ವಾಸ್ತುಶಿಲ್ಪಶೈಲಿಯಲ್ಲಿ ರಚಿತವಾದ ದೇವಾಲಯಗಳೆಲ್ಲದರಲ್ಲಿಯೂ ಸಭಾಮಂಟಪವು ಗರ್ಭಗುಡಿಗಿಂತಲೂ ಅಗಲವಾಗಿವೆ. ಇದು ದ್ರಾವಿಡ ಶೈಲಿಗೆ ವ್ಯತ್ಯಾಸವಾಗಿದೆ. ಏಕೆಂದರೆ ದ್ರಾವಿಡ ರೀತಿಯಲ್ಲಿ ಗರ್ಭಗುಡಿ, ಹಾಗೂ ಸಭಾಮಂಟಪಗಳು ಒಂದೇ ಅಗಲ ಉಳ್ಳವುಗಳಾಗಿರುತ್ತವೆ. ಇದೂ ಅಲ್ಲದೆ ನಾಗರ ಶೈಲಿಯಂತೆ ಎತ್ತರದ ಮೇಲೆ ಪ್ರಭಾವವೂ ದ್ರಾವಿಡ ಶೈಲಿಯ ಅಡ್ಡ ಮಹಡಿಗಳ ಅನುಕರಣವೂ ಸಂಮಿಶ್ರಹೊಂದಿ ಹೊಸ ಶೈಲಿಯ ದೇವಾಲಯಗಳ ಶಿಖರಗಳು ರಚಿತವಾದವು.

## : ೩. ಪರಾಕಾಷ್ಠತೆಯ ಹಂತ :

ಗದಗಿನ ಸೋಮೇಶ್ವರ ದೇವಾಲಯದ ಮೇಲಿನ ವಿಮಾನದ ಭಾಗ ಹಾಗೂ ಅದರ ನಿರಾಡಂಬರತೆ; ಕುರುವತ್ತಿಯ ಮಲ್ಲಿಕಾರ್ಜುನ ದೇವಾಲಯದ ಮದನರೈ ಚಿತ್ರಗಳು; ಡಂಬಳದ ದೊಡ್ಡ ಬಸಪ್ಪ ದೇವಾಲಯದ ನಕ್ಷತ್ರಾಕಾರದ ವಿನ್ಯಾಸ; ಬೆಳ್ಳಿಗಾವೆಯ ಕೇದಾರೇಶ್ವರ ದೇವಾಲಯದಲ್ಲಿ ಹೊಯ್ಸಳ ಚಿಹ್ನೆ; ಈ ಅಂಶಗಳು ಹೊಸ ಶೈಲಿಯ ಪರಿಪೂರ್ಣತೆಯ ಕಡೆಗೆ ಒಯ್ಯುವ ಹೆಗ್ಗರುತುಗಳಾದವು. ಹೊಯ್ಸಳರು ಕರ್ನಾಟಕ ಶಿಲ್ಪಶೈಲಿಯ ಪರಾಕಾಷ್ಠತೆಯನ್ನು ಮುಟ್ಟಿದರೆನ್ನಬಹುದು.

ಸೋಮನಾಥದ ಕೇಶವ ದೇವಾಲಯ, ಹಳೆಯಬೀಡಿನ ಹೊಯ್ಸಳೇಶ್ವರ ದೇವಾಲಯ, ಬೇಲೂರಿನ ಚೆನ್ನಕೇಶವದೇವಸ್ಥಾನಗಳು ಈ ಹಂತದ ಸಾಂಕೇತಿಕ ಉದಾಹರಣೆಗಳು. ಅನೇಕ ಮತ್ತು ವಿವಿಧ ಚಿತ್ರಗಳಿಂದ ವಿಪುಲವಾಗಿ ಅಲಂಕರಿಸಲ್ಪಟ್ಟ, ಅಡ್ಡಪಟ್ಟಿಗಳಿಂದ ಕೂಡಿದ ಎತ್ತರವಾದ ಪ್ರತಿಮೆಗಳಿಂದ ಅಲಂಕರಿಸಲ್ಪಟ್ಟ ಭಿತ್ತಿಗಳು, ನಕ್ಷತ್ರಾಕಾರದ ವಿನ್ಯಾಸ ಮತ್ತು ಸಾಮಾನ್ಯದ ನಿಲುವು–ಇವು ಹೊಯ್ಸಳರ ಕಾಲದ ಕರ್ನಾಟಕ ಶೈಲಿಯ ಲಾಕ್ಷಣಿಕ ಗುರುತುಗಳು.

ಈ ರೀತಿಯಲ್ಲಿ ಹೊಯ್ಸಳರ ಕಾಲದಲ್ಲಿ ಕರ್ನಾಟಕ ಶಿಲ್ಪಶೈಲಿಯು ಅಗ್ರಸ್ಥಾನಕ್ಕೆ ಮುಟ್ಟಿತು.

● ● ●

'ಏನೋ ! ಹಾಸ್ಯಕ್ಕೆ ಬಹಳ ಒಳ್ಳೆಯ ಪ್ರತಿಕ್ರಿಯೆ ಕೊಡ್ತಾಯಿದ್ದೀಯಲ್ಲ?'
'ಹೌದು ! Multi-vit ಮಾತ್ರೆ ತಿನ್ನೋಕೆ ಪ್ರಾರಂಭ ಮಾಡಿದೇನೆ.'
ಓಹೋ ! Multi-Wit ?! ಹಾಗಾದ್ರೇ, ಇದನ್ನೇ WIT difficiency ಇರೋವರ್ಗೆಲ್ಲಾ prescribe ಮಾಡಬೇಕಾಯಿತು !

* * *

ಓರ್ವ ವಿಧಾನಸಭಾ ಸದಸ್ಯ ತನ್ನ ಭಾಷಣದಲ್ಲಿ ಓರ್ವ ಮಂತ್ರಿವರ್ಯರ ಪರಿಚಯ ಮಾಡಿಕೊಡುತ್ತಾ "ನಮ್ಮ ಮಾನ್ಯ ಮಂತ್ರಿಗಳ ಬಗ್ಗೆ ಹೇಳಬೇಕೆಂದರೆ ಅವರ ಹಸ್ತ ಅಮೃತ ಹಸ್ತವೆಂದು ಸಿದ್ಧವಾಗಿದೆ. ಅವರು ಯಾವುದೇ ಕಟ್ಟಡದ ಅಡಿಗಲ್ಲನ್ನು ಹಾಕಿದ್ದಾರೋ ಅವೆಲ್ಲವೂ ಸುವರ್ಣ ಮಹೋತ್ಸವಗಳನ್ನು, ವಜ್ರ ಮಹೋತ್ಸವಗನ್ನು ಆಚರಿಸಿವೆ. ಇಂತಹ ಸಿದ್ಧಪುರುಷರು ನಮ್ಮ ಕಟ್ಟಡದ ಅಡಿಗಲ್ಲ ಹಾಕಲು ದೊರೆತಿರುವುದು ನಮ್ಮ ಸುದೈವ."

ಸಮಾರಂಭ ಮುಗಿದ ನಂತರ ಸಭೆಯಲ್ಲಿ ಗುಜು, ಗುಜು. ಆ ಮಂತ್ರಿಯ ವಯಸ್ಸು ಕೇವಲ ೩೫ ವರ್ಷಗಳ ಮಾತ್ರ ಆಗಿದ್ದವು.

* * *

ಓರ್ವ ಪ್ರಾಧ್ಯಾಪಕರಿಗೆ 'ವಿಶೇಷ ಭಾಷಣ ಮಾಲೆ' ಯಲ್ಲಿ ಭಾಷಣ ಮಾಡಲು ಆಮಂತ್ರಣ ಬಂತು. ಅವರು ಬಹಳ ಶಿಸ್ತಿನ ಜೀವಿಗಳು. ಪೂರ್ವತಯಾರಿಯಿಲ್ಲದೆ ಯಾವ ಕಾರ್ಯವನ್ನೂ ಮಾಡದವರು. ಯಾರಿಗೂ ತೊಂದರೆ ಕೊಡ ಬಾರದೆಂದೂ, ತನ್ನ ಕಾರ್ಯ ನಿರ್ವಹಣೆಯಲ್ಲಿ ಬಹಳ ಚೊಕ್ಕವಾಗಿರಬೇಕೆಂದೂ ಬಯಸುವವರು. ಆದಕಾರಣ ತಮ್ಮ ' ವಿಶೇಷ ಭಾಷಣವನ್ನು ಬರೆದರು. ತಮ್ಮ ' Tape Recorder ' ಮುಂದೆ ಅದನ್ನು ಓದಿದರು. ಎಲ್ಲವೂ ಧ್ವನಿ ಮುದ್ರಿತವಾದ ನಂತರ ತಮ್ಮ ಭಾಷಣವನ್ನು ಕೇಳಿ ವಿಮರ್ಶಿಸುವ ದೃಷ್ಟಿಯಿಂದ, ' ಧ್ವನಿ ಮುದ್ರಿಕೆ ' ಯನ್ನು ಹಚ್ಚಿ ಕುಳಿತರು ಮೂರು ತಾಸು ಭಾಷಣ ಆದಾಗಿತ್ತು. ಅವರಿಗೆ ಪ್ರಾರಂಭ ಮಾಡಿದ್ದಷ್ಟೇ ನೆನಪಿತ್ತು. ನೀವು ನನ್ನನ್ನು ಈ ವಿಶೇಷ ಭಾಷಣ ಮಾಲೆಯಲ್ಲಿ ಮಾತ ನಾಡಲು ಆಮಂತ್ರಿಸಿದ್ದಕ್ಕೆ ಬಹಳ ಋಣಿಯಾಗಿದ್ದೇನೆ. ನಮಸ್ಕಾರ ಎಂಬ ಕೊನೆಯ ಸಾಲು ಅವರಿಗೆ ಕೇಳಿಸಿತು. ಆಗ ಮಾತ್ರ ಅವರಿಗೆ ಎಚ್ಚರವಾಗಿತ್ತು, ತಮ್ಮ ಗಾಢ ನಿದ್ರೆಯಿಂದ.

# ಗೀತೆಗಳು

ಗೀತೆಗಳು ಅನೇಕವಿವೆ. ಭಗವದ್ಗೀತೆಯೊಂದೇ ಗೀತೆ ಎಂದು ಅನೇಕರ ಭಾವನೆಯಾಗಿದೆ. ಶ್ರೀಕೃಷ್ಣನು, ಅರ್ಜುನನಿಗೆ ಉಪದೇಶಿಸಿದ ಭಾಗವನ್ನು ಜ್ಞಾನದಾಯಕವಾಗಿರುವದರಿಂದ ಅದನ್ನು "ಗೀತಾ" ಎಂಬುದಾಗಿ ಕರೆಯುತ್ತಾರೆ. ಇದರ ನಿಜವಾದ ಹೆಸರು ಶ್ರೀಮದ್ಭಗವದ್ಗೀತಾ-ಉಪನಿಷತ್ ಎಂದಿದೆ.

ಸಾಮಾನ್ಯವಾಗಿ ಜ್ಞಾನಪರವಾದ ಗ್ರಂಥ ಭಾಗಗಳನ್ನು ಗೀತಾ ಎಂದು ರೂಢ್ಯವಾಗಿ ಕರೆಯುತ್ತಾರೆ. ಮಹಾಭಾರತದಲ್ಲಿಯೇ ಅನೇಕ ಗೀತೆಗಳಿವೆ. "ಪಿಂಗಲ ಗೀತಾ" "ಶಂಪಾಕ ಗೀತಾ" "ಮಂಕಿ ಗೀತಾ" "ಭೊದ್ಯ ಗೀತಾ" "ವಿಚಖ್ಯು ಗೀತಾ" 'ಹಾರೀತ ಗೀತಾ" "ವೃತಗೀತಾ" "ಪರಾಶರ ಗೀತಾ' "ಹಂಸ ಗೀತಾ" ಎಂಬ ಒಂಬತ್ತು ಗೀತೆಗಳು ಮಹಾಭಾರತ ಶಾಂತಿ ಪರ್ವದಲ್ಲಿಯೇ ಕಂಡು ಬರುತ್ತಿವೆ. ಇದಲ್ಲದೇ ಅಶ್ವಮೇಧ ಪರ್ವದೊಳಗೆ "ಬ್ರಾಹ್ಮಣ ಗೀತಾ" ಎಂಬ ಗೀತಾ ಸಂಜ್ಞಯುಕ್ತವಾದ ಗೀತೆ ಇದೆ. ಆದರೆ ಅರ್ಜುನನಿಗೆ ಉಪದೇಶಿಸಿದ ಏಳು ನೂರು ಶ್ಲೋಕ ಯುಕ್ತವಾದ ಗ್ರಂಥ ವಂತೂ ಎಲ್ಲರಿಗೂ ಪರಿಚಿತವಿರುವ ಗೀತೆಯು.

ಗೀತಾ ರಚನೆಯು ಕೇವಲ ಮಹಾಭಾರತಕಾರನ ಗುತ್ತಿಗೆಯಾಗಿಲ್ಲ ಕೆಲವು ಇತರ ಪುರಾಣಗಳಲ್ಲಿಯೂ ಮತ್ತು ಸ್ವತಂತ್ರ ರಚನೆಯುಳ್ಳ ಅನೇಕ ಗೀತಾಗಳಿವೆ.

"ಅವಧೂತ ಗೀತಾ" "ಅಷ್ಟಾವಕ್ರ ಗೀತಾ" "ಈಶ್ವರ ಗೀತಾ" "ಉತ್ತರ ಗೀತಾ" "ಕಪಿಲ ಗೀತಾ" "ಗಣೇಶ ಗೀತಾ" "ದೇವೀ ಗೀತಾ" "ಪಾಂಡವ ಗೀತಾ" "ಬ್ರಹ್ಮ ಗೀತಾ" "ಬಿಕ್ಷು ಗೀತಾ" "ಯಮ ಗೀತಾ" "ರಾಮ ಗೀತಾ" "ವ್ಯಾಸ ಗೀತಾ" "ಶಿವ ಗೀತಾ" "ಸೂತ ಗೀತಾ" "ಸೂರ್ಯ ಗೀತಾ" ಮುಂತಾದ ಗೀತೆಗಳೂ ಜ್ಞಾನ ಪರವಾದ ಗೀತೆಗಳಾಗಿದ್ದು ಅನೇಕರಿಂದ ಪಠಿಸಲ್ಪಡುತ್ತವೆ. ಶಿವ ಮತ್ತ ಈಶ್ವರ ಎರಡು ಹೆಸರಿನಲ್ಲಿ ಎರಡು ಗೀತೆಗಳಿವೆ.

ಗಣೇಶ ಗೀತೆಯು ಗಣೇಶ ಪುರಾಣದಿಂದ ಈಶ್ವರ ಗೀತೆಯು ಕೂರ್ಮ ಪುರಾಣದಿಂದ ಆಯ್ದ ಭಾಗಗಳು. ವ್ಯಾಸಗೀತೆಯೂ ಕೂರ್ಮ ಪುರಾಣದಲ್ಲಿಯೇ ಬರುತ್ತದೆ. ಸ್ಕಂದ ಪುರಾಣದಿಂದ ಬ್ರಹ್ಮಗೀತಾ ಮತ್ತು ಸೂತ್ರ ಗೀತೆಗಳನ್ನು ಆಯ್ದು ಕೊಂಡಿದ್ದಾರೆ. ಯಮಗೀತೆಯಂತೂ ಮೂರು ವಿಧವಾಗಿದೆ. ಒಂದು ವಿಷ್ಣುಪುರಾಣದಲ್ಲಿ ಮತ್ತೊಂದು ಅಗ್ನಿ ಪುರಾಣದಲ್ಲಿ ಮತ್ತು ಮೂರನೆಯದು ನೃಸಿಂಹ ಪುರಾಣದಲ್ಲಿ ಕಂಡು ಬರುತ್ತಿದ್ದು ಇವು ಮೂರೂ, ಮೂರು ವಿಧವಾಗಿವೆ.

ಆದರೆ ಭಗವದ್ಗೀತೆಯ ಪ್ರಗಲ್ಭ, ವ್ಯಾಪಕ ತೇಜಸ್ಸಿನ ಮುಂದೆ ಇವು ಮಂಕಾಗಿ, ಅಷ್ಟ ಪ್ರಚರಿತವಾಗದೇ ಉಳಿದವು.

ಜಪಾನಿನಲ್ಲಿ ನಮ್ಮ ಭಾರತದಲ್ಲಿರುವಂತೆ ತಿಂಗಳಿಗೊಂದರಂತೆ ಭಿನ್ನವಾಗುವ ರಾಶಿ ಚಕ್ರದ ಮೇಲಿಂದ ಭವಿಷ್ಯ ಹೇಳುವ ಪದ್ಧತಿ ಇಲ್ಲ. ಒಂದೊಂದು ವರ್ಷಕ್ಕೆ ಒಂದೊಂದು ರಾಶಿಯಂತೆ ಅವರು ಸಂಕೇತಗಳನ್ನು ಗೊತ್ತು ಮಾಡಿದ್ದಾರೆ.

ಇದಕ್ಕೆ ವಿವರಣೆ ನೀಡುವ ದಂತಕಥೆಯೊಂದು ಜಪಾನಿನಲ್ಲಿ ಪ್ರಚಲಿತವಿದೆ. ಬುದ್ಧನೊಮ್ಮೆ ಎಲ್ಲ ಪ್ರಾಣಿಗಳನ್ನು ಸಭೆ ಸೇರುವಂತೆ ಕರೆದ. ಅವನ ಮಾತನ್ನು ಪಾಲಿಸಿ ಮೊದಲು ಇಲಿಗಳು ಬಂದವು. ಅವನ್ನನುಸರಿಸಿ ಎತ್ತು, ಹುಲಿ ಮುಂತಾಗಿ ಹನ್ನೆರಡು ಪ್ರಾಣಿಗಳು ಬಂದವು. ಬುದ್ಧ ಅವುಗಳ ಗೌರವಾರ್ಥವಾಗಿ ಒಂದೊಂದು ವರ್ಷದ ಅಧಿಕಾರವನ್ನು ಅವುಗಳಿಗೆ ದಯಪಾಲಿಸಿದ. ಅವು ಹನ್ನೆರಡು ವರುಷಗಳಿಗೊಂದು ಸಲ ತಮ್ಮ ಅಧಿಕಾರದಲ್ಲಿ ತಮ್ಮ ಗುಣಗಳನ್ನು ಆಯಾ ವರ್ಷಗಳಿಗೆ ಕೊಡುತ್ತವೆ.

ಈ ದಂತ ಕಥೆ ಜಪಾನಿಯರಲ್ಲಿ ಪ್ರಚಲಿತವಿರುವ ರಾಶಿಚಕ್ರಕ್ಕೆ ಎಡೆಕೊಟ್ಟಿದೆ. ಅವರು ಮಾನವ ಜೀವನದ ಒಟ್ಟು ಅವಧಿಯನ್ನು ಸರಿಯಾಗಿ ಮೂರು ಹಂತಗಳಲ್ಲಿ ವಿಭಾಗಿಸಿ ಅವುಗಳನ್ನು ಪ್ರಥಮ ಹಂತ, ದ್ವಿತೀಯ ಹಂತ, ತೃತೀಯ ಹಂತ ಎಂದು ಸೂಚಿಸುತ್ತಾರೆ. ಹನ್ನೆರಡು ವರುಷಗಳಿಗೆ ಒಂದು ರಾಶಿಚಕ್ರ ಪೂರ್ಣವಾಗುತ್ತದೆ. ಪ್ರತಿಯೊಂದು ಪ್ರಾಣಿಯ ಸೂಚಕವಾದ ರಾಶಿಯಿಂದ ಮಾನವನ ಬುದ್ಧಿಮತ್ತೆ, ಸಂಪತ್ತು, ಕರ್ತೃತ್ವ ಶಕ್ತಿ ಇವುಗಳನ್ನು ನಿರ್ಧರಿಸುತ್ತಾರೆ.

ಯಾವನೊಬ್ಬನ ಭಾಗ್ಯ ನಿರ್ಧರಿಸುವಾಗ್ಯು ಅವನ ತಂದೆ ತಾಯಿಗಳ ರಾಶಿಯನ್ನು ಕೂಡ ಗಣನೆಗೆ ತೆಗೆದು ಕೊಳ್ಳಬೇಕೆಂದು ಜಪಾನಿ ಜ್ಯೋತಿಷ್ಯರು ಅಭಿಪ್ರಾಯ ಪಡುತ್ತಾರೆ. ತಂದೆ ತಾಯಿಯರ ರಾಶಿಗಳು ಕೂಡ ತುಸು ಮಟ್ಟಿಗೆ ತಮ್ಮ ಗುಣಧರ್ಮಗಳನ್ನು ಶಿಶುವಿನಲ್ಲಿ ಮೂಡಿಸುತ್ತವೆ. ಇದನ್ನು ಗಮನದಲ್ಲಿಟ್ಟು ಯೋಗ್ಯ ನಿರ್ಣಯಕ್ಕೆ ಬರಬೇಕೆಂದು ಅವರ ಮತ.

ಯಾವಾಗಲೂ ೧) ಮೂಷಕ ೨) ವೃಷಭ ೩) ವ್ಯಾಘ್ರ ೪) ಶೊಲ ೫) ಘೋರ ಸರ್ಪ ೬) ಸರ್ಪ ೭) ಅಶ್ವ ೮) ಮೇಷ ೯) ಮರ್ಕಟ ೧೦) ಹುಂಜ ೧೧) ಶ್ವಾನ ೧೨) ವರಾಹ ಈ ಅನುಕ್ರಮದಲ್ಲಿಯೇ ರಾಶಿಗಳು ಬರುತ್ತವೆ. ಈಗ ಸಧ್ಯದ ರಾಶಿ ಚಕ್ರವು ಮೂಷಕ ರಾಶಿಯಿಂದ ೧೯೬೦ ಪ್ರಾರಂಭವಾಯಿತು. ಈ ಚಕ್ರವು ೧೯೭೧ ನೇ ವರ್ಷ ವರಾಹ ರಾಶಿ ಇಂದ ಕೊನೆಗೊಳ್ಳುವದು. ಮತ್ತೆ ೧೯೭೨ ನೇ ವರ್ಷವು ಮೂಷಕ ರಾಶಿಯಿಂದ ಪ್ರಾರಂಭವಾಗುವದು.

ಪ್ರತಿಯೊಂದು ರಾಶಿಯ ಎದುರು ನಮ್ಮ ಓದುಗರ ಅನುಕೂಲಕ್ಕೆ ೧೯೦೦ ನೇ ವರ್ಷದಿಂದ ಇಲ್ಲಿಯ ವರೆಗೆ ಬಂದ ವರ್ಷಗಳನ್ನು ಸೂಚಿಸಲಾಗಿದೆ.

**ಮೂಷಕ**

ಮೂಷಕ ವರ್ಷದಲ್ಲಿ ಜನಿಸಿದವರು ತುಂಬಾ ಚತುರರು. ಜತೆಗೆ ಜಿಪುಣರೂ ಹೌದು. ಸಣ್ಣ ಪುಟ್ಟ ವಿಷಯಗಳಿಗೆ ತುಂಬಾ ಗೊಂದಲ ಉಂಟುಮಾಡುವರು. ಎಷ್ಟೇ ಕಷ್ಟ ಬಂದರೂ ಗುರುತರ ಹೊಣೆ ಇದ್ದರೂ ನಿಭಾಯಿಸಿ ಗುರಿ ಮುಟ್ಟು

| | | | | | | |
|---|---|---|---|---|---|---|
| **ಮೂಷಕ** | ೧೯೦೦ | ೧೯೧೨ | ೧೯೨೪ | ೧೯೩೬ | ೧೯೪೮ | ೧೯೬೦ |
| **ವೃಷಭ** | ೧೯೦೧ | ೧೯೧೩ | ೧೯೨೫ | ೧೯೩೭ | ೧೯೪೯ | ೧೯೬೧ |
| **ವ್ಯಾಘ್ರ** | ೧೯೦೨ | ೧೯೧೪ | ೧೯೨೬ | ೧೯೩೮ | ೧೯೫೦ | ೧೯೬೨ |
| **ಮೊಲ** | ೧೯೦೩ | ೧೯೧೫ | ೧೯೨೭ | ೧೯೩೯ | ೧೯೫೧ | ೧೯೬೩ |
| **ಘೋರ ಸರ್ಪ** | ೧೯೦೪ | ೧೯೧೬ | ೧೯೨೮ | ೧೯೪೦ | ೧೯೫೨ | ೧೯೬೪ |
| **ಸರ್ಪ** | ೧೯೦೫ | ೧೯೧೭ | ೧೯೨೯ | ೧೯೪೧ | ೧೯೫೩ | ೧೯೬೫ |
| **ಅಶ್ವ** | ೧೯೦೬ | ೧೯೧೮ | ೧೯೩೦ | ೧೯೪೨ | ೧೯೫೪ | ೧೯೬೬ |
| **ಮೇಷ** | ೧೯೦೭ | ೧೯೧೯ | ೧೯೩೧ | ೧೯೪೩ | ೧೯೫೫ | ೧೯೬೭ |
| **ಮರ್ಕಟ** | ೧೯೦೮ | ೧೯೨೦ | ೧೯೩೨ | ೧೯೪೪ | ೧೯೫೬ | ೧೯೬೮ |
| **ಹುಂಜ** | ೧೯೦೯ | ೧೯೨೧ | ೧೯೩೩ | ೧೯೪೫ | ೧೯೫೭ | ೧೯೬೯ |
| **ಶ್ವಾನ** | ೧೯೧೦ | ೧೯೨೨ | ೧೯೩೪ | ೧೯೪೬ | ೧೯೫೮ | ೧೯೭೦ |
| **ವರಾಹ** | ೧೯೧೧ | ೧೯೨೩ | ೧೯೩೫ | ೧೯೪೭ | ೧೯೫೯ | ೧೯೭೧ |

ವರು. ದ್ರವ್ಯಾರ್ಜನೆಯಾಗುತ್ತದೆ. ಆದರ ತಮಗಾಗಿ ಮತ್ತು ತಾವು ಪ್ರೀತಿಸಿದವರಿಗಾಗಿ ಮಾತ್ರ ತುಂಬಾ ವೆಚ್ಚಮಾಡುವರು. ಬಹುಶಃ ಮಮತೆ ಪ್ರಣಯಗಳಿದ್ದಲ್ಲಿ ಮಾತ್ರ ತುಂಬಾ ಉದಾರರು. ಇವರ ಉದಾರತೆಯ ಪ್ರತಿಫಲಮಾತ್ರ ಸೊನ್ನೆ.

ಮೇಲು ತೋರಿಕೆಗೆ ತುಂಬಾ ಶಾಂತ-ಚಿತ್ತರೆಂದು ಕಂಡರೂ ತುಸುಮುಂಗೋಪಿಗಳು ಆದರೆ ಸಿಟ್ಟನ್ನು ವ್ಯಕ್ತಮಾಡುವದರಲ್ಲಿ ಮಾತ್ರ ಜಾಗರೂಕತೆ ವಹಿಸುತ್ತಾರೆ. ಸಂಕೋಚ ಪ್ರವೃತ್ತಿಯವರಾದರೂ ಹರಟೆ ಪ್ರಿಯರು ಸತ್ಯವನ್ನು ಮೆಚ್ಚುವವರು, ಮಹತ್ವಾಕಾಂಕ್ಷಿಗಳು. ಇವರಿಗ ಹಳೆಯ ಗೆಳೆಯರನ್ನು ಮರೆತು ಹೊಸ ಗೆಳೆಯರೊಡನೆ ಬೆರೆಯುವದು ತುಂಬಾ ಮೆಚ್ಚಿಗೆ

ಪ್ರಥಮ ಹಂತದಲ್ಲಿ ತುಂಬಾ ಸುದೈವಿಗಳು. ದ್ರವ್ಯ ಸಂಪಾದಿಸುವರು, ದ್ವಿತೀಯ ಹಂತದಲ್ಲಿ ಬಹುಶಃ ಪ್ರಣಯ ಪ್ರಸಂಗದಲ್ಲಿ ಅಥವಾ ತಪ್ಪು ಗ್ರಹಿಕೆಯಿಂದಾಗಿ ತುಂಬಾ ಕಷ್ಟ ಮತ್ತು ಹಾನಿಗೊಳಗಾಗುವರು. ಆದರೆ ತೃತೀಯ ಹಂತದಲ್ಲಿ ಸುಖಜೀವನ ಸಾಗಿಸುವರು. ವಿವಾಹಕ್ಕೆ ಮೂಷಕ ವರ್ಷದವರಿಗೆ ವೃಷಭ ಮರ್ಕಟ ಇಲ್ಲವೆ **ಘೋರ ಸರ್ಪ**ದವರು ಉತ್ತಮ ಸಂಗಾತಿಗಳು.

ಮೂಷಕ, ವ್ಯಾಘ್ರ, ಸರ್ಪ ಅಥವಾ ವರಾಹ ವರ್ಷದವರು ಮಧ್ಯಮ ಸಂಗಾತಿಗಳು. ಏನಿದ್ದರೂ ಅಶ್ವ ವರ್ಷದವರನ್ನು ಮಾತ್ರ ಆರಿಸಲೇ ಕೂಡದು. ಅರವತ್ತು ವರ್ಷಕ್ಕೊಮ್ಮೆ ಬರುವ ಅಗ್ನ್ಯಾಶ್ವ ಗುಂಪಿನವರಿದ್ದರಂತೂ ಇವರ ಆಯುಷ್ಯ ಕಡಿಮೆಯಾಗುತ್ತದೆಂದು ಜಪಾನಿ ಜ್ಯೋತಿಷ್ಯರ ಅಭಿಪ್ರಾಯ

## ವೃಷಭ

ವೃಷಭ ವರ್ಷದಲ್ಲಿ ಜನಿಸಿದವರು ತುಂಬಾ ಸಂಯಮಿಗಳು. ಕೆಲ ಒಂದು ಸಲ ಮಾತ್ರ ಮಿತಿಮೀರಿದ ಕೋಪ ವ್ಯಕ್ತಮಾಡುತ್ತಾರೆ. ಮಾತು ಮಿತವಾದರೂ ಉಳಿದವರಲ್ಲಿ ಸ್ಫೂರ್ತಿಯನ್ನು ತುಂಬಬಲ್ಲರು ಏನಿದ್ದರೂ ಕಡ್ಡಿಮುರಿದಂಥ ಮಾತು ಕೆಲವೊಮ್ಮೆ ಹೊರಹೊಮ್ಮುವ ಕೋಪ ಇವರ ಮಿತ್ರರ ಸಂಖ್ಯೆಯನ್ನು ಮಿತಗೊಳಿಸುವವು ಹಿಡಿದ ಕಾರ್ಯವನ್ನು ಮಾಡಿಯೇ ತೀರಬೇಕೆಂಬ ಛಲ. ಅದಕ್ಕೇನಾದರೂ ವ್ಯತಿರಿಕ್ತವಾದರೆ ಕೋಪ ಬರುತ್ತದೆ. ಇವರಿಗೆ ತಾವು ಮಾಡಿದ ಪ್ರತಿಯೊಂದು ಕಾರ್ಯವೂ ಯಶಸ್ವಿಯಾಗಲೇ ಬೇಕು, ಇಲ್ಲವಾದರೆ ನಿರಾಶೆ ಅಥವಾ ದ್ವೇಷ.

ಜಾಣರು ಮತ್ತು ಸೂಕ್ಷ್ಮ ಮತಿಗಳು. ತುಂಬಾ ಜಾಗ್ರತೆ ವಹಿಸುವವರು. ಏನಿದ್ದರೂ ಪ್ರೇಮ ಪ್ರಣಯದ ಅರ್ಥ ಇವರಿಗಾಗದು.

ಕೈ ಕೆಲಸ, ಡ್ರಾಯಿಂಗ್ ಪೇಂಟಿಂಗ್ ಮುಂತಾದ್ದರಲ್ಲಿ ಆಸ್ಥೆಯುಳ್ಳವರು.

ಇವರ ಜೀವನದ ಪ್ರಥಮ ಹಂತ ಆನಂದದಿಂದ ತುಂಬಿರುತ್ತದೆ. ದ್ವಿತೀಯ ಹಂತದಲ್ಲಿ ಇವರ ಜೀವನಕ್ಕೆ ಮಂಕು ಕವಿದಂತಾದರೂ ತೃತೀಯ ಹಂತವು ಸುಗಮವಾಗಿ ಸಾಗುತ್ತದೆ.

ವಿವಾಹದ ಬಗ್ಗೆ ಇವರ ಆಸ್ಥೆ ಕಡಿಮೆ ಮತ್ತು ಲಗ್ನವಾಗುವದು ಇವರಿಗೆ ಸುಲಭವಲ್ಲ. ಆದರೆ ಸರ್ಪ, ಹುಂಜ ಇಲ್ಲವೆ ಮೂಷಕ ವರ್ಷದಲ್ಲಿ ಜನಿಸಿದವರು ಇವರಿಗೆ ಉತ್ತಮ ಸಂಗಾತಿಗಳಾಗಬಲ್ಲರು. ಘೋರಸರ್ಪ, ಮರ್ಕಟ, ಮೊಲ, ವರಾಹ ವರ್ಷಗಳಲ್ಲಿ ಜನಿಸಿದವರಾದರೂ ಅಡ್ಡಿ ಇಲ್ಲ. ಆದರೆ, ಅಶ್ವ ಅಥವಾ ಶ್ವಾನ ವರ್ಷದವರೊಡನೆ ಕಷ್ಟಕರವಾದದ್ದು ಮೇಷ ವರ್ಷದವರನ್ನಂತೂ ಇವರು ಲಗ್ನವಾಗಲೇ ಕೂಡದು.

## ವ್ಯಾಘ್ರ

ವ್ಯಾಘ್ರ ವರ್ಷದಲ್ಲಿ ಜನಿಸಿದವರು ತೀಕ್ಷ್ಣ ಸ್ವಭಾವದವರು ಮುಂಗೋಪಿಗಳು ಮತ್ತು ಗಂಭೀರ ಪ್ರಕೃತಿಯವರು. ತಾವು ಪ್ರೀತಿಸುವವರಿಗಾಗಿ ಎಂಥ ತ್ಯಾಗಕ್ಕೂ ಸಿದ್ಧರು. ಬೇರೆಯವರು ಇವರನ್ನು ತುಂಬ ಭಯ, ಗೌರವದಿಂದ ಕಾಣುವರು. ಎಷ್ಟೋ ಸಲ ಹಿರಿಯರು ಮತ್ತು ಮೇಲಾಧಿಕಾರಿಗಳೊಡನೆ ತೀಕ್ಷ್ಣ ಮತ ಭೇದ ವ್ಯಕ್ತ ಮಾಡುವರು. ಬೇರೆ

ಯುವರು ಇದಕ್ಕಾಗಿಯೇ ಇವರನ್ನು ಗೌರವಿಸುವರು.

ಒಳಗೊಳಗೇ ಸಂಕುಚಿತ ಸ್ವಭಾವದವರು. ಉಳಿದವರನ್ನು ಯಾವಾಗಲೂ ಸಂಶಯದಿಂದ ನೋಡುವರು, ಧೈರ್ಯಶಾಲಿಗಳಾದರೂ ಕೆಲಒವ್ಮ ಸ್ವಾರ್ಥಪರರು. ತುಂಬಾ ಶಕ್ತಿಶಾಲಿಗಳು. ಜಪಾನಿಯರು ವ್ಯಾಘ್ರ ವರ್ಷದಲ್ಲಿ ಜನಿಸುವದು ಒಳ್ಳೇಯದೆಂದು ನಂಬುತ್ತಾರೆ.

ಚೋರಭಯ, ಅಗ್ನಿಭಯ, ಭೂತಭಯ ಇವರಿಗಿರದು. ವ್ಯಾಘ್ರವರ್ಷ ಶಕ್ತಿ ಸಂಪನ್ನತೆಯ ದ್ಯೋತಕವೆಂದು ಅವರ ನಂಬಿಕೆ ಇವರ ಜೀವನದಪ್ರಥಮ ಮತ್ತು ತೃತೀಯ ಹಂತಗಳು ಸುಸೂತ್ರವಾಗಿ ಸಾಗುವವು. ದ್ವಿತೀಯ ಹಂತದಲ್ಲಿ ಮಾತ್ರ ಅನೇಕ ಮಾನಸಿಕ, ದೈಹಿಕ ತೊಂದರೆಗಳು ಇವರನ್ನೂ ಘಾಸಿ ಗೊಳಿಸುವವು. ದ್ವಿತೀಯ ಹಂತದಲ್ಲಿ ಜಾಗರೂಕತೆ ಇಂದ ವರ್ತಿಸದಿದ್ದರೆ ಅವು ತೃತೀಯ ಹಂತದಲ್ಲೂ ಇವರನ್ನು ಬಿಡಲಾರವು.

ಅಶ್ವ, ಘೋರ ಸರ್ಪ, ಇಲ್ಲವೇ ಶ್ವಾನ ವರ್ಷಗಳಲ್ಲಿ ಜನಿಸಿದವರು ಇವರಿಗ ಉತ್ತಮ ಜೀವನ ಸಂಗಾತಿಗಳಾಗುವರು. ಮೂಷಕ, ವೃಷಭ, ಮೊಲ ವ್ಯಾಘ್ರ ಮೇಷ, ಹುಂಜ, ಇಲ್ಲವೇ ವರಾಹ ವರ್ಷದವರಾದರೂ ಪರವಾಇಲ್ಲ ಆದರೆ ಸರ್ಪ ಇಲ್ಲವೇ ಮರ್ಕಟ ವರ್ಷದಲ್ಲಿ ಜನಿಸಿದವರನ್ನು ವಿವಾಹ ವಾಗುವದು ಇವರಿಗೆ ಒಳ್ಳೆಯದಲ್ಲ.

## ಮೊಲ

ಮೊಲದ ವರ್ಷದಲ್ಲಿ ಜನಿಸಿದವರು ಅತ್ಯಂತ ಸುದೈವಿಗಳು. ಇವರು ತುಂಬಾ ಜಾಣ್ಮೆಯುಳ್ಳವರು ಮತ್ತು ಮಹತ್ವಾಕಾಂಕ್ಷಿಗಳು. ಸದ್ಗುಣಗಳು ಮತ್ತು ಉತ್ತಮ ಅಭಿರುಚಿಗಳುಳ್ಳವರು. ಇವರ ಮಿತ್ರರು ಇವರಲ್ಲಿ ಒಳ್ಳೆಯ ಅಭಿಮಾನ ಮತ್ತು ವಿಶ್ವಾಸ ತಾಳುತ್ತಾರೆ. ಆರ್ಥಿಕ ವಾಗಿಯುಂತೂ ಇವರು ಯಾವಾಗಲೂ ಸುದೈವಿಗಳು ಹರಟೆ ಪ್ರಿಯರಾದರೂ ಯಾರ ಬಗ್ಗೆಯೂ ಅನುಚಿತ ಅಭಿಪ್ರಾಯ ವ್ಯಕ್ತ ಮಾಡಲಾರರು. ಅಂಥ ಪ್ರಸಂಗಗಳನ್ನು ಸಾಧ್ಯವಾದಷ್ಟು ಜಾಣ್ಮೆಇಂದ ತಪ್ಪಿಸಿಕೊಳ್ಳುತ್ತಾರೆ. ಸ್ನೇಹಿತರನ್ನುಮತ್ತು ವಿಶೇಷವಾಗಿ ಸ್ತ್ರೀಯರನ್ನು ತುಂಬ ವಾತ್ಸಲ್ಯದಿಂದ ಕಾಣುತ್ತಾರೆ. ಇಷ್ಟಾದರೂ ತಮ್ಮ ಕುಟುಂಬದ ಜನರಿಂದ ಒಂದು ಗಜ ದೂರವೇ ಇರುತ್ತಾರೆ.

ವ್ಯವಹಾರ ಕುಶಲರು, ಸುಲಭದಲ್ಲಿ ತಾಳ್ಮೆತಪ್ಪುವವರಲ್ಲ. ಆದರೆ ದುಃಖವನ್ನು ತಡೆದು ಕೊಳ್ಳುವ ಶಕ್ತಿ ತುಂಬಾ ಕಡಿಮೆ. ಹೊಸ ಹೊಸ ವಿಷಯಗಳ ಬಗ್ಗೆ ಅಸಕ್ತಿ ಕಡಿಮೆ. ಸ್ಪರ್ಧೆ ಇಲ್ಲವೇಜೂಜುಗಳಲ್ಲಿ ತುಂಬಾ ಸಲ ಯಶಸ್ವಿಯಾಗುತ್ತಾರೆ. ಏನಿದ್ದರೂ ಯಾವದೇ ನಿರ್ಣಯ ಕೈಕೊಳ್ಳುವಾಗ ಎರಡು ಸಲ ವಿಚಾರಿಸಿದ ನಂತರವೇ ನಿರ್ಣಯಕ್ಕೆ ಬರುತ್ತಾರೆ.

ಮಾಯಾ ಶಕ್ತಿಗಳು ಮೊಲದ ರೂಪದಲ್ಲಿ ಬರುತ್ತವೆಂದು ಜಪಾನಿಯರನಂಬಿಕೆ.

ಅಂತೆ ಈ ವರ್ಷದವರನ್ನು ಅವರು ಸಂಶಯ ದಿಂದ ನೋಡುತ್ತಾರೆ. ಕೈಲಾಗದ ಕೆಲ ಸಕ್ಕೆ ಕೈಹಾಕದಿದ್ದರೆ ಜೀವನದ ಮೂರೂ ಹಂತಗಳನ್ನೂ ವಿಶೇಷ ತೊಂದರೆ ಇಲ್ಲದೇ ಕಳೆಯುತ್ತಾರೆ. ವಿವಾಹಕ್ಕೆ ಮೇಷ, ವರಾಹ ಇಲ್ಲವೆ ಶ್ವಾನ ವರ್ಷದವರು ಉತ್ತಮ ಸಂಗಾತಿಳು.

ಘೋರ ಸರ್ಪ ವರ್ಷದವರನ್ನು ಆಗು ವದು ಒಳಿತಲ್ಲ ಆವರೆ ಮೂಷಕ ಇಲ್ಲವೇ ಹುಂಜ ವರ್ಷದವರನ್ನಂತೂ ಆಗಲೇ ಬಾರದು.

### ಘೋರ ಸರ್ಪ

ಇವರು ಆರೋಗ್ಯಶಾಲಿಗಳೂ, ಶಕ್ತಿ ಉತ್ಸಾಹಗಳಿಂದ ಕೂಡಿದವರೂ ಆಗಿರು ತ್ತಾರೆ. ತೀಕ್ಷ್ಣ ಸ್ವಭಾವದರೂ, ಉದ್ರೇಕ ಹೊಂದುವವರೂ, ಹಟವಾರಿಗಳೂ ಆಗಿ ರುತ್ತಾರೆ. ಆದರೆ ಇವರ ಸತ್ಯಶೀಲತೆ, ಧೈರ್ಯ ಮತ್ತು ತೀಕ್ಷ್ಣ ಮತಿಯಿಂದಾಗಿ ಯಾರಲ್ಲಿಯೂ ವಿಶ್ವಾಸ ಮತ್ತು ಆತ್ಮೀಯ ತೆಯನ್ನು ಪಡೆಯ ಬಲ್ಲರು. ಮತ್ತೊಬ್ಬ ರಿಂದ ಸಾಲ ಪಡೆಯುವದೆಂದರೆ ಇವರಿಗೆ ಜೀವವೆ ಸುತ್ತು ಬಂದಂತೆ. ಮತ್ತೊಬ್ಬರಿಗೆ ಸಲ್ಲದ ಗುಣ ಪ್ರಶಂಸೆಯನ್ನು ಮಾಡಲಾ ರರು. ಆದರೆ ಸತ್ಯ ಹೇಳಲು ಹಿಂಜರಿ ಯುವವರಲ್ಲ ತುಸು ಜಂಭದ ಪ್ರವೃತ್ತಿ ಯುವವಾದರೂ ಅವರ ಅಭಿಪ್ರಾಯಗಳು ನಂಬಲು ಯೋಗ್ಯವಾದವುಗಳು. ಕೆಲ ಸಕ್ಕೆ ಯಾವಾಗಲೂ ಮುಂದು. ಕೆಲಸ ಕೈಗೆ ತೆಗೆದುಕೊಳ್ಳಲು ಆಲಸಿಗಳು ಆದರೆ ಒಮ್ಮೆ ಕೆಲಸ ಕೈಗೆ ತೆಗೆದುಕೊಂಡರೆ ತೀರಿತು ಇವರನ್ನು ತಡೆಯುವವರಿಲ್ಲ. ಒಳ್ಳೆ ಕರ್ತೃತ್ವಶಾಲಿಗಳು ಮತ್ತು ಮೇಧಾವಿ ಗಳು. ಒಳ್ಳೆಯ ಕಾರ್ಯ ಅಥವಾ ಕೆಟ್ಟದು ಯಾವದಿದ್ದರೂ ಅಷ್ಟೇ ತುರಿಸಿ ನಿಂದ ಮಾಡುವರು.

ತುಂಬಾ ಮೃದು ಹೃದಯಿಗಳು ಅನು ಕಂಪ ಉಳ್ಳವರು. ಆದರೆ ಇವರ ಈ ಸ್ವಭಾವವನ್ನು ಇತರರು ದುರುಪಯೋಗ ಪಡಿಸಿ ಕೊಳ್ಳುವದು ಹೆಚ್ಚು. ಒಮ್ಮೊಮ್ಮೆ ವಿನಾಕಾರಣವಾಗಿ ಸಣ್ಣಪುಟ್ಟ ವಿಷಯಗಳಿಗೆ ತಲೆ ಕೆಡಿಸಿಕೊಳ್ಳುವರು. ಸಾಮಾನ್ಯವಾಗಿ ಮಿತ ಭಾಷಿಗಳಾದರೂ ಉದ್ರೇಕ ಗೊಂಡಾಗ ಬಹಳ ಗೊಣಗುವರು.

ಘೋರ ಸರ್ಪವು ಸಂಪತ್ತು ಸಂತೋಷ ವಿವೇಕ ಮತ್ತು ದೀರ್ಘಾಯುಷ್ಯಗಳ ದ್ಯೋತಕ ಮತ್ತು ಈ ವರ್ಷಗಳಲ್ಲಿ ಜನಿ ಸುವದು ಶುಭ ಸೂಚಕವೆಂದು ಜಪಾನಿ ಯರ ನಂಬುಗೆ.

ಜೀವನ ಪ್ರಥಮ ಹಂತ ಅಹಂಕಾರ ದಿಂದ ಕಷ್ಟದಾಯಕ. ದ್ವಿತೀಯ ಹಂತದಲ್ಲಿ ಅನೇಕ ಏರು ಪೇರುಗಳಿಂದ ಕೂಡಿದ್ದು ಇವರು ತಡವಾಗಿ ವಿವಾಹವಾಗುವದಾಗಲಿ ಅಥವಾ ವಿವಾಹವಾಗದೇ ಇರುವದಾಗಲಿ ಹೆಚ್ಚು ಆದರೂ ವಿಷಯಾಸಕ್ತರು. ಮೂಷಕ, ಸರ್ಪ ಇಲ್ಲವೇ ಮರ್ಕಟ ಹುಂಜ, ವರ್ಷಗಳಲ್ಲಿ ಜನಿಸಿದವರು ಇವ ರಿಗೆ ಉತ್ತಮ ಸಂಗಾತಿಗಳಾಗಬಲ್ಲರು.

ವ್ಯಾಘ್ರ, ಅಶ್ವ, ಮೇಷ, ಅಥವಾ ವರಾಹ ವರ್ಷಗಳವರಾದರೂ ನಡೆದೀತು. ಏನಿದ್ದರೂ ಶ್ವಾನ ವರ್ಷದಲ್ಲಿ ಜನಿಸಿದವರನ್ನಂತೂ ವಿವಾಹವಾಗಬಾರದು.

**ಸರ್ಪ**

ಈ ವರ್ಷದಲ್ಲಿ ಜನಿಸಿದವರ ನೆಲೆ ಸುಲಭವಾಗಿ ಯಾರಿಗೂ ತಿಳಿಯಲಾರದು. ತುಂಬಾ ಜಾಣ್ಮೆಯುಳ್ಳವರು ಮತ್ತು ಮಿತಭಾಷಿಗಳು ಆರ್ಥಿಕ ವಿಷಯಗಳಲ್ಲಿ ತುಂಬಾ ಸುದೈವಿಗಳು ಆದರೆ ಜಿಪುಣರು ಯಾರಿಗೂ ಸುಲಭದಲ್ಲಿ ಒಂದು ಚಿಕ್ಕಾಸು ಸಾಲ ಕೊಡುವವರಲ್ಲ .ವಾದ ವಿಷಯಗಳಲ್ಲಿ ತುಂಬಾ ದಯಾಪರರು. ಪರರು ಬೇಡೆನ್ನುವಷ್ಟು ಸಹಾಯಮಾಡುವರು. ಯಾವದನ್ನೂ ಅತಿಯಾಗಿ ಮಾಡುವದು ಇವರ ಸ್ವಭಾವ. ಇತರರ ಮೇಲೆ ವಿಶ್ವಾಸ ಕಡಿಮೆ ಯಾವಾಗಲೂ ತಮ್ಮದೇ ಅಭಿಪ್ರಾಯ ಸರಿಯೆಂದು ನಂಬುವವರು ಮತ್ತು ಒಮ್ಮೆ ನಿರ್ಣಯ ಕೈಗೊಂಡರೆ ಯಾರಿಂದಲೂ ಬದಲಾಗದಷ್ಟು ಕಠೋರರು ಅಯಶಸ್ವಿಯಾಗುವದನ್ನು ಸಹಿಸಲಾರರು. ತಾಳ್ಮೆ ಕಡಿಮೆ. ಸರ್ಪ ಸೌಂದರ್ಯದ ದ್ಯೋತಕವೆಂದು ಜಪಾನೀಯರ ಅಭಿಪ್ರಾಯ ಈ ವರ್ಷದಲ್ಲಿ ಜನಿಸಿದ ಸ್ತ್ರೀ-ಪುರುಷರು ಸುಂದರ ಕಾಯ ಉಳ್ಳವರು. ಜತೆಗೆ ವಿಷಯಾಸಕ್ತಿ ಬಹಳ. ಇವರಿಂದಾಗಿ ಕೌಟುಂಬಿಕ ತೊಂದರೆ ಕಟ್ಟಿಟ್ಟದ್ದು. ಕೌಟುಂಬಿಕ ತೊಂದರೆಗಳಿಗೆ ಒಳಗಾಗದಿದ್ದರೆ ಇವರ ಜೀವನವು ಸುಗಮವಾಗಿ ಸಾಗುವದು. ಎಲ್ಲ ವಿಷಯುಳಗಲ್ಲಿ ಶಾಂತ ಸ್ವಭಾವದವರಾದರೂ ಅತಿವರ್ತನೆಇಂದ ತೊಂದರೆಗಳಿಗೆ ಒಳಗಾಗುವರು. ಪ್ರಥಮ ದ್ವಿತೀಯ ಹಂತಗಳಲ್ಲಿ ತೊಂದರೆ ಇಲ್ಲವೇ ಜೀವನ ಸಾಗಿಸುವದಾದರೂ ತೃತೀಯ ಹಂತದಲ್ಲಿ ಮಾತ್ರ ತುಂಬಾ ಜಾಗರೂಕತೆ ವಹಿಸಬೇಕು. ಸರ್ಪ ವರ್ಷಗಳಲ್ಲಿ ಜನಿಸಿದವರ ತೃತೀಯ ಹಂತವು ತ್ರಾಸದಾಯಕವಾದದ್ದು, ದೈಹಿಕ ಮತ್ತು ಕೌಟುಂಬಿಕ ತೊಂದರೆಗಳಿಗೆ ಒಳಗಾಗುವರು.

ಸರ್ಪ ವರ್ಷಗಳಲ್ಲಿ ಜನಿಸಿದವರಿಗೆ ಅತಿ ಯೋಗ್ಯ ಸಂಗಾತಿಗಳೆಂದರೆ ವೃಷಭ ಇಲ್ಲವೇ ಹುಂಜ ವರ್ಷಗಳಲ್ಲಿ ಜನಿಸಿದವರು. ಆದರೆ ಮೂಷಕ, ಮೊಲ, ಘೋರ ಸರ್ಪ, ಅಶ್ವ ಇಲ್ಲವೇ ಮೇಷ ವರ್ಷಗಳಲ್ಲಿ ಜನಿಸಿದವರೊಡನೆ ವಿವಾಹವಾದರೂ ತೊಂದರೆ ಇರಲಾರದು. ಮರ್ಕಟ ವರ್ಷದವರೊಡನೆ ವಿವಾಹ ತೊಂದರೆದಾಯಕ. ವ್ಯಾಘ್ರ ಅಥವಾ ಶ್ವಾನ ವರ್ಷದಲ್ಲಿ ಜನಿಸಿದವರನ್ನಂತೂ ವಿವಾಹವಾಗಲೇ ಕೂಡದು.

**ಅಶ್ವ**

ತಮ್ಮ ಸಂಗಾತಿಗಳನ್ನುಹೊಗಳಿ ತಮ್ಮ ಕಾರ್ಯ ಸಾಧಿಸಿಕೊಳ್ಳುವ ಜಾಣ್ಮೆ ಅಶ್ವ ವರ್ಷಗಳಲ್ಲಿ ಜನಿಸಿದವರಿಗುಂಟು. ಇವರು ಜನಪ್ರಿಯರಾಗಲು ಕೂಡಾ ಇದೇ ಕಾರಣ.

ಯಾವಾಗಲೂ ಸಂತೋಷದಿಂದ ಕಾಲ ಕಳೆಯ ಬೇಕೆನ್ನುವವರು. ಹರಟೆ ಮಲ್ಲರು ಆರ್ಥಿಕ ವಿಷಯಗಳಲ್ಲಿ ತುಂಬಾ ಮುಂಧೋರಣೆಯುಳ್ಳವರು ಮತ್ತು ಹಣ ಕಾಸಿನ ವಿಷಯವನ್ನು ಜಾಣ್ಮೆ ಇಂದ ನಿರ್ವಹಿಸುವರು ಕೈಕೆಲಸದಲ್ಲಿ ಆಸಕ್ತಿ ಉಳ್ಳವರು. ಒಳ್ಳೆ ಜಾಣರೂ ಸ್ವಾಭಿಮಾನಿಗಳು ಎಂದು ತೋರಿದರೂ ವಿಷಯಾಸಕ್ತಿ ಇಂದಾಗಿ ಸಾಮಾನ್ಯವಾಗಿ ಕೈಗೊಂಡ ಕೆಲಸಗಳಲ್ಲಿ ಅಯಶಸ್ವಿಯಾಗುವದೇ ಹೆಚ್ಚು.

ಕೋಪಿಷ್ಠರು ಯಾವುದಕ್ಕೂ ತಾಳ್ಮೆ ಕಡಿಮೆ. ಪ್ರಿಯಕರ ಇಲ್ಲವೇ ಪ್ರೇಯಸಿಯ ವಿಷಯವಾಗಿದ್ದರಂತೂ ಉಳಿದೆಲ್ಲ ವಿಷಯಗಳಲ್ಲಿ ಅಂಧರಂತೆ ವರ್ತಿಸುತ್ತಾರೆ. ಏನಿದ್ದರೂ ಇವರು ಬಹಳ ಅಲಂಕಾರ ಪ್ರಿಯರು. ಮನೆ-ತೋಟ, ತಮ್ಮ ವಸ್ತ್ರಾಭರಣಗಳು ಎಲ್ಲದರಲ್ಲಿಯೂ ಇವರ ಅಲಂಕಾರ ಪ್ರಿಯತೆ ಕಂಡುಬರುತ್ತದೆ. ಪರರ ಮನದ ಇಂಗಿತವನ್ನು ಸುಲಭದಲ್ಲಿ ಗ್ರಹಿಸುವರು.

ಇವರಿಗೆ ಸಿನೆಮಾ, ನಾಟಕ ಮುಂತಾದ ಮನರಂಜನೆಗಳಲ್ಲಿ ಆಸಕ್ತಿ ಹೆಚ್ಚು ಸ್ವತಂತ್ರ ಪ್ರವೃತ್ತಿಯವರು ತುಸು ಪಕ್ಕಬಲಿತ ಕೂಡಲೆ ಯಾರ ಮಾತಿಗೂ ಕಿವಿ ಕೊಡದೇ ತಮ್ಮದೇ ಮಾತು ನಡೆಸಬೇಕೆನ್ನುತ್ತಾರೆ. ಇವರು ಸಾಧ್ಯವಾದಷ್ಟು ಮಟ್ಟಿಗೆ ಕೌಟುಂಬಿಕ ಚಕ್ರದಿಂದ ಬೇಗ ಹೊರಬೀಳುವದು ವಿಹಿತ.

ಜೀವನದ ಪ್ರಥಮ ಮತ್ತು ದ್ವಿತೀಯ ಹಂತಗಳಲ್ಲಿ ಇವರು ಸಾಹಸದಿಂದಲೇ ಜೀವನವನ್ನು ಎದುರಿಸಿ ಕಷ್ಟಗಳನ್ನು ಅನುಭವಿಸಬೇಕಾಗುತ್ತದೆ. ತೃತೀಯ ಹಂತದಲ್ಲಿ ಶಾಂತಿಯಿಂದ ಜೀವನ ಕಳೆಯುತ್ತಾರೆ. ಆಗ ಇವರ ಜೀವನಕ್ಕೆ ಒಳ್ಳೆ ಕಳೆ ಏರುತ್ತದೆ.

ಲಗ್ನದ ಬಗ್ಗೆ ಹೇಳುವಾಗ ವ್ಯಾಘ್ರ, ಶ್ವಾನ ಮತ್ತು ಮೇಷ ವರ್ಷದವರಿಗೆ ಶ್ರೇಷ್ಠ ಸಂಗಾತಿಗಳೆನಿಸುವರು. ಘೋರ ಸರ್ಪ, ಸರ್ಪ, ಮರ್ಕಟ, ಹುಂಜ, ಇಲ್ಲವೇ ವರಾಹ ವರ್ಷಗಳಲ್ಲಿ ಜನಿಸಿದವರು ಮಧ್ಯಮ ಸಂಗಾತಿಗಳು. ಆದರೆ ಅಶ್ವ ವರ್ಷದಲ್ಲಿ ಜನಿಸಿದವರು ವೃಷಭ, ಅಶ್ವ ಇಲ್ಲವೇ ಮೊಲಗಳ ವರ್ಷದವರೊಡನೆ ಉತ್ತಮ ಸಂಗಾತಿಗಳಾಗಲಾರರು. ಏನಿದ್ದರೂ ಮೂಷಕ ವರ್ಷದವರನ್ನಂತೂ ವಿವಾಹವಾಗಲೇ ಕೂಡದು ಎಂದು ಜಪಾನಿಯರ ಅಭಿಮತ.

## ಮೇಷ

ಈ ವರ್ಷದಲ್ಲಿ ಜನಿಸಿದವರು ಸುಧ್ಯಢರು ಸೌಂದರ್ಯ ಪ್ರಿಯರು. ತುಸು ಒಣ ಜಂಭದವರು. ಮೊದಲ ನೋಟಕ್ಕೆ ಇತರರಿಗಿಂತ ಒಳ್ಳೆ ಮುಂದುವರೆದವರು ಎಂದು ಕಂಡರೂ ಪರಿಸ್ಥಿತಿ ಹಾಗಿರುವದಿಲ್ಲ. ಭೋಳೆ ಸ್ವಭಾವದವರು. ತುಸು ಮಟ್ಟಿಗೆ ನಿರಾಶಾವಾದಿಗಳು. ಚಂಚಲ ಸ್ವಭಾವದವರು. ಕೆಲವೊಂದು ವಿಷಯಗಳಲ್ಲಿ ಮಾತ್ರ

ಅತ್ಯಂತ ಧೃಢ ಮನಸ್ಸನ್ನೂ ವ್ಯಕ್ತ ಗೊಳಿಸುವರು. ಜೀವನದತ್ತ ಯಾವಾಗಲೂ ಇವರದು ಆಶ್ಚರ್ಯದ ದೃಷ್ಟಿಯು. ಸ್ಪಷ್ಟ ಅಭಿಪ್ರಾಯ ಉಳ್ಳವರಲ್ಲ. ಒಳ್ಳೆಯ ಮಾತುಗಾರರೂ ಅಲ್ಲ. ಧಾರ್ಮಿಕ ಪ್ರವತ್ತಿ ಹೆಚ್ಚು. ವಿಷಯಾಸಕ್ತರೂ ಹೌದು. ಸ್ವಭಾವ ಒಳ್ಳೆಯದು. ದುಃಖವನ್ನು ತಡೆದುಕೊಳ್ಳಲಾರರು. ಪರರ ಸಹಾಯಕ್ಕೆ ಯಾವಾಗಲೂ ಮುಂದಾಗುವರು. ನಿರಪೇಕ್ಷ ಭಾವನೆಯಿಂದ ಸಹಾಯ ಮಾಡುವರು.

ಆರ್ಥಿಕ ತೊಡಕುಗಳು ಇವರಿಗೆ ಜೀವಮಾನದಲ್ಲಿಯೇ ಎದುರಾಗುವದಿಲ್ಲ. ತಾವಾಗಿಯೇ ನಿವಾರಣೆಯಾಗುವ ವಿಷಯಗಳು ಹೆಚ್ಚು. ಉತ್ತಮ ಅಭಿರುಚಿಯುಳ್ಳವರು. ಆಹಾರ ವಸ್ತ್ರ ಮನೆಯ ಅಲಂಕಾರ ಎಲ್ಲವೂ ಅಚ್ಚುಕಟ್ಟಾಗಿರಬೇಕು. ಎಂದು ಬಯಸುವರು. ಒಟ್ಟಾರೆ ಕಲಾಪ್ರಿಯರು.

ಚಿಕ್ಕಂದಿನಿಂದ ಯೋಗ್ಯ ಮಾರ್ಗದರ್ಶನ ದೊರೆತರೆ ಉತ್ತಮ ಕಲಾಕಾರರಾಗುವರು.

ಜೀವನದ ದ್ವಿತೀಯ ಹಂತದಲ್ಲಿ ಪ್ರಣಯ ಮತ್ತು ಭಾವನಾತ್ಮಕ ಕ್ಲೇಶಗಳಿಗೆ ಒಳಗ್ಗಾಗುವರು. ತೃತೀಯ ಹಂತದಲ್ಲಿ ಮಾತ್ರ ಅತ್ಯಂತ ಸುದೈವಿಗಳು. ತೃತೀಯ ಹಂತವು ಮೇಷ ವರ್ಷದವರ ಸುವರ್ಣ ಅವಧಿ ಎಂದು ಜಪಾನಿಯರ ಅಭಿಮತ.

ವಿವಾಹಕ್ಕೆ ಮೇಷ ವರ್ಷದವರು ಮೊಲ, ಅಶ್ವ, ಇಲ್ಲವೇ ವರಾಹ ವರ್ಷದಲ್ಲಿ ಜನಿಸಿದವರನ್ನೂ ಆರಿಸುವದು ಅತ್ಯುತ್ತಮ. ಬದಲಾಗಿ ವ್ಯಾಘ್ರ, ಘೋರ ಸರ್ಪ, ಸರ್ಪ, ಮೇಷ, ಮರ್ಕಟ ಇಲ್ಲವೇ ಹುಂಜದ ವರ್ಷದವರನ್ನು ಆರಿಸಿದರೂ ಅಡ್ಡಿ ಇಲ್ಲ.

## ಮರ್ಕಟ

ಮರ್ಕಟ ವರ್ಷದಲ್ಲಿ ಜನಿಸಿದವರು ತುಂಬಾ ಮೇಧಾವಿಗಳು. ಜಪಾನಿಯರು ತಮ್ಮ ರಾಶಿಚಕ್ರದಲ್ಲಿ ಇವರನ್ನು ಅತ್ಯಂತ ಮೇಧಾವಿಗಳೆಂದು ಗಣಿಸುತ್ತಾರೆ. ಯಾವದೊಂದು ಕಾರ್ಯವನ್ನು ಕೈಗೊಂಡು ಅದನ್ನು ಸುಯೋಜಿತವಾಗಿ ಯಶಸ್ವಿಯಾಗುವಂತೆ ನೆರವೇರಿಸುತ್ತಾರೆ.

ಯಾವದೇ ಸಮಸ್ಯೆಗೂ ತಮ್ಮದೇ ಆದ ದಾರಿಯನ್ನು ಇವರು ಹುಡುಕುತ್ತಾರೆ. ಮತ್ತೊಬ್ಬರು ಮುಂಗಾಣದ ಕುರಿತ ಸಂದರ್ಭಗಳಲ್ಲಿಯೂ ಇವರು ಅನಾಯಾಸವಾಗಿ ಪರಿಹಾರ ಮಾರ್ಗ ಕಂಡುಕೊಳ್ಳುತ್ತಾರೆ. ಮತ್ತು ಯಾವದೇ ವೃತ್ತಿಗಿಳಿದರೂ ಯಶಸ್ವಿಯಾಗುತ್ತಾರೆ.

ಎರಡನೆಯವರೊಡನೆ ನಯವಾಗ ಮಾಡನಾಡುವದು ಇವರಿಗೆ ತುಂಬಾ ಪ್ರೀತಿಯ ವಿಷಯ. ತಮ್ಮ ಮಾರ್ಗ ಸುಗಮ ಗೊಳಿಸುವ ಸಲುವಾಗಿ ಸಕ್ಕರೆಯಂಥ ಮಾತುಗಳನ್ನು ಉರುಳಿಸುತ್ತಾರೆ.

ಕೈಕೆಲಸ, ಜಾಣತನ, ಪರಿಸ್ಥಿತಿಗೆ ಹೊಂದಿಕೊಳ್ಳುವ ಗುಣ ಇವರಿಗ ತಾವಾಗಿಯೇ ಸಾಧಿಸಿರುತ್ತವೆ. ಜ್ಞಾನಾರ್ಜನೆಗಾಗಿ ಎಷ್ಟುಬೇಕಾದರೂ ಶ್ರಮ ವಹಿಸುತ್ತಾರೆ. ಇವರ ಜ್ಞಾಪಕ ಶಕ್ತಿಯೂ

ಅದ್ಭುತವಾದದ್ದು ಎಷ್ಟೇ ಸಣ್ಣ ವಿಷಯು ವಿದ್ದರೂ ಅದರ ಪೂರ್ಣ ವಿವರಣೆ ಇವರ ನೆನಪಿನಲ್ಲಿ ಇರುತ್ತದೆ. ಇವರನ್ನು ತಮ್ಮ ಪಾಡಿಗೆ ನಡೆಯಲು ಬಿಟ್ಟರೆ ಬಹಳ ಮಟ್ಟಿಗೆ ಕೀರ್ತಿ ಶಾಲಿಗಳಾಗುತ್ತಾರೆ. ತುಂಬಾ ವಾಚಾಳಿಗಳು ಮಾತು ಕಡಿಮೆ ಮಾಡಿದರೆ ಕೀರ್ತಿಯ ಮೆಟ್ಟಲನ್ನು ಸುಲಭವಾಗಿ ಏರಬಲ್ಲರು. ಶೀಘ್ರ ಕೋಪಿಗಳಾದರೂ ಬೇಗನೇ ಶಾಂತರಾಗಿ ಎಲ್ಲಮರೆತುಬಿಡುತ್ತಾರೆ.

ಸಾಧ್ಯಾಸಾಧ್ಯತೆಗಳನ್ನು ಗಮನಿಸಿ ತಕ್ಕ ನಿರ್ಣಯಗಳನ್ನು ಕೈಗೊಳ್ಳುವ ಸಾಮರ್ಥ್ಯ ಇರುತ್ತದೆ. ಜೀವನದ ದ್ವಿತೀಯ ಹಂತವು ಮಾತ್ರ ಅತ್ಯಂತ ಕಷ್ಟಕರವಾದದ್ದು ಇವರಿಗೆ ತಮ್ಮ ಸಾಮರ್ಥ್ಯಗಳು ಮೇಲಿನ ನಂಬುಗೆ ಹಾರಿ ಹೋಗುತ್ತದೆ. ಯೋಜನೆಗಳನ್ನು ಪ್ರಾರಂಭಮಾಡದೇ ಕೈ ಬಿಡುತ್ತಾರೆ. ಅಧೈರ್ಯ ಹೆಚ್ಚುತ್ತದೆ. ಯಾವದೋ ಮೋಹಕ್ಕೆ ಒಳಗಾಗಿ ಅಯಶಸ್ವಿ ಯಾಗುತ್ತಾರೆ.

ವಿವಾಹಕ್ಕೆ ಸಂಗಾತಿಗಳನ್ನು ಆರಿಸುವಾಗ ಘೋರಸರ್ಪ ಅಥವಾ ಮೂಷಕ ವರ್ಷದವರನ್ನು ಆರಿಸುವದು ಅತ್ಯುತ್ತಮವೊಲ, ಮೇಷ ಇಲ್ಲವೇ ಶ್ವಾನ ವರ್ಷದವರನ್ನು ಆರಿಸುವದು ಮಧ್ಯಮ. ಆದರೆ ಸರ್ಪ ಇಲ್ಲವೇ ವರಾಹವರ್ಷದವರನ್ನು ಆರಿಸದಿದ್ದರೆ ಒಳಿತು. ಏನಿದ್ದರೂ ವ್ಯಾಘ್ರ ವರ್ಷದವರನ್ನಂತೂ ಆರಿಸಲೇಬಾರದು.

**ಹುಂಜ**

ಈ ವರ್ಷದಲ್ಲಿ ಜನಿಸಿದವರು ಆಳವಾಗಿ ವಿಚಾರಿಸುವವರು ತಮ್ಮ ಕಾರ್ಯದಲ್ಲಿ ಯಾವಾಗಲೂ ತನ್ಮಯತೆ ಹೊಂದುವವರು. ತಮ್ಮ ತಿಳಿವಿಗೆ ಎಟುಕದ ಕಾರ್ಯಕ್ಕೆ ಕೈ ಹಾಕಿ ಅನೇಕರು ಅಯಶಸ್ವಿಯಾಗುವರು. ಅಂಥ ಸಂದರ್ಭಗಳಲ್ಲಿ ನಿರಾಶೆ ಮತ್ತು ಕೋಪವನ್ನು ವ್ಯಕ್ತಪಡಿಸುವರು.

ವಿಕ್ಷಿಪ್ತ ಸ್ವಭಾವದವರು. ತಮ್ಮ ವಿಕ್ಷಿಪ್ತತೆಇಂದಾಗಿ ಇತರರೊಡನೆ ಮಧುರ ಬಾಂಧವ್ಯ ಕಾಯ್ದು ಕೊಳ್ಳಲು ಅಸಮರ್ಥರಾಗುವರು. ತಾವು ಹೇಳಿದ್ದೇ ನಡೆಯಬೇಕು. ಎಲ್ಲರೂ ತಮ್ಮ ಮೂಗಿನ ನೇರಕ್ಕೆ ಇರಬೇಕೆಂದು ಅಪೇಕ್ಷಿಸುವರು. ಇತರರನ್ನು ನಂಬದವರು.

ಯಾವಾಗಲೂ ಗಾಳಿಗೋಪುರ ಕಟ್ಟುವದರಲ್ಲಿ ಮುಂದು. ಆದರೆ ಕೃತಿಗಿಳಿದಾಗ ಅಷ್ಟೇ ಧೈರ್ಯದಿಂದ ಎದುರಿಸುವ ಸಾಹಸ ವ್ಯಕ್ತ ಮಾಡಲಾರರು.

ಮಹತ್ವಾಕಾಂಕ್ಷಿಗಳಾದರೂ ಮುಂಧೋರಣೆ ಇಲ್ಲದವರು. ಅಲ್ಲದೇ ಸ್ವಾರ್ಥಿಗಳು ಇತರರ ಅಭ್ಯುದಯ ಇವರಿಗೆ ಸಂತೋಷ ಉಂಟು ಮಾಡುವದಿಲ್ಲ. ಪ್ರಸಂಗ ದೊರೆತಾಗ ಕಡ್ಡಿ ಮುರಿದಂತೆ ಮಾತನಾಡಿ ತಮ್ಮ ಅಸೂಯೆ ವ್ಯಕ್ತ ಪಡಿಸುವರು.

ಇವರ ಆರ್ಥಿಕ ಪರಿಸ್ಥಿತಿ; ಯಾವಾಗಲೂ ಚಂಚಲವಾದದ್ದು ಇದ್ದಾಗ ನವಾಬ

ರಂತೆ ಖರ್ಚು ಮಾಡಿ ಇಲ್ಲದಾಗ ಫಕೀರರು. ಏನಿದ್ದರೂ ಅಂಜುಬುರುಕರಲ್ಲ ಎಲ್ಲವನ್ನೂ ಧೈರ್ಯದಿಂದ ಎದುರಿಸುವರು. ಅಲ್ಪಾವಧಿಯಲ್ಲಿ ಗೆಳೆಯರನ್ನು, ಸಂಪಾದಿಸಿ ಅಷ್ಟೇ ಬೇಗ ಕಳೆದುಕೊಳ್ಳುವರು. ಇವರು ಜಾಗರೂಕತೆ ವಹಿಸದಿದ್ದರೆ ಬೇರೆಯವರು ಇವರಬಗ್ಗೆ ವ್ಯತಿರಿಕ್ತ ಅಭಿಪ್ರಾಯ ತಾಳುವ ಸಂಭವ ಹೆಚ್ಚು.

ವೃಷಭ, ಸರ್ಪ ಇಲ್ಲವೇ ಘೋರಸರ್ಪ ವರ್ಷಗಳಲ್ಲಿ ಜನಿಸಿದವರನ್ನೂ ಆರಿಸಿದರೆ ಇವರು ಉತ್ತಮ ವೈವಾಹಿಕ ಜೀವನ ನಡೆಸುವರು. ವ್ಯಾಘ್ರ, ಅಶ್ವ, ಮೇಷ, ಮರ್ಕಟ ಇಲ್ಲವೆ ವರಾಹ ವರ್ಷದವರನ್ನು ಆರಿಸಲು ಅಡ್ಡಿ ಇಲ್ಲ.

ಮೂಷಕ ವರಾಹ ಇಲ್ಲವೇ ತಮ್ಮದೇ ವರ್ಷದಲ್ಲಿ ಜನಿಸಿದವರನ್ನು ಆರಿಸದಿರುವದು ಒಳಿತು. ಮೊಲದ ವರ್ಷದಲ್ಲಿ ಜನಿಸಿದವರನ್ನಂತೂ ಆರಿಸಬಾರದು.

**ಶ್ವಾನ**

ಈ ವರ್ಷದಲ್ಲಿ ಜನಿಸಿದವರಿಗೆ ಉತ್ತಮ ಗುಣಗಳಿರುತ್ತವೆ. ಒಳ್ಳೆಯ ಸ್ವಭಾವಕ್ಕೆ ಹೆಸರಾದವರು. ಅತ್ಯಂತ ನಿಷ್ಠೆ ಸತ್ಯಪ್ರಿಯತೆ ಹೊಂದಿದ್ದು ತುಂಬಾ ಕರ್ತವ್ಯ ಪರಾಯಣರು. ಬೇರೆಯವರ ಗೌರವಕ್ಕೆ ಪಾತ್ರರಾಗುತ್ತಾರೆ. ಗೌಪ್ಯ ಸಂಗತಿಗಳನ್ನು ಗೌಪ್ಯವಾಗಿಡುವ ಕಲೆ ಇವರಿಗೆ ಸಾಧಿಸಿರುತ್ತವೆ. ಆದರೂ ಇವರಲ್ಲಿ ಸ್ವಾರ್ಥವಡಗಿರುತ್ತದೆ. ಕೆಲವೊಮ್ಮೆ ತಲೆ ಕೆಡಿಸುವಷ್ಟು ಹಟ ಮಾರಿಗಳಾಗುತ್ತಾರೆ.

ಹಣದ ಬಗ್ಗೆ ಎಂದೂ ಕಾಳಜಿಮಾಡುವವರಲ್ಲ ಆದರೂ ಇವರಿಗೆ ಹಣದ ಕೊರತೆ ಬೀಳುವದಿಲ್ಲ. ಸಾಮಾಜಿಕ ಕಾರ್ಯಗಳಲ್ಲಿ ತಲೆಹಾಕುವದು ಕಡಿಮೆ. ಭಾವನಾ ಪ್ರಪಂಚದಿಂದ ಒಂದು ಗಜ ದೂರವಿರುತ್ತಾರೆ.

ಇತಿಹಾಸದ ಪುಟವನ್ನು ನೋಡಿದರೂ ಶ್ವಾನ ವರ್ಷಗಳಲ್ಲಿ ಜನಿಸಿದವರು ಅತ್ಯಂತ ನ್ಯಾಯಪರರೆಂಬುದು ವೇದ್ಯವಾಗುತ್ತದೆ. ಅನ್ಯಾಯವನ್ನು ಸಹಿಸಲಾರರು. ಅನ್ಯಾಯದ ವಿರುದ್ಧ ಯಾವಾಗಲೂ ಕತ್ತಿಹಿರಿಯುತ್ತಾರೆ ಮತ್ತು ಅನ್ಯಾಯದ ಪರಿಮಾರ್ಜನೆ ಯಾಗುವವರೂ ವಿಶ್ರಾಂತಿ ಪಡೆಯರು.

ಹರಟೆ ಪ್ರಿಯರಲ್ಲದಿದ್ದರೂ ಸಮಯ ಬಂದಾಗ ಉತ್ತಮ ಮಾತುಗಾರರು. ಔದ್ಯಮಿಕ ಕಾರ್ಯಗಳಲ್ಲಿ, ಸಂಘಟನೆಯಲ್ಲಿ ತುಂಬ ಯಶಸ್ವಿಯಾಗುವರು

ಶ್ವಾನ ವರ್ಷಗಳಲ್ಲಿ ಜನಿಸಿದವರಿಗೆ ಅಶ್ವ, ವ್ಯಾಘ್ರ, ಅಥವಾ ಮೊಲದ ವರ್ಷಗಳಲ್ಲಿ ಜನಿಸಿದವರು ಅತ್ಯುತ್ತಮ ಸಂಗಾತಿಗಳಾಗಬಲ್ಲರು. ಮೂಷಕ, ಸರ್ಪ, ಮರ್ಕಟ, ಶ್ವಾನ, ವರಾಹ ವರ್ಷಗಳಲ್ಲಿ ಜನಿಸಿದರೂ ಸುಲಭವಾಗಿ ಇವರಿಗೆ ಹೊಂದಿಕೊಳ್ಳುತ್ತಾರೆ ವೃಷಭ ಇಲ್ಲವೆ ಹುಂಜ ವರ್ಷಗಳಲ್ಲಿ ಜನಿಸಿದವರೊಡನೆ ವಿವಾಹ ತೊಂದರೆ ದಾಯಕವಾದದ್ದು.

ಘೋರಸರ್ಪ ಇಲ್ಲವೇ ಮೇಷದವರೊಡನೆ ವಿವಾಹ ವಾಗಲೇ ಕೂಡದು.

## ವರಾಹ

ಈ ವರ್ಷಗಳಲ್ಲಿ ಜನಿಸಿದವರು ಅತ್ಯಂತ ಧೈರ್ಯಶಾಲಿಗಳು, ಉದಾತ್ತರು ಮತ್ತು ಶುದ್ಧ ಅಂತಃಕರಣ ಉಳ್ಳವರು. ಏನನ್ನೇ ಸಾಧಿಸಬೇಕೆಂದು ಬಯಸಿದರೂ ತಮ್ಮೆಲ್ಲ ಶಕ್ತಿಯನ್ನು ಉಪಯೋಗಿಸಿ ಗುರಿಮುಟ್ಟುವರು. ಬಳಸುದಾರಿ ವಾಮ ಮಾರ್ಗವಾದರೆ ಇವರಿಗೆ ಸಲ್ಲದು. ಇವರದು ತಮ್ಮ ಗುರಿಯತ್ತ, ಧ್ಯೇಯದತ್ತ ನೇರವಾದ ಪ್ರಯತ್ನ. ಯಾವಾಗಲೂ ಸತ್ಯಪ್ರಿಯರು. ಇವರು ಗೆಳೆತನವನ್ನು ಪ್ರದರ್ಶಿಸುವದು ಕಡಿಮೆ. ಆದರೆ ಒಮ್ಮೆ ಗೆಳೆಯರಾದರೆ ತೀರಿತು ಅವರು ಜೀವದ ಗೆಳೆಯರಿಗಾಗಿ ಎಂಥ ತ್ಯಾಗಕ್ಕೂ ಸಿದ್ಧರಾಗುತ್ತಾರೆ. ಇವರು ಮಿತ ಭಾಷಿಗಳು ಆದರೆ ಆಡಿದ ಮಾತು ಗುಂಡು ಹೊಡೆದಂತೆ ನೇರವಾಗಿ ಗುರಿ ತಲುಪುತ್ತದೆ. ಇವರು ಸಾಮಾನ್ಯವಾಗಿ ಶಾಂತ ಚಿತ್ತರು ಆದರೆ ಕೋಪ ಬಂದರೆ ಮಾತ್ರ ನರಸಿಂಹನ ಮರಿ. ಆಗ ಅವರನ್ನು ತಡೆಯುವದು ಶಕ್ಯವಿಲ್ಲ.

ಜ್ಞಾನಾರ್ಜನೆಗಾಗಿ ಇವರು ಆಸಕ್ತಿ ವಹಿಸುತ್ತಾರೆ. ಎಲ್ಲ ವಿಷಯಗಳ ಬಗ್ಗೆ ತಿಳಿದುಕೊಳ್ಳುವ ತವಕವಿರುತ್ತದೆ. ಆದರೆ ಇವರ ಜ್ಞಾನ ವಿಸ್ತೀರ್ಣವನ್ನು ಹೊಂದಿದ್ದರೂ ಆಳವನ್ನು ಹೊಂದಿರುವದಿಲ್ಲ ಇವರು ತಮ್ಮ ಸಮಸ್ಯೆಗಳನ್ನು ಸುಲಭವಾಗಿ ಬಗೆಹರಿಸಿ ಕೊಳ್ಳಲಾರರು. ಆದರೆ ಎರಡನೆಯವರನ್ನು ಸಹಾಯ ಕೇಳಲು ಇವರ ಆತ್ಮಾಭಿಮಾನ ಅಡ್ಡ ಬರುತ್ತದೆ. ಇವರು ಕೋರ್ಟು ಕಾಯದೆ ಜಂಜಾಟದಲ್ಲಿ ಸಿಲುಕದಿರುವದು ಒಳಿತು. ಇಂಥ ಪ್ರಸಂಗದಲ್ಲಿ ಇವರ ಸಭ್ಯತೆಯ ದುರುಪಯೋಗ ಪಡೆಯುವವರೇ ಹೆಚ್ಚು.

ಜೀವನದ ಪ್ರಥಮ ಮತ್ತು ದ್ವಿತೀಯ ಹಂತಗಳಲ್ಲಿ ಕೌಟುಂಬಿಕ ತಾಪತ್ರಯಗಳು ಹೆಚ್ಚು. ತಮ್ಮ ಕುಟುಂಬದವರ ಬಗ್ಗೆ ಇವರು ಯಾವಾಗಲೂ ಆಸಕ್ತಿ ಮತ್ತು ಅಭಿಮಾನ ವಹಿಸುತ್ತಾರೆ.

ವಿವಾಹಕ್ಕೆ ಮೊಲ ಇಲ್ಲವೆ ಮೇಷ ವರ್ಷದಲ್ಲಿ ಜನಿಸಿದವರು ಅತ್ಯುತ್ತಮ ಸಂಗಾತಿಗಳು. ಮೂಷಕ, ವೃಷಭ, ವ್ಯಾಘ್ರ, ಘೋರಸರ್ಪ, ಅಶ್ವ, ಹುಂಜ ಇಲ್ಲವೇ ಶ್ವಾನ ವರ್ಷದಲ್ಲಿ ಜನಿಸಿದವರೂ ಯೋಗ್ಯ ಸಂಗಾತಿಗಳಾಗುವರು.

ಮರ್ಕಟ ಇಲ್ಲವೆ ವರಾಹ ವರ್ಷಗಳಲ್ಲಿ ಒಳ್ಳೆಯ ಸಂಗಾತಿಗಳಾಗಲಾರರು. ಸರ್ಪ ವರ್ಷಗಳಲ್ಲಿ ಜನಿಸಿದವರನ್ನಂತೂ ವಿವಾಹವಾಗಲೇ ಬಾರದು.

• • •



# ಒಂದು ಸಣ್ಣ ಕಥೆ

ಮೂಲ : ಮಾಕ್ಸಿಂ ರಿಲ್‌ಸ್ಕೀ
ಅನುವಾದ : ಐ. ವ್ಹಿ. ಎನ್.

ನಾನು ದಿನಪತ್ರಿಕೆಯನ್ನು ತಿರುವುತ್ತಿದ್ದಾಗ "ವಿವಾಹ ವಿಚ್ಛೇದನೆ"ಯ ಬಗ್ಗೆ ಬಂದ ಖಟ್ಲೆಗಳ ವರದಿಯು ನನ್ನ ಲಕ್ಷ್ಯವನ್ನು ಸೆಳೆಯಿತು. ಆ ವರದಿಗಳಲ್ಲಿ ಬಂದ ಹೆಸರುಗಳ ಹಿನ್ನೆಲೆಯಲ್ಲಿ ಬಹಳ ದುರಂತವಾದ ಘಟನೆಗಳು ಅಡಗಿವೆಯೆಂದು ನಾನು ಭಾವಿಸಿದೆ. ಜಗತ್ತಿನ ಸಾಹಿತ್ಯದಲ್ಲಿ "ಪ್ರೇಮ ಹಾಗೂ ಸಂಸಾರ" ಗಳ ವಿಷಯದ ಬಗ್ಗೆ ಎಷ್ಟು ಬರೆದಿದ್ದರೂ 'ಪ್ರೀತಿ' 'ವಿಶ್ವಾಸಘಾತಕತನ', 'ವಿಧೇಯತೆ', 'ಕರ್ತವ್ಯ' ಇವುಗಳು ಸ್ತ್ರೀ-ಪುರುಷರ ಸಂಬಂಧದ ಎಲ್ಲಾ ಹಂತಗಳನ್ನು ಪ್ರತಿನಿಧಿಸಲಾರವೆಂದು ಭಾವಿಸಿದೆ. ಹೀಗೆ ಚಿಂತಾಮಗ್ನನಾಗಿರುವಾಗ ಒಂದು ಘಟನೆ ನನಗೆ ನೆನಪಾಯಿತು.

ನನ್ನ ಸಣ್ಣಂದಿನಲ್ಲಿ ಗಣಿತ ಮಾಸ್ತರರೊಬ್ಬರ ಪರಿಚಯ ನನಗಿತ್ತು. ಅವರ ಸರಳ ಸ್ವಭಾವ, ನಗುಮುಖ, ಗಣಿತ

ಹೇಳುವ ಆಕರ್ಷಕ ರೀತಿಗಳಿಂದ ವಿದ್ಯಾರ್ಥಿಗಳು ಮಂತ್ರ ಮುಗ್ಧರಾಗುತ್ತಿದ್ದರು. ಗಂಟೆಬಾರಿಸಿದರೆ ಆ ಗಂಟೆ ಬಾರಿಸಿದವನನ್ನು ದೂರುವಷ್ಟು ದೀರ್ಘಕ್ಕೂ ವಿದ್ಯಾರ್ಥಿಗಳು ಹೋಗುತ್ತಿದ್ದರು. ಈ ಮಾಸ್ತರರ ಹೆಸರು ಇವಾನ್ ಇವಾನೋವಿಚ್ ಎಂದಿತ್ತು.

ಒಮ್ಮೆ ಇವರು ಬೇಸಿಗೆಯನ್ನು ಕಳೆಯಲು ಇಟಲಿಗೆ ಹೋಗಿದ್ದರು. ಅಲ್ಲಿ ಓರ್ವ ಸುಂದರ ಇಟಾಲಿಯನ್ ಯುವತಿಯ ಪ್ರೇಮ ಜಾಲಕ್ಕೆ ಬಿದ್ದು, ಅವಳನ್ನು ಲಗ್ನ ಮಾಡಿಕೊಂಡೇ ಹಿಂತಿರುಗಿದ್ದರು. ನವದಂಪತಿಗಳು ರಷ್ಯಾಕ್ಕೆ ಬಂದು ಸುಖವಾಗಿ ಸಂಸಾರ ಪ್ರಾರಂಭಿಸಿದರು.

ಇವಾನ್ ಇವಾನೋವಿಚ್ ಕೇವಲ ಸನ್ಯಾಸಿಯಾಗಿದ್ದು ಜಗತ್ತಿನಲ್ಲಿ ಶಾಲೆಯೊಂದೇ ಅವನ ಪಾಲಿಗೆ ಇದ್ದದ್ದೆಂದು ಭಾವಿಸಿದವನೇನೂ ಅಲ್ಲ. ಅವನು ಜನಾನುರಾಗಿ. ಗೆಳೆಯರು ಅವನಿಗೆ ಬೇಕು• ಉತ್ತಮ ಸಾಂಗತ್ಯದಲ್ಲಿ ವಿಹಾರ ಪಡೆದು ವಿನೋದವನ್ನು ಸವಿಯುವ ಪ್ರವೃತ್ತಿ ಅವನದಾಗಿತ್ತು. ಇವನ ಗೆಳೆಯರು ಎಲ್ಲ ವೃತ್ತಿಗಳಿಗ ಸೇರಿದವರೂ ಇದ್ದರು. ಪ್ರತಿ ಶನಿವಾರಕ್ಕೊಮ್ಮೆ ಅವರೆಲ್ಲರೂ ಇವಾನ್ ಇವಾನೋವಿಜ್‌ನ ಮನೆಯಲ್ಲಿ ಸೇರುತ್ತಿದ್ದರು. ಸಂಗೀತ ಮೇಳಗಳೂ ಈ ಸಮಯದಲ್ಲಿ ನಡೆಯುತ್ತಿತ್ತು. ಇವಾನ್‌ಗೆ ಪಿಟೀಲಿನ ಮೇಲೆ ಬಹಳ ಆಸ್ತೆ. ಅವನು ಚೆನ್ನಾಗಿಯೇ ಪಿಟೀಲ್ ನುಡಿಸುತ್ತಿದ್ದನು.

ವರ್ಷಕ್ಕೊಮ್ಮೆ ಇವಾನ್ ಮನೆಯಲ್ಲಿ ಒಂದು 'ಸಂಗೀತ ಮೇಳ' ವೇ ನಡೆಯುತ್ತಿತ್ತು. ಅಂದು ತನ್ನ ಆತ್ಮೀಯರಿಗೆಲ್ಲ ಒಂದು ಹಬ್ಬ. ಕೇವಲ ಶ್ರೋತ್ರಾನಂದ ವಷ್ಟೇ ಅಲ್ಲದೆ, ರಸದೌತಣದ ಲಾಭವೂ ಅವರಿಗೆ ದೊರೆಯುತ್ತಿತ್ತು. ಅಂದು ವಿಶಿಷ್ಟ ಪಕ್ವಾನ್ನಗಳು ತಯಾರಾಗುತ್ತಿದ್ದವು. ಎಲ್ಲರೂ ಈ ಮೇಳದಲ್ಲಿ ಆನಂದ ಪರವಶರಾಗುತ್ತಿದ್ದರು. ಪ್ರತಿ ಸಂಗೀತ ರಸ ಮೇಳಕ್ಕೂ ಇವಾನ್‌ನ ಸಹೋದರ ಸೆಮ್ಯಾನ್ ಇವಾನೋವಿಚ್ ಶಾಶ್ವತ ಆಮಂತ್ರಿತ. ಇವನು ಸುಂದರವದನನು; ಚಾಣಾಕ್ಷ ಇಂಜಿನಿಯರು ಕೂಡಾ. ಸೆಮ್ಯಾನ [illegible] ವಾ ಹಿತನೂ; ಕೂಡ. ಇವಾನ್ ಮತ್ತು ಸೆಮ್ಯಾನ್ ಬಹಳ ಆತ್ಮೀಯರು. ಅವರು ಉತ್ತಮ ಗೆಳೆಯರೂ ಕೂಡಾ ಆಗಿದ್ದರು.

ವಿವಾಹವಾದನಂತರ ಇವಾನ್ ಇವಾನೋವಿಜ್‌ನ ಜೀವನದಲ್ಲಿ ಹೆಚ್ಚು ಬದಲಾವಣೆ ಏನೂ ಕಾಣಲಿಲ್ಲ. ಇವನ ಅರ್ಧಾಂಗಿಯ ಆಗಮನದಿಂದ ಮನೆಗೆ ಲಕ್ಷ್ಮಿಯ ಶೋಭೆ ಬಂದಂತಾಗಿತ್ತು. ಮನೆಯಲ್ಲಿ ಉತ್ತಮ ಚಿತ್ರಗಳು ಸ್ಥಾನ ಪಡೆದವು. ಬಿಳಿಯತೆರೆಗಳು, ಹೂವಿನ ಹೂಜಗಳಲ್ಲಿ ಸುಗಂಧಪೂರಿತ ಪುಷ್ಪಗಳು ಮುಂತಾಗಿ ಮನೆಯು ಕಲಾತ್ಮಕವಾಗಿತ್ತು, ಇವಾನ್‌ನ ಹೆಂಡತಿಯು ಸರಳಪ್ರಿಯಳು, ಹಸನ್ಮುಖಿ, ಅನುರಾಗಿಣಿ. ಆಕೆ ಕೆಲವೇ ದಿನಗಳಲ್ಲಿ ರಷ್ಯನ್ ಭಾಷೆಯನ್ನು ಕಲಿತಳು. ಈಕೆ

ಯನ್ನು ಇವಾನ್ ಲಿಪಾಯೆಂದು ಕರೆಯು ತ್ತಿದ್ದನು. ಏಕೆಂದರೆ ಆಕೆಯ ಇಟಾಲಿಯನ್ ಹೆಸರಿನ ರಷ್ಯನ್ ರೂಪಾಂತರ ಇದಾಗಿತ್ತು.

ಇವಾನ್‌ನ ವಿವಾಹದ ನಂತರ ಇವನ ಸಹೋದರ ಸೆವ್ಯಾನ್ ಪ್ರತಿ ಸಂಜೆ ಇವರ ಮನೆಗೆ ಬರುತ್ತಿದ್ದ. ಸಹೋದರರ ಆತ್ಮೀಯತೆಯು ಇದಕ್ಕೆ ಕಾರಣವೆಂಬುದರಲ್ಲಿ ಯಾವ ಸಂದೇಹವೂ ಕಾಣಲಿಲ್ಲ. ಅಣ್ಣ-ತಮ್ಮ ಇಬ್ಬರೂ ಚೆಸ್ ಆಟದಲ್ಲಿ ಮಗ್ನರಾಗುತ್ತಿದ್ದರು. ಲಿಪಾ ಇದರಿಗೆ ಚಹಾ ಮಾಡಿ ಕೊಟ್ಟರೆ, ಅದನ್ನು ಸವಿದು ಆಟ ಮುಂದುವರಿಸುತ್ತಿದ್ದರು. ಅನೇಕ ಸಲ ತಾಸುಗಟ್ಟಲೆ ಹರಟೆಯಾಗುತ್ತಿತ್ತು. ಇವಾನ್ ತನ್ನ ವಾಸ್ತವಿಕ ಹಾಗೂ ಕಾಲ್ಪನಿಕ ಅನುಭವಗಳ ಕಥನವನ್ನು ಹೇಳಿದರೆ, ಅದಕ್ಕೆ ತನ್ನ ಪ್ರತಿಕಿಯೆ ನೀಡುತ್ತಾ ಸೆವ್ಯನ್ ಭಾಗವಹಿಸುತ್ತಿದ್ದನು. ಹರಟೆ ಊಟಗಳಾದ ನಂತರ ಸೆವ್ಯಾನ್ ತನ್ನ ಬಿಡಾರಕ್ಕೆ ತೆರಳುತ್ತಿದ್ದ. ಇವಾನ್ ವಿದ್ಯಾರ್ಥಿಗಳ 'ಗೃಹಕೆಲಸ' ದ ಪುಸ್ತಕಗಳನ್ನು ತಿದ್ದುತ್ತ ಕುಳಿತರೆ ಲಿಪಾ ತನ್ನ ಕಸೂತಿ ಕೆಲಸದಲ್ಲೋ, ಓದಿನಲೋ ತೊಡಗುತ್ತಿದ್ದಳು.

ಹೀಗೆ ಬಹಳ ವರ್ಷಗಳು ಉರುಳಿದವು. ಇವಾನ್, ಸೆವ್ಯಾನ್, ಲಿಪಾ ಇವರುಗಳಿಗೆ ವಯಸ್ಸಾಗ ತೊಡಗಿತು. ಆದರೆ ಲಿಪಾಳಲ್ಲಿ ಎಳೆತನದಲ್ಲಿದ್ದ ಸೌಂದರ್ಯದ ಛಾಯೆ ಇನ್ನೂ ಕಾಣುತ್ತಿತ್ತು. ಒಂದು ದಿನ ಚಳಿಗಾಲದಲ್ಲಿ ಇವಾನ್ ರೋಗಪೀಡಿತನಾದ, ಹಾಸಿಗೆ ಹಿಡಿದ, ಕೆಲವೇ ದಿನಗಳಲ್ಲಿ ಮರಣಹೊಂದಿದ.

ಇವಾನ್‌ನ ಅಂತ್ಯಯಾತ್ರೆಗೆ ಬಹಳ ಜನ ಗೆಳೆಯರು ಆಗಮಿಸಿ ತಮ್ಮ ಗೌರವಾದರಗಳನ್ನು ವ್ಯಕ್ತಪಡಿಸಿದರು. ಸೆವ್ಯಾನ್ ಅಂತ್ಯಕ್ರಿಯೆ ನೆರವೇರಿಸಿದ. ಲಿಪಾ ಬಹಳ ದುಃಖಿಯಾಗಿದ್ದಳು. ಅಶ್ರುಧಾರಿ ಹರಿದು ಅವಳ ಮುಖ ಬಿಳುಪೇರಿತ್ತು; ಆದರೂ ಆಕೆ ಎಷ್ಟೋ ಸಮಾಧಾನದಿಂದಲೇ ವಿರಹವೇದನೆಯನ್ನು ಅನುಭವಿಸಿದಳು.

ಕೆಲದಿನಗಳು ಕಳೆದವು. ಒಂದು ದಿನ ಸಂಜೆ ಸೆವ್ಯಾನ್ ವಿಧವೆ ಲಿಪಾಳನ್ನುಸಂದರ್ಶಿಸಲು ಬಂದನು. ತನ್ನ ವಾಡಿಕೆಯ ಸ್ಥಳದಲ್ಲಿ ಕುಳಿತು, ಸಿಗಾರೇಟ್ ಹಚ್ಚಿ ಚಿಂತಾಮಗ್ನನಾಗಿ ಬಹಳ ಹೊತ್ತು ಮೌನಧಾರೆಯಾಗಿದ್ದನು. ಲಿಪಾ ತನ್ನ ವಾಡಿಕೆ ಚಹಾ ತಯಾರುಮಾಡುತ್ತಿದ್ದಳು. ಇದ್ದಕ್ಕಿದ್ದಂತೆ ಸೆವ್ಯನ್ ಲಿಪಾಳನ್ನು ಎವೆ ಇಕ್ಕದೆ ನೋಡುತ್ತಾ, " ಲಿಪಾ, ನಾನು ಏತಕ್ಕೆ ವಿವಾಹವೇ ಮಾಡಿಕೊಳ್ಳಲಿಲ್ಲ, ಗೊತ್ತೇ? ಎಂದ. 'ಇಲ್ಲ,....ಏತಕ್ಕಾಗಿ?' ಎಂದು ಲಿಪಾ ಪ್ರಶ್ನಿಸಿದಳು.

'ನಿನ್ನನ್ನು ನೋಡಿದಂದಿನಿಂದ ನಾನು ನಿನ್ನನ್ನು ಪ್ರೀತಿಸುತ್ತಿದ್ದೆ' ಎಂದ ಸೆವ್ಯನ್.

ಲಿಪಾ ಚಕಿತಗೊಂಡಳು. ಆಕೆಯ ಅರಿವಿಲ್ಲದೆಯೇ 'ನಾನೂ ನಿನ್ನನ್ನು ಪ್ರೀತಿಸಿದ್ದೆ ಎಂಬ ನುಡಿ ಹೊರಬಂತು.

• • •



## ಹೈಬ್ರೀಡ್ (ಮಿಶ್ರತಳಿ)

# ಗೋವಿನಜೋಳ

## ನನ್ನ ಅನುಭವ

ರೈತ

ಶ್ರೀ ಬಸಪ್ಪ ಯಲ್ಲಪ್ಪ ಬಾಚಗುಂಡಿ
(ಕರಡಿಗುಡ್ಡ)

[ಧಾರವಾಡದ ಉಚ್ಚ ತರಗತಿಯ ಗ್ರಾಮಸೇವಕ ತರಬೇತಿ ಕೇಂದ್ರದವರು ಮಿಶ್ರತಳಿ ಗೋವಿನ ಜೋಳ ರಾಷ್ಟ್ರೀಯ ಪ್ರಾತ್ಯಕ್ಷಿಕೆಯನ್ನು ಕರಡಿಗುಡ್ಡ ಗ್ರಾಮದಲ್ಲಿ ನಡೆಸಿದರು ಮಿಶ್ರತಳಿ ಗೋವಿನ ಜೋಳ ಬೆಳೆಯನ್ನು ಹೆಚ್ಚು ಜನಪ್ರಿಯಗೊಳಿಸಬೇಕೆಂದು ಯೋಜನೆಯನ್ನು ರೂಪಿಸಲಾಗಿತ್ತು. ೧೧೦ ದಿನಗಳಲ್ಲಿ ರೈತನು ಬೆಳೆಯನ್ನು ಪಡೆದನು. ಗೋವಿನ ಜೋಳದ ಫಸಲು ಎಕರೆಗೆ ೩೦ ಕ್ವಿಂಟಲ್ ದೊರೆತದ್ದು ಒಂದು ವೈಶಿಷ್ಟ್ಯವಾದರೆ, ಒಂದು ವರ್ಷದಲ್ಲಿ ಇಂತಹ ಕಡಿಮೆ ಅವಧಿಯ ಎರಡು ಬೆಳೆಗಳು ಬೆಳೆಯುವ ಸಾಧ್ಯತೆಯನ್ನು ಇದು ತೋರಿಸುತ್ತದೆ. ಈ ಪ್ರಯೋಗವನ್ನು ಯಶಸ್ವಿಯಾಗಿ ಮಾಡಿದ ರೈತ ಶ್ರೀ ಬಸಪ್ಪ ಎಲ್ಲಪ್ಪ ಬಾಚಗುಂಡಿಯವರ ಅನುಭವವನ್ನು ಈ ಲೇಖನದಲ್ಲಿ ಅವರದೇ ವಿಶಿಷ್ಟ ರೀತಿಯಲ್ಲಿ ಒದಗಿಸಲಾಗಿದೆ. ಈ ಹೊಸ ಪ್ರಯೋಗ ಮಾಡಿಸಿದ ತರಬೇತಿ ಕೇಂದ್ರದ ಪ್ರಿನ್ಸಿಪಾಲರು ಪ್ರಶಂಸಾರ್ಹರಾದಂತೆ, ಯಶಸ್ವೀ ಪ್ರಯೋಗ ಕರ್ತೃವಾದ ಶ್ರೀ ಬಸಪ್ಪನೂ ಪ್ರಸಂಶಾರ್ಹ.— ಸಂಪಾದಕ]

ಒಂದು ದಿನ ನಮ್ಮ ತೋಟದಲ್ಲಿ ಕುಳಿತಿದ್ದೆ. ಆಗ ಗ್ರಾಮ ಸೇವಕ ತರಬೇತಿ ಕೇಂದ್ರದ ಪ್ರಿನ್ಸಿಪಾಲರಾದ ಶ್ರೀ ಪಾಟೀಲರು ನನ್ನನ್ನು ಪಂಚಾಯತಿ ಆಫೀಸಿಗೆ ಕರೆಯಿಸಿದರು. ನನಗೆ ಹೈಬ್ರಿಡ್ ಗೋವಿನ ಜೋಳ ಬೆಳೆಸಲಿಕ್ಕೆ ಹೇಳಿದರು. ಬೀಜ ಗೊಬ್ಬರಗಳನ್ನು ಕೊಡುವದಲ್ಲದೆ ೨೦೦ ರೂಪಾಯಿ ಸಬ್ಸಿಡಿಯನ್ನೂ ಕೊಡುತ್ತೇವೆ ಅಂತಾ ಹೇಳಿದರು. ಎಕರೆಗೆ ೨೫ ಚೀಲ ಗೋವಿನ ಜೋಳ ಮೇಲೆ ೨೦೦ ರೂಪಾಯಿ ಅಂದಾಗ ನನಗೂ ಸ್ವಲ್ಪ ಆಶೆಯಾಯಿತು. ಗೋವಿನ ಜೋಳ ಬಿತ್ತಲು ಒಪ್ಪಿಕೊಂಡೆನು. ರಾಷ್ಟ್ರೀಯ ಮಂಡಳಿಯವರು ಒಂದು ಸ್ಥಳವನ್ನು ಅಳತೆಮಾಡಿ ಗುರುತಿಸಿಕೊಟ್ಟರು. ನಾನು ಆ ಒಂದು ಎಕರೆ ಹೊಲವನ್ನು ೧ ಸಲ ನೇಗಿಲ, ೨ ಸಲ ಡೋಣಿ, ೨ ಸಲ ಕಟಗಿ ರಂಟೆ ಹೊಡೆದು ೧ ಸಲ ಹರಗಿದೆ. ಮತ್ತೆ ಸಲಹೆಯ ಮೇರೆಗೆ ಒಮ್ಮೆ ನೇಗಿಲ ಹೊಡೆದು ಹರಗಿ ಡೋಣಿ ಹೊಡೆದೆ. ಆ ಮೇಲೆ ೮ ಚಕ್ಕಡಿ ದನದ ಗೊಬ್ಬರ ಒಂದು ಎಕರೆ ಹೊಲದ ತುಂಬೆಲ್ಲ ಸೂರಿಮಾಡಿದೆನು. ಇದಾದ ನಂತರ ಸಾಹೇಬರು ಭೂಮಿಯನ್ನು ಪರೀಕ್ಷಿಲಿಸಿ ಮರುದಿನವೇ ರಾಸಾಯನಿಕ ಗೊಬ್ಬರ ಮತ್ತು ರೇಜರಗಳನ್ನು ಕಳುಹಿಸಿದರು. ೨ ಫೂಟಿಗೆ ಒಂದರಂತೆ ಸಾಲು ಮಾಡಿದೆವು. ೨೦ ಫೂಟಿಗೆ ಒಂದರಂತೆ ನೀರು ಹರಿಯಲು ಕಾವಲಿ ಮಾಡಿದೆವು.

ಆದರ ಮರು ದಿವಸ ಬೀಜ ಬಿತ್ತುವ ಕೆಲಸ ಕೈ ಗೊಂಡೆವು. ೧೮ ಕೆ. ಜಿ. ಸೂಪರ್ ಫಾಸ್ ಫೇಟ್, ೨೦೦ ಕೆ.ಜಿ. ಅಮೋನಿಯಂ ಫಾಸ್ ಫೇಟ್ ಮತ್ತು ೯ ಕೆ. ಜಿ. ಪೊಟಾಷ್ ಈ ಮೂರು ಜಾತಿಯ ಗೊಬ್ಬರಗಳನ್ನು ಒಂದು ಗುಡಾರದಲ್ಲಿ ಸುರುವಿ ಸಲಕಿಯಿಂದ ಕಲಿಸಲಾಯಿತು. ಬೀಜ ಗೊಬ್ಬರಗಳನ್ನು ತೆಗೆದುಕೊಂಡು ೯ ಇಂಚು ಅಂತರ ಬರುವಂತೆ ಸ್ವಲ್ಪ ಸ್ವಲ್ಪ ಅಂತರ ಬರುವಂತೆ ಒಂದೊಂದು ಬೀಜ ಹಾಕಲಾಯಿತು. ಮರುದಿನ ಬಿತ್ತಿದ ಹೊಲಕ್ಕೆಲ್ಲ ನೀರನ್ನು ಬಿಟ್ಟೆವು. ೫-೬ ದಿನಗಳಲ್ಲಿ ಬೀಜಗಳು ಹುಟ್ಟಿದವು. ಒಂದು ತಿಂಗಳಿನಲ್ಲಿ ಗೇಣಿನಷ್ಟು ಎತ್ತರ ಬಂದವು ಆಗ ೨ ಸಲ ಎಡೆ ಹೊಡೆದು ಚೆನ್ನಾಗಿ ಕಳೆತೆಗೆದೆವು ನಂತರ ಸಸಿಗಳಿಗೆ ಹುಳಾ ಹತ್ತ ಬಾರದು ಅಂತಾ ಎಂಡ್ರೆನ್ ಎಣ್ಣೆಯನ್ನು ಹೊಡೆದವು. ನಂತರ ನಡುಪಟ್ಟಿಯಲ್ಲಿ ಗುದ್ದಲಿಯಿಂದ ಗರೆಮಾಡಿ ಆ ಗರೆಗಳಲ್ಲಿ ಗೊಬ್ಬರ ಹಾಕಿ ಮೇಲೆ ಮಣ್ಣು ಮುಚ್ಚಿದೆವು. ನಂತರ ಜೋಳಕ್ಕೆ ನೀರು ಬಿಟ್ಟೆವು. ದಿನದಿನಕ್ಕೆ ಜೋಳ ಕಪ್ಪು ಬಣ್ಣದಿಂದ ಒಳ್ಳೇ ಪುಷ್ಟವಾಗಿ ಬೆಳೆಯಲಿಕ್ಕೆ ಹತ್ತಿತು. ಬೆಳೆ ನೋಡಿ ನೋಡಿದ ಹಾಗೆ ನನಗೂ ಬಹಳ ಹುರುಪು ಬರಹತ್ತಿತು. ಈ ಬೆಳೆಯನ್ನು ಎಷ್ಟು ನೋಡಿದರೂ ಆನಂದ ಆಗುತ್ತಿತ್ತು. ೨-೨½ ಮೊಳ ಜೋಳ ಎತ್ತರ ಬೆಳೆದಾಗ ಜಿಟ್ಟೆಪುಡಿ ಹೊಡೆದು ನೀರನ್ನು ಬಿಟ್ಟೆ-

ನಂತರ ೨ ವಾರದ ನಂತರ ಮತ್ತೊಮ್ಮೆ ನೀರು ಬಿಟ್ಟೆ. ಹೀಗೆ ೪ ಸಲ ನೀರನ್ನು ಹಾಕಲಾಯಿತು ಸುಮಾರು ೪ – ೫ ಮೊಳದಷ್ಟು ಎತ್ತರ ಜೋಳ ಬೆಳೆದು ನಿಂತಿತು. ಒಂದೊಂದು ದಂಟಿನಲ್ಲಿ ನಾಲ್ಕಾರು ತೆನೆಗಳು. ಒಂದೊಂದು ತೆನೆ ೯ ಇಂಜಿನ ವರೆಗೂ ಉದ್ದವಾಗಿದ್ದವು. ಕೊಯ್ಲಿಯಾದ ನಂತರ ೩೦ ಚೀಲ ಗೋವಿನ ಜೋಳ ಬಂತು. ನಾನು ಅಂದಾಜು ೫೦೦ ರೂಪಾಯಿ ಖರ್ಚು ಮಾಡಿದೆ. ನನಗೆ ೨೫೦೦ ರೂಪಾಯಿ ಆದಾಯ ಬಂತು. ನಿಕ್ಕಿ ಲಾಭ ೨೦೦೦ ರೂಪಾಯಿ ದೊರೆಯಿತು. ಒಂದೇ ಎಕರೆಗೆ.

ಮೊದಲನೆ ಸಲ ನನ್ನನ್ನು ಹೈಬ್ರಿಡ್ ಗೋವಿನ ಜೋಳ ಬಿತ್ತಲಿಕ್ಕೆ ಹೇಳಿದಾಗ ನನಗೆ ಸಮ್ಮತಿಯಿರಲಿಲ್ಲ. ಇದರಲ್ಲಿ ನನಗ ನಂಬಿಕೆ ಇರಲಿಲ್ಲ. ಇವರೇನು ಹೇಳ್ತಾರೆ? ಇವನ್ಮಾತು ಕೇಳಿದ್ರೇ ಹೊಲ ಮನೆ ಮಾರಿ ಕೊಂಡು ಹೋಗೋ ಪ್ರಸಂಗ ಬಂದೀತು? ಮುಂಚಾಗಿ ತೋರಿತ್ತು. ಅವರು ನನ್ನನ್ನು ಪರಿವರ್ತಿಸಿ ಈ ಕೆಲಸ ಮಾಡಲು ಹಚ್ಚಿದರು. ಈಗ ನನಗೆ ಸುಧಾರಿಸಿದ ಪದ್ಧತಿಗಳಲ್ಲಿ ನಂಬಿಕೆ ಬಂದಿದೆ. ಎಲ್ಲ ರೈತರೂ ನನ್ನಂತೆ ಸುಧಾರಿಸಿದ ಪದ್ಧತಿಯಲ್ಲಿ ಶ್ರಮಪಟ್ಟು ಬೆಳೆ ಬೆಳೆಸಿದರೆ ಜನರಿಗೆ ಅನ್ನದ ಕೊರತೆ ಆಗಲಿಕ್ಕೇ ಸಾಧ್ಯವಿಲ್ಲ. ಎಲ್ಲ ರೈತರೂ ಶ್ರೀಮಂತರಾಗುತ್ತಾರೆ. ದೇಶವೂ ಶ್ರೀಮಂತವಾಗುತ್ತದೆ.

• • •

## ದೈವ ಹೀಗೂ ಉಂಟು

ಅಂದು ಸಂಜೆ ವಿಶೇಷ ಕಾರ್ಯಕ್ರಮವಿದ್ದದರಿಂದ ಬೈಸಿಕಲ್ಲಿನ ಮೇಲೆ ವೇಗವಾಗಿ ಹೋಗುತ್ತಿದ್ದೆ. ಸಿವ್ಹಿಲ್ ಹಾಸ್ಪಿಟಲ್ ಮುಂದೆ ಬಂದಾಗ, ಹಿಂದೆ ಓದಿದ ಸಂದರ್ಭ ನೆನಪಿಗೆ ಬಂದಿತು. ಆದರಲ್ಲಿ ಒಬ್ಬ ಸೈಕಲ್ ಸವಾರ ಹಾಸ್ಪಿಟಲ್ ಮುಂದೆಯೇ ಅದರ ಮೇಲಿಂದ ಬಿದ್ದು ಕೈ ಮುರಿದು ಕೊಂಡಿರುತ್ತಾನೆ. ಬದಿಗೆ ಹೊರಟವರು 'ಪರವಾ ಇಲ್ಲ ಆಸ್ಪತ್ರೆ ಹತ್ರಾನೆ ಕೈ ಮುರಿದು ಕೊಂಡಿದಿಯಾ. ತುಂಬಾ ಜಾಣ ಕಣಪ್ಪ ನೀನು' ಎಂದು ಅನ್ನುತ್ತಾರೆ. ಅದನ್ನೇ ನೆನೆಯುತ್ತ ಮುಂದ ಹೊರಟೆ. ಸೈಕಲ್ ವೇಗವನ್ನು ನಿಯಂತ್ರಿಸುವದನ್ನು ಮರೆತು ಬಿಟ್ಟೆ. ಸರಿ, ಎದುರಿಗೆ ಬಂದ ಎಮ್ಮೆಯ ಮೇಲೆ ಸೈಕಲ್ ಹಾಯಿಸಿ ಸಧ್ಯ ಹಾಸ್ಪಿಟಲ್‌ನಲ್ಲಿದ್ದೇನೆ.

— ಕುಮಾರ ಗುರು ಕುಮಾರ





**ಪರೀಕ್ಷೆಗೆ ಕೂಡಲು ವಿದ್ಯಾರ್ಥಿಗೆ ಅನುಮತಿ ಕೊಟ್ಟ ನಂತರ ಅದನ್ನು ವಾಪಸ್‌ಪಡೆಯುವ ಅಧಿಕಾರ ಉಪಕುಲಪತಿಗಳಿಗೆ ಇರುವುದಿಲ್ಲ.**

# ಮಧ್ಯಪ್ರದೇಶ ಹೈಕೋರ್ಟಿನ ಮಹತ್ವಪೂರ್ಣ ತೀರ್ಪು

“ಪರೀಕ್ಷೆಯ ಅಭ್ಯರ್ಥಿಯನ್ನು ಪರೀಕ್ಷೆಗೆ ಕೂಡಲು ಅವಕಾಶ ನೀಡಿದ ನಂತರ ಆ ಪರವಾನಿಗೆಯನ್ನು ವಾಪಸು ಪಡೆಯಲು ಆಗಲಿ, ಆ ಅಭ್ಯರ್ಥಿಯ ಫಲಿತಾಂಶವನ್ನು ತಡೆಹಿಡಿಯಲು ಆಗಲಿ ವಿಶ್ವವಿದ್ಯಾಲಯದ ಉಪಕುಲಪತಿಗಳಿಗೆ ಅಧಿಕಾರವಿಲ್ಲ.” ಎಂಬ ಮಹತ್ವಪೂರ್ಣ ತೀರ್ಪನ್ನು ಮಧ್ಯಪ್ರದೇಶ್ ಹೈಕೋರ್ಟಿನ ಮುಖ್ಯ ನ್ಯಾಯಾಧೀಶ ಶ್ರೀ. ಪಿ. ವ್ಹಿ. ದೀಕ್ಷಿತ್ ಮತ್ತು ನ್ಯಾಯಮೂರ್ತಿ ಶ್ರೀ. ಆರ್. ಜಿ. ಭವೆ ಇವರುಗಳು ಇತ್ತಿದ್ದಾರೆ.

“ಸಾಗರ ವಿಶ್ವವಿದ್ಯಾಲಯ ಕಾಯ್ದೆಯ ೧೯ ಮತ್ತು ೪೮ ಆರ್ಡಿನೆನ್ಸ್‌ಗಳನ್ವಯ ಅಭ್ಯರ್ಥಿಗೆ ಸಾಕಾಗಿದ್ದಷ್ಟು ಹಾಜರಿ ಇದೆಯೋ ಇಲ್ಲವೋ ಎಂಬುದರ ಬಗ್ಗ ಅಂತಿಮಪತ್ರವನ್ನು ಪರೀಕ್ಷಾ ಪ್ರವೇಶ ಅಧಿಕಾರ ಪತ್ರ ಕೊಡುವ ಮೊದಲೇ ಕಾಲೇಜಿನ ಪ್ರಿನ್ಸಿಪಾಲರು ಕೊಡಬೇಕು. ಅದೂ ಅಲ್ಲದೆ ಹಾಜರೀ ಕೊರತೆ ಇದಲ್ಲಿ ಅದನ್ನು ಮನ್ನಿಸಲು ಉಪಕುಲಪತಿಗಳಿಗೆ ಮನವಿ ಮಾಡಿಕೊಳ್ಳುವದಿದ್ದರೆ ಅದು ಪರೀಕ್ಷಾ ಪ್ರವೇಶ ಅಧಿಕಾರ ಪತ್ರ (Admission Ticket) ಕೊಡುವ ಮೊದಲೀ ಮಾಡಬೇಕು. ಆದರೆ ‘ಪರೀಕ್ಷಾ ಪ್ರವೇಶ ಅಧಿಕಾರ ಪತ್ರ’ ವನ್ನು ಕೊಟ್ಟ ಮೇಲೆ ಆರ್ಡಿನನ್ಸ್ ೧೯ ಅಥವಾ ೪೮ ಗಳನ್ವಯ ಉಪಕುಲಪತಿಗಳಿಗೆ ಈ ಪ್ರವೇಶಾಧಿಕಾರ ಪತ್ರವನ್ನು ಹಿಂತೆಗೆದು ಕೊಳ್ಳುವ ಅಧಿ

ಕಾರವಿಲ್ಲ." ಎಂದು ಈ ತೀರ್ಪಿನಲ್ಲಿದೆ.

ಶ್ರೀ. ಪ್ರೇಮ್‌ಜೀ ಭಾಯ್ ಗಣೇಶ್ ಭಾಯ್ ಕ್ಷತ್ರಿಯ ಎನ್ನುವವರು ರವಿ ಶಂಕರ್ ವಿಶ್ವ ವಿದ್ಯಾಲಯದ ಉಪಕುಲ ಪತಿಗಳ ವಿರುದ್ಧ ಮಧ್ಯ ಪ್ರದೇಶ್ ಹೈಕೋರ್ಟಿನಲ್ಲಿ ಹಾಕಿದ ಅರ್ಜಿಯ ವಿಚಾರಣೆ ನಡೆದು ಮೇಲಿನ ತೀರ್ಪು ಕೊಡಲಾಗಿದೆ. ಶ್ರೀ. ಪಿ. ಜಿ. ಕ್ಷತ್ರಿಯರ ವರು ಸಂವಿಧಾನದ ೨೨೬ ಹಾಗೂ ೨೨೭ ಕಲಮುಗಳನ್ವಯ ರವಿ ಶಂಕರ ವಿಶ್ವ ವಿದ್ಯಾಲಯದ ಉಪಕುಲಪತಿಗಳು ತಾವು ಎಪ್ರಿಲ್ ೧೯೬೫ ರಲ್ಲಿ ಅಂತಿಮ ಎಲ್ ಎಲ್. ಬಿ. ಪರೀಕ್ಷೆಗೆ ಕೂಡಲು ಕೊಟ್ಟ ತಾತ್ಪೂರ್ತಿಕ ಪ್ರವೇಶವನ್ನು ರದ್ದುಪಡಿಸಿದ ಆಜ್ಞೆಯನ್ನು ರದ್ದುಪಡಿಸಲು ಮಧ್ಯ ಪ್ರದೇಶ್ ಹೈಕೋರ್ಟನ್ನು ಕೇಳಿಕೊಂಡಿದ್ದರು. ವಿಶ್ವ ವಿದ್ಯಾಲಯವು ತಾವು ಕುಳಿತುಕೊಂಡಿದ್ದ ಈ ಪರೀಕ್ಷೆಯ ಫಲಿತಾಂಶವನ್ನು ತಡೆಹಿಡಿದಿದ್ದರಾದ್ದರಿಂದ ಈ ಫಲಿತಾಂಶವನ್ನು ಸಾರುವಂತೆ ವಿಶ್ವ ವಿದ್ಯಾಲಯಕ್ಕೆ ಅಜ್ಞೆ ನೀಡುವುದಾಗಿಯೂ ನ್ಯಾಯಾಲಯವನ್ನು ಅವರು ಬೇಡಿಕೊಂಡಿದ್ದರು.

ಶ್ರೀ ಪಿ. ಜಿ ಕ್ಷತ್ರಿಯರವರು ಜಂಜಗೀರ್ ಆರ್ಟ್ಸ್ ಮತ್ತು ಕಾಮರ್ಸ್ ಕಾಲೇಜಿನಲ್ಲಿ ಅಂತಿಮ ಎಲ್‌ಎಲ್. ಬಿ ವಿದ್ಯಾರ್ಥಿ. ಅಂತಿಮ ಕಾಯ್ದೆ ಪರೀಕ್ಷೆಗಳು ೧೫-೪-೧೯೬೫ ರಿಂದ ೨೯-೪-೬೫ ರ ವರೆಗೆ ನಡೆಯಿತು. ಶ್ರೀ ಕ್ಷತ್ರಿಯ ಪರೀಕ್ಷಾ ಅರ್ಜಿಯನ್ನು ತುಂಬಿದ್ದು ಅಲ್ಲದನ್ನು ಕಾಲೇಜಿನ ಪ್ರಿನ್ಸಿಪಾಲರ ಮೂಲಕ ವಿಶ್ವ ವಿದ್ಯಾಲಯಕ್ಕೆ ಕಳುಹಿಸಲಾಗಿತ್ತು. ಕಾಲೇಜಿನ ಪ್ರಿನ್ಸಿಪಾಲರು ಈ ಅಭ್ಯರ್ಥಿಯ 'ಪರೀಕ್ಷಾ ಪ್ರವೇಶಾಧಿಕಾರ ಪತ್ರವನ್ನು ವಿಶ್ವ ವಿದ್ಯಾಲಯದಿಂದ ಸ್ವೀಕರಿಸಿದ್ದರೆಂದೂ ಅದನ್ನು ೧೫-೪-೬೫ರ ವರೆಗೆ ತಮ್ಮಲ್ಲಿಯೇ ತಡೆಹಿಡಿದಿದ್ದರೆಂದು ತೋರುತ್ತದೆ. ಇದಕ್ಕೆ ಕಾರಣ ಪ್ರಿನ್ಸಿಪಾಲರದೃಷ್ಟಿಯಲ್ಲ ಈ ವಿದ್ಯಾರ್ಥಿಯ ಪ್ರವೇಶಾರ್ಹತೆಗೆ ಬೇಕಾದಷ್ಟು ತರಗತಿಗಳಿಗೆ ಹಾಜರಿರಲಿಲ್ಲವೆಂದು. ಆದರೆ ಅಭ್ಯರ್ಥಿಯ ವಿನಂತಿಯ ಮೇರೆಗೆ ಪ್ರಿನ್ಸಿಪಾಲರು ಆ ಪ್ರವೇಶ ಅಧಿಕಾರ ಪತ್ರದ ಮೇಲೆ, 'ತಾತ್ಪೂರ್ತಿಕ ಪ್ರವೇಶ' ಎಂದು ಒರೆದು ಅವನನ್ನು ಪರೀಕ್ಷೆಗೆ ಕೂಡಲು ಅನುಮತಿ ನೀಡಿದರು. ಅದರ ಇದೇ ಸಮಯದಲ್ಲಿ ಅಭ್ಯರ್ಥಿಯಿಂದ ಒಂದು ಕರಾರು ಮಾಡಿಕೊಂಡರು. ಅದು ತಾನು ವಿಶ್ವ ವಿದ್ಯಾಲಯದ ಉಪಕುಲಪತಿಗಳಿಂದ ಹಾಜರೀಕೊರತೆಯನ್ನು ಮನ್ನಿಸುವ ಆಜ್ಞೆ ಪಡೆಯುವುದಾಗಿಯೂ ಹಾಗೆ ಹಾಜರೀಕೊರತೆಯನ್ನು ಉಪಕುಲಪತಿಗಳು ಮನ್ನಿಸದಿದ್ದರೆ ತಾನು ಪರೀಕ್ಷಾ ಫಲಿತಾಂಶದ ಘೋಷಣೆಯನ್ನು ಒತ್ತಾಯ ಮಾಡುವದಿಲ್ಲ ಎಂದಿದೆ.

ಪರೀಕ್ಷಾ ಪ್ರವೇಶ ಅಧಿಕಾರ ಪತ್ರ ಬಂದನಂತರ ಶ್ರೀ ಕ್ಷತ್ರಿಯ ಎಲ್ಲ ವಿಷಯಗಳಿಗೂ ಹಾಜರಾದರು. ಅದೇ

ಕಾಲಕ್ಕೆ ಹಾಜರಿಕೊರತೆಯನ್ನು ಮನ್ನಿಸಲು ಉಪಕುಲಪತಿಗಳಿಗೆ ಅರ್ಜಿಯೂ ಮಾಡಿಕೊಂಡನು. ಆದರೆ ಉಪಕುಲಪತಿಗಳು ೨೯-೫-೬೫ ರಂದು ಆಜ್ಞೆ ಹೊರಡಿಸಿ ಹಾಜರಿ ಕೊರತೆಯನ್ನು ಮನ್ನಿಸಲು ಮಾಡಿಕೊಂಡ ಅರ್ಜಿಯನ್ನು ತಿರಸ್ಕರಿಸಿದರು. ಇದೇ ಆಜ್ಞೆಯಲ್ಲಿ ಪ್ರಿನ್ಸಿಪಾಲರು ನೀಡಿದ ತಾತ್ಕಾಲಿಕ ಪ್ರವೇಶವನ್ನು ರದ್ದು ಪಡಿಸಲಾಗಿದೆ ಎಂದೂ ಸಾರಲಾಯಿತು. ಇದರಿಂದಾಗಿ ಶ್ರೀ ಕ್ಷತ್ರಿಯ ಫಲಿತಾಂಶವೂ ತಡೆಹಿಡಿಯಲಾಯಿತು.

ವಾದಿಯು ಕೋರ್ಟಿಗೆ ಮಾಡಿಕೊಂಡ ಅರ್ಜಿಯಲ್ಲಿ " ವಿಶ್ವ ವಿದ್ಯಾಲಯವು ಪ್ರವೇಶಾಧಿಕಾರಿ ಪತ್ರವನ್ನು ಕೊಟ್ಟಾಗಲೇ ಅಭ್ಯರ್ಥಿಯ ಹಾಜರಿಯ ಬಗ್ಗೆ ಪರೀಶೀಲಿಸಿಕೊಟ್ಟಿತೆಂದೂ, ಹಾಗೇನಾದರೂ ಕೊರತೆ ಇದ್ದಲ್ಲಿ ಅದನ್ನು ಉಪಕುಲಪತಿಗಳು ಮನ್ನಿಸಿದಂತೆಯೇ ಆಯಿತೆಂದು" ಹೇಳಲಾಯಿತು. "ಉಪಕುಲಪತಿಗಳಿಂದ ಕೊಡಲ್ಪಟ್ಟ ಪರೀಕ್ಷಾ ಪ್ರವೇಶಾಧಿಕಾರೀ ಪತ್ರವನ್ನು ಅಭ್ಯರ್ಥಿಗೆ ಕೊಡಲು ನಿರಾಕರಿಸುವ ಅಧಿಕಾರ ಪ್ರಿನ್ಸಿಪಾಲರಿಗೆ ಇಲ್ಲವೆಂದೂ ಪರೀಕ್ಷೆಗೆ ಕೂಡುವವಕಾಶ ತಪ್ಪುತ್ತದ್ದೆ ಎಂಬ ಸಂಕಟಕ್ಕೆ ತಾನು ಪ್ರಿನ್ಸಿಪಾಲರಿಗೆ ಕರಾರು ಬರೆದುಕೊಡಲು ಬೇಕಾಯಿತೆಂದೂ, ಪ್ರಿನ್ಸಿಪಾಲರಿಗೆ ಉಪಕುಲಪತಿಗಳು ಕೊಟ್ಟ ಪ್ರವೇಶಾ ಪತ್ರ ತಡೆಹಿಡಿಯುವ ಅಧಿಕಾರವೇ ಇಲ್ಲವಾದ್ದರಿಂದ ತಾನು ಬರೆದುಕೊಟ್ಟ ಕರಾರನ್ನು ತನ್ನ ವಿರೋಧವೇ ಉಪಯೋಗಿಸಲು ಬರುವುದಿಲ್ಲವೆಂದೂ ಹೇಳಲಾಯಿತು.

ಉಪಕುಲಪತಿಗಳು ತಮ್ಮ ವಾದವನ್ನು ಪ್ರತಿಪಾದಿಸುತಸ್ತಾ ೧೯೬೪-೬೫ ರಲ್ಲಿ ಹಾಜರೀಕೊರತೆಗಾಗಿ ಶೇಖಡ ೫೦ ಕ್ಕೂ ಮಿಕ್ಕ ವಿದ್ಯಾರ್ಥಿಗಳಿಗೆ ಪರೀಕ್ಷೆಗೆ ಕೂಡುವ ಅವಕಾಶವೇ ಇಲ್ಲದೆ ಹೋಗುವಂತಿತ್ತು. ಇದನ್ನು ನಿವಾರಿಸಲು ತಾವು ೩-೩-೬೫ ರಂದು ಪ್ರಿನ್ಸಿಪಾಲರ ಸಭೆ ಸೇರಿಸಿ ಯಾವ ವಿದ್ಯಾರ್ಥಿಗೆ ೫೦ ರಿಂದ ೬೫ ರಷ್ಟು ಶೇಖಡ ಹಾಜರಿ ಇದೆಯೋ ಅವರಿಗೆ ಪ್ರಿನ್ಸಿಪಾಲರ ಸಿಫಾರಸಿನ ಮೇಲೆ ಪ್ರವೇಶನೀಡಬೇಕೆಂದೂ, ಶೇಖಡ ೫೦ ಕ್ಕೂ ಕಡಿಮೆ ಹಾಜರಿ ಇದ್ದವರು ಪ್ರಿನ್ಸಿಪಾಲರ ವಿಶೇಷ ಸಿಫಾರಸಿನಮೇಲೆ ಉಪಕುಲ ಪತಿಗಳು ಮನ್ನಿಸಬೇಕೆಂದು ನಿರ್ಧರಿಸಲಾಯಿತು. ಈ ಗೊತ್ತುವಳಿಯನ್ನು ४-३-೬೫ ರಂದು ಎಲ್ಲ ಪ್ರಿನ್ಸಿಪಾಲರಿಗೂ ತಿಳಿಸಲಾಗಿದೆ. ಎಂದು ಹೇಳಲಾಯಿತು. ಇದರಂತೆ ಮೊದಲನೆ ವರ್ಗಕ್ಕೆ ಸೇರಿದವರಿಗೆ ಪ್ರವೇಶ ಪತ್ರವನ್ನು ಪ್ರಿನ್ಸಿಪಾಲರೇ ಕೊಡಬೇಕೆಂದು, ಎರಡನೆಯ ವರ್ಗಕ್ಕೆ ಸೇರಿದ ಅಭ್ಯರ್ಥಿಗಳ ಪ್ರವೇಶಪತ್ರವನ್ನು ಉಪಕುಲಪತಿಗಳ ಪರವಾನಿಗೆ ಬಂದ ನಂತರ ಕೊಡಬೇಕೆಂದು ಹೇಳಲಾಗಿತ್ತು. ವಾದಿಯ ಕಾಲೇಜಿನ ಪ್ರಿನ್ಸಿಪಾಲರು ವಾದಿಗೆ ಹಾಜರಿಯು ಶೇಖಡ ೫೦ ಕ್ಕೂ ಕಡಿಮೆಯಿದುದ್ದರಿಂದ ಅವನನ್ನು

'ತಡೆಹಿಡಿದ ವಿದ್ಯಾರ್ಥಿ' ಎಂದು ಸರಿ ಗಣಿಸಿರುವಂತೆ ಹೇಳಲಾಯಿತು. ಈ ಸ್ಥಿತಿಯಲ್ಲಿ ವಾದಿಗೆ ಪ್ರಿನ್ಸಿಪಾಲರು ಕರಾರು ಮೇರೆಗೆ ಪ್ರವೇಶಾಧಿಕಾರಿಪತ್ರ ಕೊಟ್ಟಿದ್ದರಿಂದ ವಾದಿಯು ಈಗ ದೂರುವ ಅಧಿಕಾರ ಪಡೆದಿಲ್ಲವೆಂದು ಉಪಕುಲ ಪತಿಗಳ ಪರವಾಗಿ ಹೇಳಲಾಯಿತು.

ಸಾಗರ ವಿಶ್ವವಿದ್ಯಾಲಯದ ಕಾಯ್ದೆಯ ನ್ನು ರವಿಶಂಕರ ವಿಶ್ವವಿದ್ಯಾಲಯವು ಒಪ್ಪಿ ಕೊಂಡಿರುವುದರಿಂದ ನ್ಯಾಯಮೂರ್ತಿ ಗಳು ಈ ಕಾಯ್ದೆಯ ೧೯ ಹಾಗೂ ೪೮ ಆರ್ಡಿನೆನ್ಸುಗಳನ್ನು ಪರಿಶೀಲಿಸಿದರು. ಇವು ಗಳ ಮೇರೆಗೆ ಯಾವುದೇ ಅಭ್ಯರ್ಥಿಗೆ ಹಾಜರೀ ಇದೆಯೋ ಇಲ್ಲವೊ ಎಂಬ ಅಂಶವನ್ನು ಪರೀಕ್ಷಾ ಪ್ರವೇಶಾಧಿಕಾರ ಪತ್ರಕೊಡುವ ಮೊದಲೇ ಪರಿಶೀಲಿಸ ಬೇಕೆಂದಿದೆ ಎಂದೂ ಯಾವುದೇ ಅಭ್ಯರ್ಥಿಯನ್ನು ಪರೀಕ್ಷೆಗೆ ಕೂಡಲು ಅನುಮತಿ ಕೊಟ್ಟು ಪರಿಕ್ಷಾ ಪ್ರವೇಶಾಧಿ ಕಾರಿಪತ್ರ ಕೊಟ್ಟು ನಂತರ ಈ ಆರ್ಡಿ ನೆನ್ಸುಗಳ ಅನ್ವಯ ಆ ಪತ್ರವನ್ನು ವಾಪಸುಪಡೆಯುವ ಅಧಿಕಾರ ಉಪ ಕುಲಪತಿಗಳಿಗೆ ಇಲ್ಲವೆಂದೂ ತೀರ್ಪು ನೀಡಲಾಯಿತು. ಈ ಖಟ್ಲೆಯಲ್ಲಿ ವಾದಿಯ ನ್ನು ಪರೀಕ್ಷೆಗೆ ಕೂಡಲು ಅನುಮತಿ ಕೊಟ್ಟು ಅವನಿಗೆ ಪರೀಕ್ಷಾ ಪ್ರವೇಶಾಧಿ ಕಾರ ಪತ್ರ ಕೊಡಲಾಗಿತ್ತಾದ್ದರಿಂದ ನಂತ ರ ಅದನ್ನು ವಾಪಸು ಪಡೆಯುವ ಅಧಿಕಾರ ಉಪಕುಲಪತಿಗಳಿಗೆ ಯಿಲ್ಲವೆಂದು ತೀರ್ಪಿ ನಲ್ಲಿ ಹೇಳಲಾಗಿದೆ. ಆದ್ದರಿಂದ ಉಪಕುಲ ಪತಿಗಳು ವಾದಿಯ ಪರವಾನಿಗೆಯನ್ನು ವಾಪಸು ಪಡೆಯುವಾಗ ಕಾಯ್ದೆ ಬಾಹಿರ ಕೃತಿಯನ್ನು ಮಾಡಿದರಾದ್ದರಿಂದ ಅವರ ಪರವಾನಿಗೆ ವಾಪಸಾತಿ ಆಜ್ಞೆಯನ್ನು ರದ್ದು ಗೊಳಿಸಲಾಗಿದೆಯೊಂದೂ, ವಿಶ್ವವಿದ್ಯಾಲ ಯಕ್ಕೆ ವಾದಿಯ ಫಲಿತಾಂಶವನ್ನು ತಡೆ ಹಿಡಿಯುವ ಅಧಿಕಾರವಿಲ್ಲವೆಂದೂ, ಆಜ್ಞೆ ಮಾಡಲಾಗಿದೆ. ನ್ಯಾಯಮೂರ್ತಿಗಳು ವಾದಿಯ ಫಲಿತಾಂಶ ಸಾರುವಂತೆಯೂ ವಿಶ್ವವಿದ್ಯಾಲಯಕ್ಕೆ ಆಜ್ಞೆ ನೀಡಿದರು.

[ಎ. ಐ. ಆರ್. ೧೯೬೭—ಮಧ್ಯಪ್ರದೇಶ ೧೯೪—ಆಧಾರದಮೇಲೆ].

• • •

## ಕಾರಕೂನನ ಜಾಣ್ಮೆ

ಲೋಕೋಪಯೋಗಿ ಶಾಖೆಯಲ್ಲಿ ೪೦ ಪೀಪಾಯಿಗಳ ಬದಲು ಕೇವಲ ಇಪ್ಪತ್ತೇ ಇದ್ದವು. ಇಂಜನಿಯರರಿಗೆ ತೊಡಕೇ ಆಯಿತು — ಏಕೆಂದರೆ ಮರು ದಿನ ತಪಾಸಣಾಧಿ ಕಾರಿ ಬರುವವನಿದ್ದನು. ಆಗ ಕಾರಕೂನ ಹೇಳಿದ, "೨೦ ನ್ನು ಮಧ್ಯಕ್ಕೆ ಕತ್ತರಿಸಿ ನೆಲ ದಲ್ಲಿ ಹೂಳಿ ಬಿಡೋಣ; ಅವರಿಗೆ ನಲವತ್ತರ ಲೆಕ್ಕ ಸಿಕ್ಕೇ ಬಿಡುತ್ತದೆ."

# ನಾವು ಮತ್ತು ನಮ್ಮ ಮಕ್ಕಳು

[ಪ್ರಖ್ಯಾತ ಮನಶ್ಶಾಸ್ತ್ರಜ್ಞರಾದ ಶ್ರೀ ವಾಸುದೇವರಾವ್‌ರವರು 'ನಾವು ಮತ್ತು ನಮ್ಮ ಮಕ್ಕಳು' ಶೀರ್ಷಿಕೆಯಲ್ಲಿಯ ಎರಡನೆಯ ಲೇಖನದಲ್ಲಿ ಗರ್ಭಿಣಿಗೆ ಮನೆಯಲ್ಲಿ ಬೇಕಾದ ವಾತಾವರಣದ ಬಗ್ಗೆ ಮನಶ್ಶಾಸ್ತ್ರ ದೃಷ್ಟಿಯಿಂದ ಬಹಳ ಮನೋಜ್ಞವಾಗಿ ಚಿತ್ರಿಸಿದ್ದಾರೆ — ಸಂ].

ಹೆಣ್ಣು ಮಗಳು ಗರ್ಭಿಣಿಯಾದಳೆಂಬ ಸುದ್ದಿ ತಿಳಿದ ಕೆಲವು ದಿವಸಗಳಲ್ಲಿಯೇ ಆಕೆಯ ಪತಿಯ ಕಡೆಗೆ ಲಕ್ಷ್ಯ ಕೊಡುವುದನ್ನು ಕಮ್ಮಿ ಮಾಡುವುದು ಕೆಲವು ಸಂಸಾರಗಳಲ್ಲಿ ಕಂಡುಬರುವವು. ಮನೆ ಮಂದಿಯು ಗರ್ಭಿಣಿಯ ವಿಷಯದಲ್ಲಿ ಹೆಚ್ಚು ಶ್ರದ್ಧ ತೋರಿಸುವುದು ತಪ್ಪೇನಲ್ಲ. ಆಕೆಯ ಪೋಷಣೆ ಮತತ್ತು ಆರೈಕ ಎಲ್ಲರ ವಿಚಾರವೇನೋ ಸರಿ. ಆದರೆ ಆಕೆಯ ಪತಿಯ ವಿಷಯದಲ್ಲಿ ಉದಾಸೀನತೆಯನ್ನು ತೋರಿನುವುದು ಸೂಕ್ತವಲ್ಲ. ಗರ್ಭಿಣಿಯು ಸುಖಿಯಾಗಿ ಕಾಲಕಳೆಯುವಂತೆ ಮಾಡುವ ಕಾರ್ಯಕ್ರಮದಲ್ಲಿ ಆಕೆಯ ಪತಿಯೇ ಮುಖ್ಯ **ಚಾಲಕ**ನೆಂಬ ಅಂಶವನ್ನು ಯಾರೂ ಮರೆಯಬಾರದು. ಆಕೆಯಲ್ಲಿ ಉತ್ಪತ್ತಿಯಾಗುತ್ತಿರುವ ಉತ್ಸಾಹಕ್ಕೆ ಸರಿಯಾದ ರೂಪ ಕೊಡುವುದು ಆತನ ಕರ್ತವ್ಯ. ತನ್ನ ಗರ್ಭಕೋಶದಲ್ಲಿ ಬೆಳೆಯುತ್ತಿರುವ ಶಿಶುವಿನಲ್ಲಿ ಹೆಚ್ಚು ಆದರ ಆಸಕ್ತಿ ತೋರಿಸುತ್ತಿದ್ದರೂ, ಆಕೆಯಲ್ಲಿ ಉಂಟಾಗುತ್ತಿರುವ ಕ್ರಿಯೆ ಮತ್ತು ಪರಿವರ್ತನೆಯ ವರದಿಗಳಿಗೆ ಕಿವಿಗೊಟ್ಟುಕೇಳಿ ಉಚಿತವಾದ ಸಲಹೆಗಳನ್ನು ಕೊಡುವದು ಆತನ ಸಹಜಧರ್ಮವಾಗಿರುವುದು. ಆತನ ಒಲುಮೆ ಹೆಚ್ಚು ಪ್ರಮಾಣದಲ್ಲಿ ಆಕೆಗೆ ಅವಶ್ಯಕ.

ಗರ್ಭಿಣಿಯು ಹೇಗೆ ಶಿಶುವಿನ ಬೆಳವಣಿಗೆ ಮತ್ತು ಜನನ ವಿಷಯದಲ್ಲಿ ಸೂಕ್ತ ತಿಳವಳಿಕೆಯನ್ನು ಪಡೆಯುವದರಲ್ಲಿ ಆಸಕ್ತಿ ತೋರಿಸುತ್ತಾಳೋ, ಹಾಗೆಯೇ ಆಕೆಯ ಪತಿಯು ಇದಕ್ಕೆ ಸಂಭಂದಿಸಿದ ವಿಷಯಗಳನ್ನು ತಿಳಿಯಲು ಆತುರನಾಗಿರುವನು. ಈ ರೀತಿಯ ನವ ಉತ್ಸಾಹದಿಂದೊಡಗೂಡಿದ ಕ್ರಿಯೆಗೆ ಯಾರೂ ಅಡ್ಡಿ ಬರಬಾರದು.

## ದಬ್ಬಾಳಿಕೆ ಮತ್ತು ದೋರಣೆ ಚಲಾಯಿಸ ಬೇಡ

ಹಿರಿಯರು ಮತ್ತು ಅರಿತವರು ನೀಡುವ ಸಲಹೆಗಳಿಗೆ ಕಿವಿಗೊಟ್ಟು ಕೇಳಿ ಗರ್ಭಿಣಿಯೂ ಆಕೆಯ ಪತಿಯೂ ಇಬ್ಬರೂ ಸೇರಿ ಮುಖ್ಯವಾದ ನಿರ್ಧಾರಗಳಿಗೆ ಒಪ್ಪಿಗೆ ಕೊಡುವುದು ದಂಪತಿಗಳ ದೈಹಿಕ ಮತ್ತು ಮಾನಸಿಕ ಆರೋಗ್ಯ ಸ್ಥಿತಿಯನ್ನು ಸೂಚಿಸುವುದು. ಗರ್ಭಿಣಿಯಾದವಳ ಮೇಲೆ ದಬ್ಬಾಳಿಕೆ ಹಾಗೂ ದೋರಣೆಯನ್ನು ಚಲಾಯಿಸುವುದು ಮಾನಸಿಕ ಆರೋಗ್ಯಕ್ಕೆ ಧಕ್ಕೆ ತರಬಲ್ಲದು. ಆಕೆಯಲ್ಲಿಯ ಮನೋಭಾವನೆಗಳಿಗೆ ಮರ್ಯಾದೆ ಕೊಡುವುದು ಪತಿಯ ಕರ್ತವ್ಯ. ಆಕೆಯು ಗರ್ಭಿಣಿಯೆಂಬ ವಿಷಯವನ್ನು ಆತನು ಒಂದು ನಿಮಿಷವೂ ಮರೆಯ ಬಾರದು. ಹಿಂದೆ ಸೂಚಿಸಿದಂತೆ ಒಂದು ಮಹಾ ಕಾರ್ಯದಲ್ಲಿ ನಿರತಳಾಗಿರುಳು. ಇದನ್ನು ಸಾಂಗವಾಗಿ ನೆರವೇರಿಸಲು ಪತಿಯು ಸದಾ ಸಹಾಯಕನಾಗಿರಬೇಕು.

ಗರ್ಭಿಣಿಯು ಅತಿ ಸೂಕ್ಷ್ಮ ಸ್ಥಿತಿಯಲ್ಲಿರುವಳು. ಯಾರಾದರು ಆಕೆಯನ್ನು ಹಿಯ್ಯಾಳಿಸಿದರೆ ಆಕೆಗೆ ವ್ಯಸನವಾಗುವುದು. ಆತ್ಮೀಯರು ಆಕೆಯ ವಿಷಯದಲ್ಲಿ ಉದಾಸೀನ ತೋರಿದರೆ ಚಿಂತಿಸುವಳು. ದುಃಖವನ್ನು ತಡೆಯಲಾರದವಳು. ಕಣ್ಣೀರು ಬಿಡುವುದು ಉಂಟು. ಹೀಗೆಂದ ಮೇಲೆ ಆಕೆಯ ಪತಿಯು ಸಿಟ್ಟಾದರೆ, ರುಚಿಸದ ಮಾತನ್ನಾಡಿದರೆ, ಸಣ್ಣ ಸಣ್ಣ ಆಪೇಕ್ಷೆಗಳನ್ನು ತೃಪ್ತಿಪಡಿಸದಿದ್ದರೆ, ಆಕೆಯು ಭಗ್ನ ಮನಸ್ಕಳಾಗುವುದರಲ್ಲಿ ಸಂದೇಹವಿಲ್ಲ. ಆಕೆಯಲ್ಲಿ ಬೇಸರಿಕೆಯು ಹೆಚ್ಚಾಗುವುದು. ಇತರರು ಕೀಟಲೆ ಮಾಡಿದರೆ ಪತಿಯು ಆಕೆಗೆ ಸಮಾಧಾನ ತಂದು ಕೊಡಬೇಕು. ಸಂಬಂಧಿಗಳು ಆಗಾಗ್ಗೆ ಪರಿಹಾಸ್ಯ ಮಾಡುವುದು ಅನೇಕ ಸಂಸಾರಗಳಲ್ಲಿ ಕಂಡುಬರುವುದು. ಕೆಲವರು ಮನಸ್ಸಿಗೆ ನೋವನ್ನುಂಟು ಮಾಡುವಂಥ ಬೋಧ್ಯದ ಮಾತುಗಳನ್ನಾಡುವರು. ಇದರಿಂದ ಗರ್ಭಿಣಿಗೆ ವೇದನೆಯಾಗುವುದು. ತನ್ನ ಜಾಣತನವನ್ನುಪಯೋಗಿಸಿ ಆಕೆಯನ್ನು ಸಮಾಧಾನಕ್ಕೆ ತರುವುದು ಪತಿಯ ಜವಾಬ್ದಾರಿ.

## ನಿನ್ನ ವಿಶ್ವಾಸ ಗರ್ಭಿಣಿಗೆ ಹೆಚ್ಚಾಗಿ ಬೇಕು

ತಂದೆಯಾಗುವವನು ಮುಂದೆ ಜನಿಸುವ ಶಿಶುವಿಗೆ ತನ್ನ ಹೆಂಡತಿಯು ಏನು ಏರ್ಪಾಡು ಮಾಡುತ್ತಿರುವಳೋ ಅದಕ್ಕೆಲ್ಲಾ ನೆರವಾಗಬೇಕು. ಆಕೆಗೆ ಸಂತೋಷ ಉಂಟು ಮಾಡಲು ಹಲವಾರು ಆಸ್ಪದಗಳುಂಟು. ಇತರರ ಸಹಾಯವಿದ್ದರೂ ಗರ್ಭಿಣಿಗೆ ತನ್ನ ಪತಿಯ ಸಹಾಯವೇ ಹೆಚ್ಚಿನದಾಗಿರುವುದು. ಆಕೆಯಲ್ಲಿ ದಣಿವು ಕಮ್ಮಿ ಮಾಡುವುದೇ ಇದರ ಉದ್ದೇಶ. ಆಯಾಸವನ್ನುಂಟು ಮಾಡುವ ಕೆಲಸಗಳಿಗೆ ಆಕೆಯನ್ನು ಬಿಡದೆ ತಾನೇ ಮಾಡುವುದು; ಸಾಯಂಕಾಲ ಉದ್ಯಾನವನಕ್ಕೆ ಕರೆದು ಕೊಂಡು ಹೋಗಿ ರಮ್ಯವಾಗಿ ಕಾಲ ಕಳೆಯುವುದು;

ಚಲನ ಚಿತ್ರವನ್ನು ನೋಡಿ ಆನಂದಿಸುವುದು; ಸಂಗೀತ ಮತ್ತು ಇತರ ಕ್ರೀಡಾಸ್ಥಳಗಳಿಗೆ ಕೊಂಡೊಯ್ಯುವುದು; ಮತ್ತು ಸಣ್ಣ ಸಣ್ಣ ಮಕ್ಕಳು ಆಡುತ್ತಿರುವ ಆಟದ ಮೈದಾನಕ್ಕೆ ಹೋಗಿ ಬರುವುದು. ಹೀಗೆ ಮಾಡುವುದರಿಂದ ಆಕೆಗ ಉತ್ಸಾಹ ಉಂಟಾಗುತ್ತದೆ.

### ಗರ್ಭಿಣಿಯ ಇಚ್ಛೆಗೆ ಗಮನ ಕೊಡು

ಹೆಂಡತಿಯು ಗರ್ಭಿಣಿಯಾದರೆ ದಾಂಪತ್ಯ ಜೀವನವನ್ನು ಮುಂದು ವರಿಸಬಾರದೆಂದು ಹೇಳುವುದು ತಪ್ಪು ತಿಳವಳಿಕೆ. ಹೊಟ್ಟೆಯಲ್ಲಿ ಬೆಳೆಯುತ್ತಿರುವ ಶಿಶುವಿಗೆಯಾಗಲಿ ಅಥವಾ ಗರ್ಭಿಣಿಯಾದ ಹೆಂಡತಿಗೆ ಯಾಗಲಿ ಇದರಿಂದ ಯಾವ ಹಾನಿಯೂ ಆಗುವದಿಲ್ಲವೆಂಬುದು ಲೈಂಗಿಕ ಶಾಸ್ತ್ರ ಸಮ್ಮತವಾದ ವಿಷಯ. ಆದರೆ ಲೈಂಗಿಕ ವರ್ತನೆಗೆ ಗರ್ಭಿಣಿಯ ಇಚ್ಛೆಯಂತೆ ನಿರ್ಣಯಿಸುವುದು ಪತಿಯ ಧರ್ಮ.

ದಿವಸಗಳು ಉರುಳುತ್ತ ಬರಲು ತನ್ನಲ್ಲಿದ್ದ ಅಂದ ಚಂಗವು ಕುಂದುತ್ತಿರುವುದೆಂಬ ಭಾವನೆಯಿಂದ ಗರ್ಭಿಣಿಯು ಚಿಂತಿಸುವುದುವಾಡಿಕೆ. ಈ ಚಿಂತೆಯನ್ನು ಮಾಡದೆ ನೋಡಿಕೊಳ್ಳುವುದು ಪತಿಗೆ ಸೇರಿದುದು. ಆಕೆಯಲ್ಲಿ ಅಡಿಗಿಕೊಂಡಿದ್ದ ಅಂದ ಚಂದವು ಪ್ರಕಾಶಕ್ಕೆ ಬಂದಿದೆಯೆಂದು, ತನಗ ಆಹ್ಲಾದವನ್ನುಂಟು ಮಾಡುತ್ತಿವೆಯೆಂಬ ವಿಶ್ವಾಸಪೂರ್ಣವಾದ ಮಾತುಗಳಿಂದ ಆಕೆಯನ್ನುರಮಿಸಬೇಕು.

ಹೆರಿಗೆಯ ದಿವಸವು ಒಂದು ಮಹಾ ದಿನವೇಸರಿ ಸಾಧಾರಣವಾಗಿ ಈ ದಿನವನ್ನು ವೈದ್ಯರ ಸಹಾಯದಿಂದ ಮುಂದೆಯೇ ತಿಳಿಯ ಬಹುದು. ಪ್ರಸವಕಾಲ ಕೂಡಿ ಬರುವ ಸಮಯದಲ್ಲಿ ಪತಿಯ ಸಾನ್ನಿಧ್ಯವು ಸ್ತ್ರೀಗೆ ಉತ್ತೇಜನ ಕೊಡುವಂತಾಗಿರುವುದು. ಹೆರಿಗೆಯು ಮನೆಯಲ್ಲಿ ಆದರೂ ಇಲ್ಲದಿದ್ದರೆ ದವಾಖಾನೆಯಲ್ಲಿ ಆದರೂ ಸರಿ, ಪತ್ನಿಯು ಇಚ್ಛಿಸಿದರೆ ಪತಿಯು ಹತ್ತಿರದಲ್ಲಿಯೇ ಇರುವುದು ಧೈರ್ಯಕ್ಕೆ ಸಾಧನವು. ಶಿಶುವು ಜನಿಸಿದೊಡನೆ ಆತನಲ್ಲಿ ಉಂಟಾಗುವ ಸಂತೋಷವು ಪತ್ನಿಯಲ್ಲೂ ಪ್ರತಿಬಿಂಬಿಸುವುದು. ಗಂಡ ಹೆಂಡರಲ್ಲಿಯ **ಅನ್ಯೋನ್ಯ ಭಾವನೆಯು** ಶಿಶುವು ಗರ್ಭದಲ್ಲಿರುವಾಗಲೂ ಮತ್ತು ಜನಿಸಿದ ಮೇಲೂ ಮಹತ್ತರವಾದ ಪರಿಣಾಮವನ್ನು ಬೀರುವಂತದ್ದಾಗಿರುವುದೆಂಬ ಅಂಶವು ಅನುಭವ ಸಿದ್ಧವಾಗಿರುವುದು.

• • •

### ಚಂದಿರ—ವಿರಹಿ

ಚಂದಿರನ ತಂಬೆಳಕದೆಲ್ಲೆಡೆಯು ಪಸರಿಸಲು
ವಿರಹಿಗಳ ಎದೆಯುರಿಯು ಪಿರಿದಾದುದು

—ಇಂದುಹಾಸ

# "ಬಲಿಷ್ಠರಿಗೆ ಬಲಿಷ್ಠ"
# ನಮ್ಮ 'ದಾದಾ' ಪಾವಟೆ



"ನನ್ನನ್ನು ಬಲಿಷ್ಠ ಸೀಖರ ರಾಜ್ಯಕ್ಕೆ ರಾಜ್ಯಪಾಲನಾಗಿ ಆರಿಸಿದ್ದಾರೆ. ಅವರೊಡನೆ ಹೇಗೆ ಸಂಬಂಧ ಇರಿಸಿಕೊಳ್ಳಬೇಕೆಂಬುದು ಕಾದು ನೋಡಬೇಕು" ಎಂದು ಪಂಜಾಬದ ನಿಯೋಜಿತ ರಾಜ್ಯಪಾಲರಾದ ಪದ್ಮಭೂಷಣ ರ್‍ಯಾಂಗ್ಲರ್ ಡಿ. ಸಿ. ಪಾವಟೆಯವರು ತಮ್ಮ ಹೊಸ ಹುದ್ದೆಯ ಬಗ್ಗೆ ಹೇಳಿದಾಗ ನಮ್ಮ ಮಿತ್ರರೊಬ್ಬರು "ನೀವು ಬಲಿಷ್ಠರು. ನ್ಯಾಯನಿಷ್ಠುರರು. ನಿಮಗೆ ಎಲ್ಲಾ ಸರಿಹೊಂದುತ್ತದೆ" ಎಂದರು. ಇದನ್ನು ಕೇಳಿದವರೇ, ತಮ್ಮದೇ ಆದ ಪಾವಟೇರೀತಿಯಲ್ಲಿ ಅವರು ಜೋರಾಗಿ ನಕ್ಕು ಬಿಟ್ಟರು.

ಡಾ॥ ಪಾವಟೆಯವರು ಮಿತಭಾಷಿಗಳಾದರೂ ಮುಕ್ತಹೃದಯವುಳ್ಳವರು. ಅವರು ಬಹಳ ನಿಷ್ಠುರವಾದಿಗಳು. ಆದರೆ ಹೊಸಹುದ್ದೆ ಬಂದಮೇಲೆ ಪತ್ರಿಕಾ ಕರ್ತರಾರಿಗೂ ತಮ್ಮ ಹೊಸ ಹುದ್ದೆಯ ಬಗ್ಗೆಯ ತಮ್ಮ ಅಭಿಪ್ರಾಯಗಳು ಮುಂತಾದ ವಿಷಯಗಳನ್ನು ವ್ಯಕ್ತಪಡಿಸಿಲ್ಲ. ಪತ್ರಿಕಾ ಕರ್ತರಿಗೆ ಅವರ ಉತ್ತರ ಒಂದೇ "ನಾನು ಇಲ್ಲಿಂದ ಹೊರಡುವ ಮುನ್ನ ನಿಮಗೆ ಈ ಎಲ್ಲ ವಿಷಯಗಳ ಬಗ್ಗೆ ಹೇಳುತ್ತೇನೆ. ಈಗ ವಿಶ್ವವಿದ್ಯಾಲಯದ ಬಗ್ಗೆ ಬಹಳ ಕೆಲಸಗಳಿವೆ. ಕೆಲವು ಬರೆಯುವ ಕೆಲಸಗಳೂ ಇವೆ. ನಿಮಗೆ ಸೂಕ್ತ ವಿಚಾರಗಳನ್ನು ಕೊಡಲು ಕೆಲ ಸಮಯ ಹೋಗಲಿ ಎಂದು." ಇತ್ತೀಚೆಗೆ ಅವರೊಡನೆ ಕೆಲ ನಿಮಿಷಗಳು ಕಳೆದಾಗ ಅವರು ಬಹಳ ಮೋಜಿನಿಂದ "ಇಷ್ಟು ದಿನ ಸಾರ್ವಜನಿಕ ಭಾಷಣಗಳನ್ನು ಸಿಂತ ಸಿಟ್ಟಿನಲ್ಲಿ, ಪೂರ್ವತಯಾರಿಕೆ ಇಲ್ಲದೆ ಮಾಡುತ್ತಿದ್ದೆ. ರಾಜ್ಯಪಾಲನಾದ ಮೇಲೆ ಸಾರ್ವಜನಿಕ ಭಾಷಣಗಳು, ಪತ್ರಿಕಾ ಪ್ರಕಟನೆಗಳು ಎಲ್ಲವನ್ನು ತಯಾರು ಮಾಡಿಯೇ ಕೊಡಬೇಕಾಗುತ್ತದೆ. ಈ ರೀತಿಗೆ ನಾನು ತಯಾರಾಗಬೇಕು" ಎಂದು ಹೇಳಿದರು.

## ಕನ್ನಡಾಭಿಮಾನ

ರಾಜ್ಯಪಾಲರಾದ ಮೇಲೆ ತಮಗೆ ಸಿಗುವ ವಿರಾಮವನ್ನು ಕನ್ನಡ ಅಭ್ಯಾಸದ ವಿಸ್ತರಣೆಗೆ ವಿನಿಯೋಗಿಸುವ ಅಭಿಲಾಷೆಯನ್ನು ಅವರು ಹೊಂದಿರುವುದು ಪ್ರಶಂಸಾರ್ಹ. "ನಾನು ಮತ್ತೆ ಧಾರವಾಡಕ್ಕೆ ಬರುವುದರಲ್ಲಿ ಕನ್ನಡದಲ್ಲಿ ಉತ್ತಮ ಭಾಷಣ ಮಾಡುವಂತೆ ತಯಾರಾಗಿ ಬರುತ್ತೇನೆ" ಎಂಬ ಇವರ ನಿರ್ಧಾರದಲ್ಲಿ ಅಡಗಿರುವ ಕನ್ನಡಾಭಿಮಾನ ಶ್ಲಾಘನೀಯವಾದದ್ದು.

( ಪುಟ ೬೬ ಮೊದಲನೆ ಕಾಲಂ ನೋಡಿರಿ )



# "ಸೋಮಾರಿತನ ಹೋಗಬೇಕು"—

## ಶ್ರೀ ಎಂ. ಎಲ್. ಚಂದ್ರಶೇಖರ

"ನಮ್ಮ ರಾಷ್ಟ್ರ ಸೋಮಾರಿಗಳಿಲ್ಲದ ರಾಷ್ಟ್ರವಾದರೆ ನಾವು ಪ್ರಗತಿ ಪಥ ಹಿಡಿಯಲು ಸಾಧ್ಯ. ಇಲ್ಲವಾದರೆ ನಾವು ಕೇವಲ ಸಮಸ್ಯೆಗಳನ್ನು ಸಮೃದ್ಧಿಯಾಗಿ ಬೆಳೆಯುತ್ತ ಹೋಗುತ್ತೇವೆ."—ರಾಷ್ಟ್ರಪತಿ ಪೋಲೀಸ್ ಪದಕವನ್ನು ಈ ಸ್ವಾತಂತ್ರ್ಯ ದಿನೋತ್ಸವದಂದು ಪಡೆದ ಧಾರವಾಡ ಜಿಲ್ಲಾ ಪೋಲೀಸ ಸೂಪರೆಂಟಿಂಡೆಂಟರಾದ ಶ್ರೀ ಎಂ. ಎಲ್. ಚಂದ್ರಶೇಖರ್‌ರವರ ಖಚಿತ ಅಭಿಪ್ರಾಯ.

ನಿಜ. ಆದರೆ ಭಾರತದಲ್ಲಿ ನಾವು ಇಂದು ಭಾಷಣಗಳನ್ನು ಬೆಳೆದಷ್ಟು ಪ್ರಮಾಣದಲ್ಲಿ ಏನನ್ನೂ ಬೆಳೆಯುವುದಿಲ್ಲ. ಈ ವಾದಕ್ಕೆ ಅಪವಾದ ಶ್ರೀ ಚಂದ್ರಶೇಖರ್‌ರವರು. ಕೆಲ ವರ್ಷಗಳ ಹಿಂದೆ ಪಾಳು ಬಿದ್ದಿದ್ದ ಪೋಲೀಸ್ ಹೆಡ್‌ಕ್ವಾರ್ಟರ್ಸಿನ ನೆಲ ಇಂದು ಫಲವತ್ತಾಗಿದ್ದರೆ ಅದರ ಕೀರ್ತಿ ಇವರ ಪ್ರಭಾವೀ ನೇತೃತ್ವ, ಅಸಮಾನ ದೂರ-ದೃಷ್ಟಿ, ಅಚಲ ಕಾರ್ಯ ಪ್ರವೃತ್ತಿಗಳಿಗೆ ಸಲ್ಲುತ್ತದೆ. ಇಂದು ಪೋಲೀಸ್ ಮೈದಾನ ( ಪರೇಡ್ ಮಾಡಲು, ಆಟ ಆಡಲು ಬೇಕಾದ ಜಾಗೆ ಬಿಟ್ಟು) ದ ಪ್ರತಿ ಅಂಗುಲವೂ ಹಸಿರು ಹಸಿರಾಗಿ ರಾರಾಜಿಸುತ್ತಿದೆ. ಪೋಲೀಸರು ರೈತರಿಗಿಂತಾ ಚೆನ್ನಾಗಿ ಶ್ರಮಿಸುತ್ತಿದ್ದಾರೆ—ಸೇಂಗಾ, ಪಟಾಟ, ಜೋಳ, ಮೆಣಸಿನ ಕಾಯಿ ಮುಂತಾದ ಅನೇಕ ಬೆಳೆಗಳನ್ನು ಬೆಳೆಯುವುದರೊಡನೆ, ಪ್ರತಿಯೊಬ್ಬರೂ ತಮ್ಮ ತಮ್ಮ ಮನೆಗಳ ಮುಂದೆ ಒಂದೊಂದು ತೋಟ ಬೆಳೆಸಿದ್ದಾರೆ. ತಮಗೆ ಬೇಕಾದ ಕಾಯಿ-ಪಲ್ಲೆಯನ್ನು ತಾವೇ ಬೆಳೆಸಿಕೊಳ್ಳುತ್ತಾರೆ. ಇಂದು ಪೋಲೀಸ್ ಹೆಡ್‌ಕ್ವಾರ್ಟರ್ಸ ಕೇವಲ ಉದ್ಯಾನವಷ್ಟೇ ಅಲ್ಲ, 'ಉಪಯುಕ್ತ ವನ'ವಾಗಿ ಪರಿವರ್ತಿಸಲ್ಪಟ್ಟಿದೆ.

ಶ್ರೀ ಚಂದ್ರಶೇಖರ್‌ರವರ ಮನೆಯ ಸುತ್ತಲಿನ ಎಲ್ಲ ಭೂಮಿಯೂ ಸಾಗುವಳಿಯಾಗಿದೆ. ಇವರ ತೋಟಗಾರಿಕೆಯ ಕಲಾಪ್ರವೃತ್ತಿ ಅಪ್ರತಿಮವಾದದ್ದು. ಇವರು ಕೋಳಿಯನ್ನೂ ಸಾಕಿದ್ದಾರೆ. ತಮ್ಮ ತೋಟದ ಯಾವ ಯಾವ ಗಿಡ ಎಂದೆಂದು ಹಾಕಲ್ಪಟ್ಟಿದೆ ಎಂಬ ಮಾಹಿತಿ ಅವರ ತುದಿನಾಲಿಗೆಯಲ್ಲಿರುತ್ತದೆ. ಮಕ್ಕಳಂತೆ ಹೂವು-ಕಾಯಿ-ಪಲ್ಲೆ ಬೆಳೆಸುವುದರಲ್ಲಿ ಆಸಕ್ತಿ ಹೊಂದಿದ ಇವರ ರೀತಿ ಯಾರನ್ನಾದರೂ ಅಚ್ಚರಿಗೊಳಿಸೀತು.

( ಪುಟ ೬೬ ಎರಡನೇ ಕಾಲಂ ನೋಡಿರಿ )

(ಪುಟ ೬೪ ರಿಂದ)

ಕರ್ನಾಟಕ ವಿಶ್ವವಿದ್ಯಾಲಯದ ಶಿಲ್ಪಿ ಎಂಬ ಸಾರ್ಥಕನಾಮ ಪಡೆದ ಶ್ರೀ ದಾದಾ ಸಾಬ್ ಚಿಂತಾಮಣಿ ಪಾವಟೆಯವರು ಶಿಕ್ಷಣರಂಗದ ಉಚ್ಚಸ್ಥಾನದಿಂದ ರಾಜಕೀಯ ರಂಗದ ಉಚ್ಚ ಸ್ಥಾನಕ್ಕೆ ಏರಿದ್ದಾರೆ; ತಮ್ಮ ಸ್ವಯಂ ಪರಿಶ್ರಮದ ಮೂಲಕ. ಇವರ ಪಾಂಡಿತ್ಯವು ಪ್ರಾಮಾಣಿಕತೆಯ ಮೆರಗನ್ನು ಪಡೆದಿದೆ. ಇವರ ಮೇರು ಶಿಖರವನ್ನು ಈಗ ಏರುತ್ತಿದ್ದಾರೆ. ಇವರನ್ನು ಯಾವ ಜವಾಬ್ದಾರೀ ಸ್ಥಾನದಲ್ಲಿ ಕೂಡಿಸಿದರೂ ಆಸ್ಥಾನಕ್ಕೆ ಗೌರವ ತರುವಂತೆ ನಡೆದು ಕೊಳ್ಳುವ ಚಾಣಾಕ್ಷತನ, ಯೋಗ್ಯತೆ ಇವರಿಗಿದೆ. ಇವರನ್ನು ರಾಜ್ಯ ಪಾಲರಾಗಿ ನೇಮಿಸಿರುವುದು ಕನ್ನಡಿಗರಿಗೆ ಒಂದು ಅಭಿಮಾನದ ಸಂಗತಿ. ಕರ್ನಾಟಕದ ಪ್ರತಿಭೆ ಪಂಜಾಬದಲ್ಲೂ ಬೆಳಗಲಿ 'ದಾದಾ' ಪಾವಟೆಯವರು ಪಂಜಾಬದಲ್ಲಿಯೂ ಎಲ್ಲರ 'ದಾದಾ' ಆಗಿ ಅಚ್ಚು ಮೆಚ್ಚಿನ ರಾಜ್ಯಪಾಲರೆಂಬ ಕೀರ್ತಿ ಪಡೆದು ಶತಾಯುಷಿಗಳಾಗಲಿ ಎಂದು ಹಾರೈಸೋಣ.

---

"ಕನ್ನಡವು ಕಾಲೇಜುಗಳಲ್ಲಿ ಶಿಕ್ಷಣ ಮಧ್ಯಮವಾಗಲು ಪೂರ್ವ ತಯಾರಿಕೆಯಂತೆ ಕನ್ನಡವು ಮೈಸೂರ ರಾಜ್ಯದ ಆಡಳಿತ ಭಾಷೆಯಾಗಿ ಘೋಷಿಸಲ್ಪಡಬೇಕು. ಇಲ್ಲದಿದ್ದಲ್ಲಿ ಕನ್ನಡ ಮಾಧ್ಯಮದ ಮೂಲಕ ಪದವೀಧರರಾದವರಿಗೆ ನೌಕರಿ ದೊರೆಯದೇ ಹೋದೀತು."

—ಡಾ. ಡಿ. ಸಿ. ಪಾವಟೆ

---

(ಪುಟ ೬೪ ರಿಂದ)

ಇವರು ಉತ್ತಮ ಕ್ರೀಡಾ ಪಟುಗಳೂ ಕೂಡ. ಈಗಲೂ ಇವರು ಟೆನ್ನಿಸ್ ಆಟ ಆಡುತ್ತಾರೆ. ಕ್ರಿಡಾರಂಗ ಕಂಡರೆ ಇವರಿಗೊಂದು ಹೊಸ ಉತ್ಸಾಹ. ಕ್ರೀಡಾ ಪಟುಗಳು ಯಾವಾಗಲೂ ಉತ್ತಮ ವ್ಯಕ್ತಿತ್ವ ಹೊಂದಿರುತ್ತಾರೆಂದು ಇವರ ಭಾವನೆ. ಇವರು ಕಾಲೇಜಿನಲ್ಲಿದ್ದಾಗ ಫುಟ್‌ಬಾಲ್, ಟೆನಿಸ್, ವ್ಹಾಲೀಬಾಲ್ ಆಡುತ್ತಿದ್ದರು.

ಮಂಡ್ಯಾ ಜಿಲ್ಲೆಯ ಪ್ರಖ್ಯಾತ ರಾಜಕೀಯ ನಾಯಕರಾದ ಶ್ರೀ ಎಂ. ಲಿಂಗೇಗೌಡರ ಕುಮಾರರಾದ ಶ್ರೀ ಚಂದ್ರಶೇಖರ್ ರವರು ೧೯೪೬ ರಲ್ಲಿ ಬೆಂಗಳೂರಿನ ಸೆಂಟ್ ಜೋಸೆಫ್ಸ್ ಕಾಲೇಜಿನಿಂದ ಬಿ. ಎ. ಪದವಿ ಪಡೆದು ಅಸಿಸ್ಟೆಂಟ್ ಸೂಪರಿಂಟೆಂಡೆಟ್ ಆಫ್ ಪೋಲೀಸ್ ಎಂದು ಪೋಲೀಸ್ ಇಲಾಖೆಯನ್ನು ಸೇರಿದರು. ನಂತರ ಸೂಪರೆಂಟೆಂಡೆಂಟ್‌ರೆಂದು ಬಡತಿ ಪಡೆದು ನಮ್ಮ ರಾಜ್ಯದ ಅನೇಕ ಜಿಲ್ಲೆಗಳ ಪೋಲೀಸ್ ಅಧಿಕಾರಿಗಳಾಗಿ ಸೇವೆಸಲ್ಲಿಸಿದ್ದಾರೆ. ಕಳೆದ ಎರಡು ವರ್ಷಗಳಿಂದ ಧಾರವಾಡ ಜಿಲ್ಲೆಯ ಪೋಲೀಸ್ ಅಧಿಕಾರಿಗಳಾಗಿದ್ದಾರೆ. ೧೯೪೭ ರಲ್ಲಿ ಸ್ವಾತಂತ್ರ್ಯ ಪದಕ ಕೊಟ್ಟು ಸರ್ಕಾರ ಇವರನ್ನು ಗೌರವಿಸಿತ್ತು. ೨೧ ವರ್ಷಗಳ ಉತ್ತಮ ನಿಷ್ಠಾವಂತ–ಪ್ರಾಮಾಣಿಕ ಸೇವೆಗೆ ೧೯೬೭ರಲ್ಲಿ ಇವರಿಗೆ ರಾಷ್ಟ್ರಪತಿಗಳ ಪೋಲೀಸ್ ಪದಕ ದೊರೆತಿರುವುದು ಪ್ರಶಂಸಾರ್ಹ. ಇವರಿಗೆ ದೊರೆತ ಈ ಪ್ರಶಸ್ತಿ 'ಪ್ರಾಮಾಣಿಕ ಅಧಿಕಾರಿಗೆ ದೊರೆತ ಗೌರವದ ಪ್ರತೀಕ' ಎನ್ನಬಹುದು.

---

# ಮರ್ಕಟರಾಯ

೧. "ಮನವೆಂಬ ಮರ್ಕಟವ
ತಡೆಯಲಾರೆನೊ ದೇವ"
ಎಂದು ಹಾಡಿದವರು

______

೨. ಮಾಂಸಾಹಾರಿ ಮರ್ಕಟ
ಜಾತಿಯ ಹೆಸರು

______

೩. "______" ಎಂಬ ಮರ್ಕಟ
ಪರದೇಶದಿಂದ ಬಂದು ಭಾರತೀಯ
ಸಿನೇಮಾ ರಂಗದಲ್ಲಿ ಭಾಗವಹಿಸಿತು.

೪. "ಮಂಗ ಮಾನವನ ಪೂರ್ವಜ"
ಎಂದು ______ ನಿರೂಪಿಸಿದನು.

೫. ವಾನರರು ಆಳಿದ ರಾಜ್ಯ ______

೬. ಸ್ವಾಮಿನಿಷ್ಠೆಯನ್ನು ಮಾನವನಿಗೆ
ಕಲಿಸಿದ ಮಂಗ ______

೭. ಮರ್ಕಟಗಳಲ್ಲಿ ಅತ್ಯಂತ ಜಾಣ ಜಾತಿ
ಎಂದು ______ ಹೆಸರಾಗಿವೆ.

೮. ಕೈಯೊಳಗೇತಕೆ!
ಬಾಯೊಳಗಿಟ್ಟರೆ

______

(ಉತ್ತರಗಳಿಗಾಗಿ ೮೪ನೆಯ ಪುಟ ನೋಡಿರಿ)

4



# ಗಣರಾಜ್ಯದ ಗಣಪತಿ

ಡಾ|| ವಾ. ದ. ಬೇಂದ್ರೆ
ಎಂ. ಎ., ಪಿಎಚ್. ಡಿ.

ಇದರಲ್ಲಿ ಬರುವವರು :

| | |
|---|---|
| ಶಾಮು | ರಾಧಾ |
| ಹನುಮಾ | ಸುಧಾ |
| ವೆಂಕಾ | ಸರಸ್ವತಿ |
| ಶೀನಾ | |

**ನಿವೇದಕ:** — ಭಾದ್ರಪದ ಶುದ್ಧ ಚತುರ್ಥಿ–ಗಣೇಶ ಚತುರ್ಥಿ. ಗಜಾನನೋತ್ಸವ ಒಂದು ಭಾರತೀಯ ಹಬ್ಬ. ಈ ದೇವರನ್ನು ಸ್ಮರಿಸದವರಾರು? ಪ್ರತಿ ಕಾರ್ಯಾರಂಭವು ಶ್ರೀ ಗಜಾನನ ಪ್ರಸನ್ನ ದಿಂದಲೇ ಆಗಬೇಕು. ಮಕ್ಕಳ ವಿದ್ಯಾಭ್ಯಾಸವೂ ಶ್ರೀ ಗಣೇಶಾಯ ನಮಃ, ಓಂನಮಃ ಸಿದ್ಧಂ ದಿಂದಲೇ ಪ್ರಾರಂಭವಾಗುತ್ತದೆ.

ಕರ್ನಾಟಕ ಮಹಾರಾಷ್ಟ್ರದಲ್ಲಿ ಶ್ರೀ ಗಜಾನನ ದೇವಾಲಯಗಳು, ಮೂರ್ತಿಗಳು ಸಾಕಷ್ಟಿವೆ. ಸಾಸಿವೆಕಾಳ ಗಣಪತಿ, ಕಡಲೆಕಾಳ ಗಣಪತಿ, ಗೂಳೂರ ಗಣೇಶ, ಗೋಕಾಕ, ಇಡಗುಂಜಿ, ಸೊಲ್ಲಾಪೂರ, ಬಾಗೇಹಳ್ಳಿ, ಶಶೀಗೋಳಿ, ಆಡಕನಹಳ್ಳಿ, ಜಾಗನಹಳ್ಳಿ ಹೀಗೆ ಹಳ್ಳಿ-ಹಳ್ಳಿಗೆ ಶ್ರೀಗಜಾನನ ಸ್ಥಾನಗಳುಂಟು ಕರ್ನಾಟಕದಲ್ಲಿ. ಇದರಂತೆಯೇ ಮಹಾರಾಷ್ಟ್ರದಲ್ಲಿಯೂ ಪುಣೆಯ ಸುತ್ತುಮುತ್ತು ಮೋರಗಾಂವ, ರಾಂಜಣಗಾಂವ, ಜುನ್ನರ ಇತ್ಯಾದಿ ಅಷ್ಟವಿನಾಯಕ ಸ್ಥಾನಗಳು ಇವೆ. ಇದಲ್ಲದೆ ನಲವತ್ತೆಂಟು, ಐವತ್ತಾರು ಮತ್ತು ನೂರಾಇಪ್ಪತ್ತು ಸ್ಥಾನಗಳಿವೆ ಎಂದೂ ಹೇಳುತ್ತಾರೆ.

ಗಣೇಶನು ಸಾಂಪ್ರದಾಯಿಕ ದೇವನಾಗಿ ಅಮೇರಿಕೆ ತುರ್ಕಸ್ಥಾನ, ತಿಬೇಟ, ಚೀನಾ, ಜಪಾನ, ಸಿಲೋನ, ಜಾವಾ, ಸುಮಾತ್ರಾ, ಬೋರ್ನಿಯೋ, ಬ್ರಹ್ಮದೇಶ, ಸಯಾಮ ಮೊದಲಾದ ದೇಶಗಳಿಗೆಲ್ಲಾ ಸುತ್ತಾಡಿದ್ದಾನೆ, ದಿಗ್ವಿಜಯವನ್ನು ಮಾಡಿದ್ದಾನೆ.]

[ ಮಂಗಲ ಮೂರ್ತಿ ಮೋರಯಾ. ಮೋರಯಾ, ಗಣಪತಿಬಪ್ಪಾ ಮೋರಯಾ ಮೋರಯಾ ಎಂಬ ಕೂಗು, ನಗು, ಚಪ್ಪಾಳೆ, ಗದ್ದಲ ]

**ವೆಂಕಾ** :— ಇಳಸರ್ಯಪ್ಪಾ ಗಣಪನ್ನ ಕೈ ಸೋತು ಹೋದವು, ಇಳಸರಿ.

**ಶಾಮು** :— ಡೊಳ್ಳು ಹೊಟ್ಟಿ, ಆನೀ ಮುಖಾ ಅಂತ ಬಾಯಿಗೆ ಬಂಧಾಂಗ ಆಡೀರಿ. ನಾಯಾಕ ಇಳೀಲಿ? ಹೊರ್ರಿ ನೋಡೋಣ ನಿಮ್ಮದೂ ಸೊಕ್ಕು ಭಾಳ ಆಗ್ಯದ.

**ಶೀನ**:— ಉಫ್, ಸಾಕು ಬಿಟ್ಬು ಬಿಡು ವಂಕ್ಯಾ ಬಿಟ್ಬುಬಿಡು. ನಾನಂತೂ ದಣದೆ.

**ಶಾಮು** :— ಹಂ, ಹ್ಯಾಂಗಾತು? ನಾ ಒಲ್ಲೆ ಅಂದರ ಜಗ್ಗಿತಂದು ಹೊರ್ತಿದ್ದರಿ. ನಾನೇ ಹೊಲ್ರೆ ಅಂತ ಕೈವ್ಯಾಲೆ ಬಂದು ಕೂತವ್ಯಾಲೆ ಹೊರ್ಲಿಕ್ಕೆ ಆಗ ಒಲ್ಲದು [ ಓಡಿದ ಸಪ್ಪಳ ] ಹಂ. ಹ್ಯಾಂಗೆ ಓಡಿದರಿ [ ನಗು ].

**ಶಾಮು** :— ಏ ಹನಮ್ಯಾ, ಅವರ ಜೋಡಿ ಹೋಗಬ್ಯಾಡಾ. ಬಾ ಇಲ್ಲೆ.

**ಶಾಮು** :— ಗಣಪತಿ ಗಣಪತಿ ಮೋರಯಾ ಪುಂಡೀಪಲ್ಲ್ಯಾ ಸೋರಯಾ ಅಂತ ಎಲ್ಲಾರ ಚಾಷ್ಟಿ ಮಾಡಕೋತ ಅಡ್ಡಾಡತಾರ ಅವರು. ನಿನ್ನೂ ಎಲ್ಲ್ಯಾರ ಎತ್ತಿ ಒಗದಾರು ನೀರಾಗ.

**ಹನುಮಾ** :— ನಾ ಅವರ ಜೋಡಿ ಹೊಂಟೇ ಇಲ್ಲಾ. ನಮ್ಮ ಗಣಪತಿ ತರಲಿಕ್ಕೆ ಹೋದಾವ್ರು. ಬಂದ್ರೇನು? ನೋಡ್ತಿದ್ದೆ.

**ಶಾಮು** :— [ಚೀರಾಟ, ಕುಣದಾಟದ ಧ್ವನಿ] ಗದ್ದಲಾ ಮಾಡಾವ್ರು ಹೊರಗ ಹೋಗ್ರಿ. ಹೊರಗ ಹಾಕೋ ಹನುಮಾ, ಆ ಬಾಗಲಾ ಬಂದ ಮಾಡು. ನಾ ಒಂದ ಕಥಿ ಹೇಳ್ತೇನಿ. ಕಥೀ ಕೇಳಾವ್ರು ಅಷ್ಟೇ ಒಳಗ ಕೂಡ್ರಿ ಗದ್ದಲಾ ಮಾಡಾವ್ರು ಹೊರಗ ಹೋಗ್ರಿ. [ ಬಾಗಿಲ ಮುಚ್ಚಿದ ಸಪ್ಪಳ ] ಹಂ, ಹೀಂಗ ಎಲ್ಲಾರು ಕೇಳ್ರಿ. ನಾನು ಗುರೂಜಿ ಮತ್ತ ನೀವು



ವಿದ್ಯಾರ್ಥಿ. ನಾ ಕೇಳಿದ ಪ್ರಶ್ನಿಗೆ ನೀವು ಉತ್ತರಾ ಕೊಡಬೇಕು. ಗಣಪ್ಪಗ ಸೊಂಡಿ ಯಾಕ ಬಂತು ? ಯಾರು ಹೇಳ್ತೀರಿ ?

**ಹನುಮಾ** :– ಗುರೂಜಿ ನೀನ ಅಲ್ಲಲ್ಲಾ ನೀವ ಹೇಳಬಿಡ್ರಿ.

**ಶಾಮು** :— ದಕ್ಷಾ ಯಜ್ಞಾ ಮಾಡಿದಾಗ ಎಲ್ಲಾ ರಾಜಾಧಿರಾಜರನ್ನ ಕರದಿದ್ದಾ. ಆದರೆ ಶಿವನ್ನ ಕರೀಲೇಇಲ್ಲಾ. ಆಗ ದಾಕ್ಷಾಯಣಿ ಹಟದಿಂದ ಯಜ್ಞ ನಡದಲ್ಲೆ ಹೋಗಿ, ಅಪಮಾನ ಆಗಿ, ಯಜ್ಞದಾಗ ಹಾರಿಕೊಂಡ್ಳು. ಇದು ನಿಮಗೊತ್ತ ಅದ ?

**ಎಲ್ಲರು** — ಹೌದ್ರಿ, ಹೌದ್ರಿ.

**ಶಾಮು** :—ಆಗ ವೀರಭದ್ರಾ ಯಜ್ಞಾ ನಾಶ ಮಾಡ್ಲಿಕ್ಕೆ ಹೋಗಿ ವಿನಾಯಕನ ರುಂಡಾ ಹಾರಿಸಿ ಬಿಟ್ಟಾ. ಈ ವಿಘ್ನ ರಾಜನ ರುಂಡ ಬಿದ್ದ ಸುದ್ದೀಕೇಳಿ ಬ್ರಹ್ಮಾದಿಗಳು ಶಿವನ್ನ ಮೊರೆ ಹೊಕ್ಕರು. ಉತ್ತರ ದಿಕ್ಕಿಗ ತಲೆಮಾಡಿ ಮಲಗಿರೋ ಡೋಕಾರಿ,ಅಹಂಕಾರಿ ಪ್ರಾಣೀ ತಲೀ ತರ್ರಿ ಅಂತ ಶಿವಾ ಅಪ್ಪಣೀ ಮಾಡಿದಾ. ಒಂದು ಮದ್ದಾನಿ ಉತ್ತರಕ್ಕೆ ತಲೀ ಮಾಡಿ ಮಲಗಿತ್ತು. ಅದರ ತಲೀ ತಂದು ಶಿವಗ ಒಪ್ಪಿಸಿದಾಗ ಶಿವಾ ಆದನ್ನ ವಿನಾಯಕಗ ಹಚ್ಚಿ ಓಂ ಅಂದಾ ವಿನಾಯಕ ಹೋಗಿ ಸೊಂಡೀ ಗಣಪ್ಪಾ ಆದಾ [ಚಪ್ಪಾಳೆ]

**ಶೀನ** :— ವಿನಾಯಕಂ ಪ್ರಕುರ್ವಾಣೋ ರಚಯಾಮಾಸ ವಾನರಂ.

**ರಾಧಾ** :— ಹೂಂನಿ, ಅದಕ್ಕ ಅಪ್ಪಾ ಅಂತಿದ್ರು ಉತ್ತರಕ್ಕ ತಲೀ ಮಾಡಿ ಮಲಕೋ ಬ್ಯಾಡನಿ, ಯಾರರಾ ಒಯ್ದಾರು ಅಂತ. ಈಗ ತಿಳೀತು.

**ವೆಂಕಾ** :— ನಾ ಕೇಳಿದ ಕಥಿ ಬ್ಯಾರೆ ಅದ ಹೇಳ್ಳೇನು ಶಾಮ್ಯಾ ?

**ಶಾಮು** :– ಏ, ಗುರೂಜಿ ಅನ್ನು. ಹೇಳು ನಿನ್ನ ಕಥಿ.

**ವೆಂಕಾ** :– ಆಗಲಿ, ಗುರೂಜಿ. ಕೇಳ್ರಿ ನನ್ನ ಕಥಿ ಹಿಂಗ ಅದ. ಒಮ್ಮೆ ಪಾರ್ವತಿ ಮೈ ತೊಳಕೋತಿದ್ದಳಂತ. ಆಗ ಬಚ್ಚಲಮನಿ ಬಾಗಲಾ ಕಾಯಕೋತ ಈ ಮಗಾ ಕೂತಿದ್ದಾ. ಅದ ವ್ಯಾಳ್ಯಾಕ್ಕ ಶಿವಾ ಬಚ್ಚಲ ಮನೀ ಕಡೆ ಹೊರಟಾ; ಮಗಾ ಅಪ್ಪಗ ಒಳಗೆ ಬಿಡಲಿಲ್ಲಾ. ಅಂದಕೂಡ್ಲೆ ಶಿವಾ ಅವನ ರುಂಡಾನ ಹಾರಿಸಿಬಿಟ್ಟಾ. ಆಮ್ಯಾಲೆ ಪಾರ್ವತಿ ಬೇಡಿಕೀ ಪ್ರಕಾರ ಶಿವಾ ಇಂದ್ರನ ಆನೀ ರುಂಡಾ ತಂದು ಗಣಪತೀಗ ಹಚ್ಚಿದಾ. ಹಿಂಗ ಅದ ನಮ್ಮ ಸೊಂಡೀಗಣಪ್ಪನಕಥಿ [ಭಲೆ, ಭಲೆ, ಚಪ್ಪಾಳೆ ]

**ಶಾಮು** :— ದೊಡ್ಡಾಟದಾಗ ಒಮ್ಮೆ ಗಣಪತಿ ನವಿಲಿನ ಮ್ಯಾಲೇರಿ ಬರ್ತಾನ ಆಗ.................

**ಹನುಮಾ** :— ಗಣಪತಿ ಸಿಂಹದ ಮ್ಯಾಲೆ ಕೂತದ್ದು ನಾನರೆ ನೋಡೇನಿ ಗುರೂಜಿ.

**ವೆಂಕಾ :—** ಗಣಪತಿ ಕುದರೀ ವ್ಯಾಲೆ ಕೂತದ್ದು ನಾತೋರಸ್ತೇನಿ.

**ಶೀನ :—** ಗಣಪತಿ ಗಾಂಧೀ ಟೋಪಿಗಿ ಹಾಕ್ಕೊಂಡು ಸಾಯಕಲ್ ವ್ಯಾಲೆ ಕೂತದ್ದು ಹೋದವರ್ಷ ನಾ ನೋಡೇನಿ.

**ಶಾಮು :—** ವೆಂಕಾ, ಶೀನಾ ನೀವು ಹೀಂಗ ಅಂಡ್ಡಡ್ಡ ಮಾತು ತಗೀಬ್ಯಾಡ್ರಿ.

**ವೆಂಕಾಶೀನ :—** ನಾವು ನೋಡಿದ್ದು ಸುಳ್ಳೇನ್ಲೇ? ಮತ್ತ ೩.........

**ಶಾಮು :—** ಲೇ ಗೀ ಅನಬ್ಯಾಡ್ರೋ

**ಹನುಮು :—** ಅಯ್ಯಾ ಎಂದರೆ ಸ್ವರ್ಗ, ಎಲವೊ ಎಂದೊಡೆ ನರಕಾ. ಅಲ್ಲೇನ್ರಿಗೂರೂಜಿ.

**ವೆಂಕಾಶೀನ :—** ಸಾಕ ಮಾಡ್ಲೇ ಹನಮ್ಯಾ, ಡೌಲು ಬ್ಯಾಡಾ. (ಗದ್ದಲ)

**ಶಾಮೂ :—** ಸುಮ್ಮನಾಗ್ರೋ ಸುಮ್ಮನಾಗ್ರಿ. ಹಂಗ ಖರೇ ನೋಡಿದ್ರ ಗಣಪತಿ ವಾಹನಾ ೩ ಇಲಿ

**ವೆಂಕಾ :—** ಗಣಪತಿ ವಾಹನಾ ಇಲೀನ ೩ ಯಾಕಪ್ಪಾ ಹನಮ್ಯಾ?

**ಹನುಮಾ :—** ನನಗೇನು ಕೇಳ್ತೀರೊ ಗುರೂಜಿ ಹೇಳ್ತಾರ ಕೇಳ್ರಿ

**ಶಾಮು :—** ಇಲೀ ಅಂದರ ಕಾಲ. ಇಲಿ ಹ್ಯಾಂಗ ಯಾವಾಗಲೂ ಕಾಳು ಕಡಿ ನಾಶ ಮಾಡ್ತದೊ ಹಾಂಗ ಕಾಲಾ ಕ್ಷಣ ಕ್ಷಣಕ್ಕೆ ಕಡೀತಾ ಇರ್ತದ. ಅಂಥಾ ಕಾಲನ್ನ ವಾಹನ ಮಾಡಿ ಕೊಂಡಾನ ೩ ಗಣಪತಿ. ಮಯೂರ ಗಣಪತಿ ಸಿಂಹ ಗಣಪತಿ, ಅಶ್ವ ಗಣಪತಿ, ನೃತ್ಯಗಣಪತಿ, ಅವೂ ಅವ೩ ಖರೇ.



**ವೆಂಕಾಶೀನ :—** ಹೀಂಗ೩ ಹಾದಿಗೆ ಬಾರೋ ಜಾಣಾ.

**ಶಾಮು :—** ದೊಡ್ಡಾಟದಾಗ ಗಣಪತಿ ಸ್ತುತಿಪದ್ಯ ಭಾಳ ೩ ಛಲೋ ಇರ್ತಾವ. ಯಾರಿಗಾದರೂ ಬರ್ತಿದ್ದ್ರ ಹೇಳ್ರಿ.

**ವೆಂಕಾ :—** ನಾ ಹೇಳ್ತೇನಿ ಕೇಳ್ರಿ :- ಗಣಪತಿ ಗಣರಾಜಾ! ಇಂದ್ರ ಸಭಾದಾಗ ಬಂದಾನ ಧುಂದಾಗಿ ಕುಣಕೊಂತ | ಕುಂತ ಮಂದಿ ತುಳಕೊಂತ ಧಿಮಿ ತಿಕಿ, ಧಿಮಿತಿಟ, ಬಂದಾನ ೩ ೩.

ಚಪ್ಪಾಳೆ, ನಗು, ಶಭಾಷಲೇ ವೆಂಕ್ಯಾ.

**ಶೀನ :—** ನಾನು ಒಂದು ಗಣಪತಿ ಕಥಿ ಹೇಳ್ತೇನಿ ಕೇಳ್ರಿ.

ಒಮ್ಮೆ ರಾವಣ ತನ್ನ ತಪಶ್ಚರ್ಯಾ ಮುಗಿಸಿ ಲಿಂಗಾ ಹಿಡಕೊಂಡು ತಿರುಗಿ ಲಂಕಾಕ್ಕ ಹೊರಟಿದ್ದಾ. ಹಾದಿಯೊಳಗೆ ಅವನ ಒಂದಕ್ಕ ಹೋಗ ಬೇಕಾತು. (ನಗುವ ಶಬ್ದ) ಲಿಂಗಾ ಕೆಳಗೆ ಇಡೋ ಹಾಂಗಿಲ್ಲಾ. ಅಷ್ಟರಾಗ ರಾವಣನ ಕಣ್ಣಿಗೆ ಗಣಪತಿ ಕಂಡಾ. ರಾವಣಾ ಗಣಪತಿನ್ನ ಕರದು ಲಿಂಗಾ ಅವನ ಕೈಯಾಗ ಕೊಟ್ಟು ಒಂದಕ್ಕೆ ಹೊರಟಾ ಆಗ ಗಣಪತಿ "ಲಿಂಗ ಭಾಳ ಭಾರ ಅದೆ, ಲಗೂ ಬರಬೇಕು

ಮೂರು ಸಲಾ ನಿನಗ ಒದರ್ತೇನಿ. ಬರದಿದ್ದರ ಲಿಂಗಾ ಕೆಳಗ ಇಟ್ಟ ಬಿಡಾಂವಾ ಅದ್ನಂತ. ಆಗ ರಾವಣಾ "ಹಂಗ ಮಾತ್ರ ಮಾಡ ಬ್ಯಾಡಪ್ಪಾ ಲಗೂ ಬರ್ತೇನಿ ಅಂತ ಹೇಳಿ ಹೋದ". ಗಣಪತಿ ಮೂರು ಸಲ ರಾವಣನನ್ನ ಕೂಗಿ ಲಿಂಗಾ ಕೆಳಗೆ ಇಟ್ಟುಬಿಟ್ಟಾ. ಆವ್ಯಾಲೆ ರಾವಣಾ ಬಂದು ಆ ಲಿಂಗಾ ಎತ್ತಿಕ್ಕೆ ಪ್ರಯತ್ನ ಮಾಡ್ಯೇ ಮಾಡಿದಾ, ಅದನ್ನ ಹಿಡದು ಜಗ್ಗೇ ಜಗ್ಗಿದಾ ಅದು ಬರಲೇ ಇಲ್ಲಾ. ಅದಕ್ಕs ಗೋಕರ್ಣದ ಲಿಂಗಕ್ಕ ಮುರಗಿ ಮುರಗಿ ಅವs ಅಂತ. ಹ್ಯಾಂಗ ಅದ ನಮ್ಮ ಕಥೀ?

**ರಾಧಾ :—** ಥೂ, ಶೀನನ ಕಥೀನs ಇಂಥಾವು. ಹೊಲಸು ಹೊಲಸು ಕಥಿ, [ನಗು, ಚಪ್ಪಾಳೆ, ಗದ್ದಲ].

**ಶಾಮು:—** ಹಾಸ್ಯಕ್ಕ ಹನುಮಂತಾ, ವಿದ್ಯಾಕ್ಕ ಗಣಪತಿ ಅಂತ ಹೇಳಿದರೂ ಗಣಪತಿ ಹಾಸ್ಯದ ದೇವತಾನೂ ಹೌದು. ಅವನ ಡೊಳ್ಳು ಹೊಟ್ಟೆ, ಡುಬರಿ ಡುಬರಿ ಗಂಡಸ್ಥಳ. ಸೊಂಡೀ ಮುಖ. ಅವನ ರೂಪಾನೋಡಿ ನಗೂನs ಬರ್ತsದ. ಹಾಂಗs ಶೀನನ ಕಥೀನೂ ಎಲ್ಲಾರನ್ನೂ ನಗಸ್ತದ. ಗಣಪ್ಪಗ ಮೋದಕಾ ಅಂದರ ಭಾಳ ಪ್ರೀತಿ. ಭಾಳಷ್ಟು ಮೋದಕಾ ತಿಂದು ಭಾರ ಆದ ಹೊಟ್ಟೀ ಇಂದಾ ಇಲೀ ಮ್ಯಾಲೆ ಕೂತು ಹೊರಟಿದ್ದಾ. ಒಮ್ಮಿಂದೊಮ್ಮೆ ತೂಕ ತಪ್ಪೀ, ಕೆಳಗೆ ಬಿದ್ದೂ ಹೊಟ್ಟೆ ಒಡದೂ, ಮೋದಕಾ ಹೊರಗ ಬೀಳೋವು ಇದ್ದವು, ಅಷ್ಟರಾಗ ಗಣಪತಿ ಅಲ್ಲೆ ಹೊರಟ ಹಾವು ಹಿಡಿದು ತನ್ನ ಹೊಟ್ಟೀ ಬಿಕ್ಕೊಂಡಾ (ನಗು, ಚಪ್ಪಾಳೆ).

**ಶಾಮು:—** ನೋಡ್ರಿ, ಹಿಂಗ ನಗೂ ಹುಟ್ಟಿಸೊ ಕಥಿ ಗಣಪತಿ ಬಗ್ಗೆ ಅವ.

**ವೆಂಕಾ :—** ಈ ಕಥೀ ಇಲ್ಲೇ ಮುಗೀಲಿಲ್ಲ. ಇನ್ನೂ ಅದ. ಗಣಪತಿ ಇಲೀ ಮ್ಯಾಲಿಂದ ನಡದದ್ದು ನೋಡಿ ಚಂದ್ರಾ ನಕ್ಕಾ. ಆಗ ಗಣಪತಿ ಚಂದ್ರಗ ಶಾಪ ಕೊಟ್ಟಾ ಅಂತ "ಚತುರ್ಥಿ ದಿವಸ ನಿನ್ನನ್ನ ಯಾರು ನೋಡ್ತಾರ ಅವರ ಮ್ಯಾಲೆ ಅಪವಾದ ತಪ್ಪಿದ್ದಲ್ಲಾ" ಅಂತ ಹೌದಲ್ರೀ ಗುರೂಜಿ.

**ಶಾಮು :—** ಹೌದು. ನಾ ಹೇಳ್ಲಿಕ್ಕೆ ಮರತು ಬಿಟ್ಟಿದ್ದೆ. ಸ್ಯಮಂತಕ ಮಣೀ ಕಥೀ ಅಂತ ಹೇಳ್ತಾರಲ್ಲಾ ಅದs ಇದು.

**ಶೀನ:—** ಹೋದ ವರ್ಷ ಹ್ಯಾಂಗಪ್ಪಾ ವೆಂಕ್ಯಾ? ನಾನು ನೀನು, ಚತುರ್ಥಿ ದಿನಾ ಚಂದ್ರನ್ನ ನೋಡಿ, ಆವ್ಯಾಲೆ ದೇಶಪಾಂಡೆಯವರ ಕಾಜಿನ ಖಿಡಕಿಗೆ ಕಲ್ಲು ಒಗದು, ಬೈಸಿಕೊಂಡು, ಹೊಡಿಸಿಕೊಂಡು ಹೋಗಿಲ್ಲೇ ನಿನ್ನs.

**ಹನುಮಾ :—** ಶೀನಗ ನಾಚಿಕೆ ಇಲ್ಲಾ ಅಂಬೋದು ಇದಕ್ಕs ನೋಡ್ರಿ. ಬರೇ ಇಂಥಾದ್ದ ಮಾಡ್ತಿ, ನೀವು. ಇವತ್ತ ಯಾರ ಮನೀಗೆ ಕಲ್ಲು?

**ವೆಂಕಾಶೀನ :—** ನಿಮ್ಮ ಮನೀಗೇs. ದೊಡ್ಡಿಸ್ತನಾ ಮಾಡಿ ಹೇಳ್ಲಿಕ್ಕೆ ಬಂದಾನ ಖರೇ ಕಥೀ ಹರಿಶ್ಚಂದ್ರರಾಯನ ಮೊಮ್ಮಗಾ. [ಗದ್ದಲ ಚೀರಾಟ].

**ಶಾಮು :—** ಏ ವೆಂಕಾ ಶೀನಾ ಸುಮ್ನ ಕೂಡ್ರೆಪ್ಪಾ,ನಿಮ್ಮ ಕಾಲ ಬೀಳ್ತೇನಿ ಬೀಳು ಅಂವರ. ಏನಾರೆ ಗದ್ಲಾ ಎಬಸ್ತೇರಿ ನೀವು.

**ಶೀನ:—** ನಿಮ್ಮ ಪಾರ್ಟೀ ಹನುಮು ನಾಯಕಗೆ ಹೇಳು ಸುಮ್ನ ಕೂಡ್ಲಿಕ್ಕೆ ಮತ್ತ ಮತ್ತ ನಮ್ಮ ವ್ಯಾಲೆ ಬರ್‍ತಾನ.

**ಶಾಮು:—** ಹನುಮು ನಾಯ್ಕಾ ಸುಮ್ನಾಗಪ್ಪಾ. ಈಗ ಹೆಣ್ಣ ಹುಡುಗರೊಳಗ ಅಲ್ಲ ಹುಡುಗಿಯರೊಳಗ ಯಾರರೇ ಗಣಪತಿ ಹಾಡು ಹಾಡು ಹೇಳ್ರಿ. ಹೇಳ್ತಿರೇನು?

[ ನಾ ಒಲ್ಲೆ, ನಾಒಲ್ಲೆ‌ಯವ್ವಾ, ನನಗಂತೂ ಧನೀನs ಇಲ್ಲಾ ಎಂಬ ಗದ್ದಲ ]

**ಸುಧಾ :—** ನಾ ಒಂದು ಹಾಡು ಹೇಳ್ತೇನಿ ಕೇಳ್ರೀ, ಪುರಂದರದಾಸರ ಪದಾ,

ವಂದಿಸುವದಾದಿಯಲಿ
ಗಣನಾಥನಾ ‖ ಪ ‖
ಸಂದೇಹ ಸಲ್ಲ ಶ್ರೀಹರಿಯಾಜ್ಞೆ
ಇದಕುಂಟು ‖ಅ.ಪ‖
ಹಿಂದೆ ರಾವಣ ತಾನು
ವಂದಿಸದೆ ಗಜಮುಖನ
ನಿಂದು ತಪವನು ಗೈದು
ವರ ಪಡೆಯಲು
ಒಂದು ನಿಮಿಷದಿ ಬಂದು
ವಿಘ್ನವನ್ನು ಆಚರಿಸಿ
ತಂದ ವರಗಳನೆಲ್ಲ
ಧರೆಗ ಇಳಿಸಿದನು ‖ ೧ ‖
ಅಂದಿನಾ ಬಗೆಯರಿತು
ಬಂದು ಹರ್ಮಿಧರ್ಮಜಗೆ
ಮುಂದೆ ಗಣಪನ
ಪೂಜಿಸೆಂದು ಪೇಳೆ
ಒಂದೆ ಮನದಲಿ ಬಂದು
ಪೂಜಿಸಲು ಗಣನಾಥ
ಹೊಂದಿಸಿದ ನಿರ್ವಿಘ್ನ
ದಿಂದ ರಾಜ್ಯವನು ‖ ೨ ‖
ಇಂದು ಜಗವೆಲ್ಲ
ಉಮೆನಂದನನ ಪೂಜಿಸಲು
ಚೆಂದದಿಂದಲಿ ಸಕಲ
ಸಿದ್ಧಿಗಳನಿತ್ತು
ತಂದೆ ಸಿರಿ ಪುರಂದರ
ವಿಠಲನ ಸೇವೆಯೊಳು
ಬಂದ ವಿಘ್ನವ
ಕಳೆದಾನಂದವನು ಕೊಡುವ ‖ ೩ ‖

**ಶಾಮು :—** ನೋಡ್ರಿ, ಶೀನ ಹೇಳಿದ ಕಥೀನs ಈ ಹಾಡಿನೊಳಗೂ ಅದ. ರಾವಣಾ ಗಣಪತಿ ಪೂಜಿ ಮಾಡದs ತಪಾ ಆಚರಿಸಿದ್ದಾ. ಆದ್ದರಿಂದ ರಾವಣ ಪಡದ ಲಿಂಗಾ ಗಣಪತಿ ಗೋಕರ್ಣದಾಗs ಇಡ್ಲಿಕ್ಕೆ ಹಚ್ಚಿದಾ. ಅದಕ್ಕs ಯಾವ ಕೆಲಸಕ್ಕೂ ಮೊದಲು ಗಣಪತಿ ಪೂಜೀಮಾಡಬೇಕು. ಅಂತ ಹೇಳ್ತಾರ.

**ಹನುಮು :—** ಯಾವದs ಪೂಜೀ ಹೇಳೋ ಕಾಲಕ್ಕ, ಅಡಕೆ ಬೆಟ್ಟಕ್ಕ ಗಣಪತಿ ಗಂತ ಪೂಜೀ ಮಾಡ್ತರಲ್ಲಾ ಗುರೂಜಿ ?

**ಶಾಮು :—** ಹೌದು. ಅದs ಹೇಳ್ಲಿಕ್ಕೆ ಹತ್ತೀನಿ ನಾನು. ಊಟಕ್ಕ ಉಪ್ಪಿನಕಾಯಿ ಹ್ಯಾಂಗೂ ಹಾಂಗ ಎಲ್ಲಾದಕ್ಕೂ

ಮೊದಲು ಗಣಪತಿ. ಗಣಪತಿ ಪೂಜಿ ಮಾಡಿದರ ಎಲ್ಲಾ ವಿಘ್ನ ದೂರ ಓಡಿ ಹೋಗ್ತಾವ. ಅಗಳೇ ವೆಂಕಾ ಶೀನಾ ಗದ್ದಲಾ ನಡಸಿದ್ದರು ನಾನು ಗಣಪತಿ ಮಾತು ನಡಸಿದಕೂಡ್ಲೇ ಹ್ಯಾಂಗ ಶಾಂತ ಕೂತ್ರು ನೋಡ್ರಿ, [ಸಾವಕಾಶ ಬ್ಯಾಂಡ, ಜಾಂಗಟಿ, ಸಪ್ಪಳ ಗಣಪತಿ ಗಣಪತಿ ಮೋರಯಾ, ಮಂಗಲಮೂರ್ತಿ ಮೋರ ಯಾ, ಮೋರಯಾ ಎಂಬಕೂಗು ದೂರ ದಿಂದ ಕೇಳಿ ಬರುತ್ತಿದೆ. ]

**ವೆಂಕಾಶೀನಾ**:— ನಡೀರ್ಲೇ, ನಡೀರಿ, ನಮ್ಮ ಗಣಪ್ಪ ಬಂದಾ ಕಾಣಸ್ತದ

[ ಎಲ್ಲರು ಹುಯ್ಯಿ ಎಂದು ಏಳುವ ಗಡಬಿಡಿ ]

**ಶೀನಾ** : ನೀ ಯಾಕ ಸೊಂಡೀ ಒಣಗಿಸಿ ನಿಂತ್ಯವ್ವಾ. ಪುಟ್ಟಸರಸೋತಿ.

**ರಾಧಾ** :— ಆಕೀನೂ ಹಾಡ ಹೇಳ್ತಾಳಂತ್ರಿ.

**ವೆಂಕಾ** :— ಹೇಳು ಹೇಳು ಲಗೂನ

**ಸರಸ್ವತಿ** :— ಗಣಪತಿ ಬಂದಾ

ತುಪ್ಪಾ ಕಡಬು ತಿಂದಾ

[ಕೂಗಾಟ, ಬ್ಯಾಂಡ, ಗಣಪತಿ ಗಣಪತಿ ಮೋರಯಾ, ಮಂಗಲ ಮೂರ್ತಿ ಮೋರ ಯಾ ಮೋರಯಾ ಎಂಬ ಶಬ್ದ ಹೆಚ್ಚಾಗು ವುದು].

**ವೆಂಕಾಶೀನಾ** :— ಹೌದು ನಮ್ಮ ಗಣಪ್ಪಾ, ನಡಿರ್ಲೇ ನಡೀರಿ ಮಂಗಲ ಮೂರ್ತಿ ಮೋರಯಾ, ಗಣಪತಿ ಬಪ್ಪಾ ಮೋರಯಾ

ಶರಣು ಶರಣು ವಿನಾಯಕ
ಶರಣು ವಿದ್ಯಾ ದಾಯಕ ॥ ಪ ॥
ಶರಣು ಪಾರ್ವತಿತನಯ ಮೂರುತಿ
ಶರಣು ಮೂಷಕ ವಾಹನ ॥ಅ.ಪ॥
ನಿಜಲನೇತ್ರನ ವರದ ಸುತನೆ
ನಾಗಯಜ್ಞೋಪವಿತನೆ
ಕಟಿಯ ಸೂತ್ರದ ಕೋಮಲಾಂಗನೆ
ಕರ್ಣ ಕುಂಡಲಧಾರನೆ ॥ ೧ ॥
ಬಟ್ಟಮುತ್ತಿನ ಪದಕ ಹಾರನೆ
ದಿವ್ಯಬಾಹು ಚತುಷ್ಕನೆ
ಇಟ್ಟ ತುಡುಗೆಯ ಹೇಮ ಕಂಕಣ
ಪಾಶ ಅಂಕುಶ ಧಾರನೆ ॥ ೨ ॥
ಕುಕ್ಷಿಮ ಹಲಂಭೋದರನೆ
ಇಕ್ಷು ಚಾಪನ ಗಲಿದನೆ
ಪಕ್ಷಿ ವಾಹನನಾದ ಪುರಂದರ
ವಿಟ್ಠಲನ ನಿಜದಾಸನೆ. ॥ ೩ ॥

—( ಆಕಾಶವಾಣಿ ಕೃಪೆಯಿಂದ )

[ ವಿ. ಸೂ. :— ಈ ನಾಟಕವನ್ನು ಅಭಿನಯಿಸ ಬಯಸುವವರು ಡಾ|| ವಾ. ದ. ಬೇಂದ್ರೆ, ಸಾಧನಕೇರಿ, ಧಾರವಾಡ, ಇವರ ಅನುಮತಿಯನ್ನು ಪಡೆದು ಮಾಡಬೇಕು.]

• • •

# ಶಿಕ್ಷಕ ದಿನಾಚರಣೆಯ ಮಹತ್ವ

ಪ್ರಿ|| ಸಿ. ಎಸ್. ಬೆನ್ನೂರ್

[ಪ್ರಿ|| ಬೆನ್ನೂರ್‌ರವರು ಕರ್ನಾಟಕ ವಿಶ್ವವಿದ್ಯಾಲಯದ ಶಿಕ್ಷಣ ವಿಭಾಗದ ಮುಖ್ಯಸ್ಥರು. ಇವರು ಈ ಲೇಖನದಲ್ಲಿ ಶಿಕ್ಷಕರ ದಿನಾಚರಣೆಯ ಮಹತ್ವವನ್ನು ವಿವೇಚಿಸಿದ್ದಾರೆ.—ಸಂ.]




ನಮ್ಮ ದೇಶದ ಭವ್ಯ ಭವಿಷ್ಯವನ್ನು ಕಟ್ಟುವ ಮಹಾಕಾರ್ಯದಲ್ಲಿ ತೊಡಗಿದ ಮಹಾಶಿಲ್ಪಿಗಳಾದ ಶಿಕ್ಷಕರ ನಿಃಸ್ವಾರ್ಥ ಸೇವೆಯನ್ನು ನೆನೆದು ಅವರಿಗೆ ನಮ್ಮ ಕೃತಜ್ಞತೆಗಳನ್ನು ಸಲ್ಲಿಸುವ ದಿನ, ಶಿಕ್ಷಕರ ದಿನ! ನಿಜವಾಗಿ ದೇಶದ ಹಿತದ ದೃಷ್ಟಿಯಿಂದಲೂ ಹಾಗು ಶಿಕ್ಷಣರಂಗದಲ್ಲಿ ನಿರತರಾದ ಶಿಕ್ಷಕರ ಹಿತದ ದೃಷ್ಟಿಯಿಂದಲೂ ಈ ದಿನ ಬಹು ಮಹತ್ವದ ದಿನವೆಂದು ಭಾವಿಸಬಹುದು.

ಈ ಶಿಕ್ಷಕ ದಿನಾಚರಣೆಯ ಸಂಪ್ರದಾಯವನ್ನು ಮೊದಲಿಗೆ ಹಾಕಿ ಕೊಟ್ಟವರು ಡಾ|| ರಾಧಾಕೃಷ್ಣನ್‌ರು. ಅವರು ರಾಷ್ಟ್ರಪತಿಗಳಾದ ಮೇಲೆ ತಮ್ಮ ಹುಟ್ಟು ಹಬ್ಬವನ್ನು ಆಚರಿಸಿ ತಮ್ಮ ವೈಯಕ್ತಿಕ ಘನತೆ ಗೌರವಗಳನ್ನು ಹೆಚ್ಚಿಸಿಕೊಳ್ಳಲು ಇಷ್ಟಪಡಲಿಲ್ಲ. ಆದರೆ ತಮ್ಮ ಜೀವನದ ಉಸಿರಾದ ಶಿಕ್ಷಕ ವೃತ್ತಿಯ ಘನತೆ-ಗೌರವಗಳನ್ನು ಹೆಚ್ಚಿಸಲು ಈ ದಿನಾಚರಣೆಯನ್ನು ಪ್ರಾರಂಭಿಸಿದರು. ಹೀಗಾಗಿ ಪ್ರತಿ ವರುಷ ನಮ್ಮ ದೇಶದಲ್ಲಿ ಸಪ್ಟೆಂಬರ ೫ನೇ ತಾರೀಖು "ಶಿಕ್ಷಕರ ದಿನ" ವೆಂದು ಆಚರಿಸಲ್ಪಡುತ್ತದೆ.

ಈ ದಿನವನ್ನು ಆಚರಿಸುವಲ್ಲಿ ಎರಡು ಘನವಾದ ಉದ್ದೇಶಗಳಿವೆ. ಮೊದಲನೆಯದೆಂದರೆ, ನಮ್ಮ ಇಂದಿನ ಸಮಾಜದಲ್ಲಿ ಶಿಕ್ಷಕರ ಘನತೆ ಗೌರವಗಳನ್ನು ಹೆಚ್ಚಿಸುವದು ಹಾಗು ಅವರ ಬಗೆಗೆ ನಮ್ಮ ಕರ್ತವ್ಯಗಳೇನು ಎಂಬುದರ ಅರಿವನ್ನುಂಟು ಮಾಡುವದು. ಇನ್ನು, ಎರಡನೆಯ ಉದ್ದೇಶವೆಂದರೆ, ಇಂದಿನ ಶಿಕ್ಷಕರಲ್ಲಿ ಅವರ ವೃತ್ತಿಯ ಭವ್ಯ ಹಾಗು ಉದಾತ್ತ ಕಲ್ಪನೆಯನ್ನು ಮನಗಾಣಿಸಿ ಆವರ ನಿಜವಾದ ಕರ್ತವ್ಯದ ಬಗೆಗೆ ಅರಿವನ್ನುಂಟು ಮಾಡುವದು. ಈ ಎರಡು ಘನ ಉದ್ದೇಶಗಳಿಂದ ಪ್ರೇರಿತರಾಗಿ ಡಾ||ರಾಧಾಕೃಷ್ಣನ್ ತಮ್ಮ ಹುಟ್ಟುದಿನವಾದ ಸಪ್ಟೆಂಬರ ೫ ನೆಯ ದಿನವನ್ನು "ಶಿಕ್ಷಕ ದಿನ" ವೆಂದು ಆಚರಿಸಲು ಪ್ರಾರಂಭಿಸಿದರು.

ಇಂದಿನ ನಮ್ಮ ಸಮಾಜದಲ್ಲಿ ಶಿಕ್ಷಕರ ಸ್ಥಾನ-ಮಾನಗಳನ್ನು ನೋಡಿದರೆ ತುಂಬಾ ವಿಷಾದವಾಗುತ್ತದೆ. ನಾವು ಶಿಕ್ಷಕರನ್ನು ಕಾಣುವ ದೃಷ್ಟಿ, ನಡೆಸಿಕೊಳ್ಳುವ ರೀತಿ ಹಾಗು ಕೇಡು ಸಂಭಾವನೆಗಳನ್ನು ಗಮನಿಸಿದರೆ ಕೆಡುಕೆನಿಸುತ್ತದೆ. ಯಾರು ತಮ್ಮ ಜೀವನವನ್ನೇ ಪರರ ಮಕ್ಕಳ ಕ್ಷೇಮಕ್ಕಾಗಿ, ಭಾವೀ ಜನಾಂಗದ ಕಲ್ಯಾಣಕ್ಕಾಗಿ ದೇಶದ ಅಭ್ಯುದಯಕ್ಕಾಗಿ ಮುಡಿಪಾಗಿಟ್ಟು ಜೀವನದುದ್ದಕ್ಕೂ ನಿಃಸ್ವಾರ್ಥ ಸೇವೆಯಲ್ಲಿ ನಿರತರಾಗಿರುತ್ತಾರೆಯೋ ಆ ತ್ಯಾಗಜೀವಿಗಳಿಗೆ ನಮ್ಮ ಸಮಾಜದಲ್ಲಿ ಯಾವ ಬೆಲೆಯಿದೆ? ರಾಷ್ಟ್ರ ನಿರ್ಮಾಣ ಕಾರ್ಯದಲ್ಲಿ ತೊಡಗಿದ ಶಿಕ್ಷಕರನ್ನೆ ನಾವು ಕೀಳಾಗಿ ಭಾವಿಸಿದರೆ ನಾಡಿಗ ಕ್ಷೇಮವಾಗುವ ಬಗೆ ಹೇಗೆ? ಜಗತ್ತಿನ ಇತಿಹಾಸದ ಸಂಪುಟಗಳನ್ನು ತಿರುವಿ ಹಾಕಿದರೆ ಯಾವ ರಾಷ್ಟ್ರ ತನ್ನ ಶಿಕ್ಷಕರನ್ನು ಅತ್ಯಂತ ಗೌರವದಿಂದ ಕಂಡಿದೆಯೋ ಅದೇ ರಾಷ್ಟ್ರವು ಬಲಾಢ್ಯ ರಾಷ್ಟ್ರವಾಗಿ ಬೆಳೆದು ಬಾಳಿದ್ದು ಸ್ಪಷ್ಟವಾಗುತ್ತದೆ. ಒಂದಾನೊಂದು ಕಾಲಕ್ಕೆ ನಮ್ಮ ದೇಶವು ಹಾಗೆ ಮೆರೆದು ಹೋಗಿದೆ. ಆ ಕಾಲ ಇನ್ನೊಮ್ಮೆ ಬರಬೇಕಾಗಿದೆ. ಅಂತೆಯೇ ನಾವಿಂದು ನಮ್ಮ ಸಮಾಜದಲ್ಲಿ ಶಿಕ್ಷಕರಿಗೆ ಮೊದಲಿನಂತೆ ಉನ್ನತ ಸ್ಥಾನವನ್ನು ಕಲ್ಪಿಸಬೇಕಾಗಿದೆ. ಅಂಥ ವಾತಾವರಣವನ್ನು ನಾವಿಂದು ನಿರ್ಮಿಸಬೇಕಾಗಿದೆ. ನಮ್ಮ ಶಿಕ್ಷಕರಿಗೆ ಯೋಗ್ಯ ಸ್ಥಾನ

ಮಾನಗಳನ್ನು ಯೋಜಿಸಬೇಕಾಗಿದೆ. ಅವರ ಯೋಗ ಕ್ಷೇಮಗಳನ್ನು ನಾವು ನೋಡಿಕೊಳ್ಳಬೇಕಾಗಿದೆ. ಅವರಿಗಾಗಿ ಸಹಾಯ ಸಹಾನುಭೂತಿಗಳನ್ನು ತೋರಿಸಬೇಕಾಗಿದೆ. ಇಂಥ ವಾತಾವರಣ ಹಾಗೂ ಜನತೆಯಲ್ಲಿ ಈ ತಿಳುವಳಿಕೆ ಮೂಡಿಬಂದರೆ ಶಿಕ್ಷಣವಂತಹ ಪವಿತ್ರ ಕಾರ್ಯದಲ್ಲಿ ಯೋಗ್ಯತಾಸಂಪನ್ನ ಜನರು ಬರಬಹುದು. ಅವರಿಂದ ಬಲಾಢ್ಯ ಜನಾಂಗ ನಿರ್ಮಾಣಗೊಂಡೀತು. ಇಲ್ಲವಾದರೆ ಕೇವಲ ಹೊಟ್ಟೆಪಾಡಿಗಾಗಿ ಶಿಕ್ಷಕ ವೃತ್ತಿಯನ್ನು ಕೈಕೊಂಡು ಜೀವನ ಸಾಗಿಸುವ ಜನಗಳೇ ಶಿಕ್ಷಣಕಾರ್ಯದಲ್ಲಿ ತೊಡಗಬಹುದು. ಅವರಿಂದ ದೇಶ ಪಡೆಯಬೇಕಾದುದೇನೂ ಇಲ್ಲ.

ಇಂದಿನ ನಮ್ಮ ಸಮಾಜದಲ್ಲಿ ಸ್ವಾರ್ಥ, ದುರಾಚಾರ, ದುರ್ನೀತಿಗಳು ತಾಂಡವವಾಡುತ್ತಿವೆ. ಇಂದಿನ ಸಮಾಜದಲ್ಲಿ ದುಡ್ಡಿದ್ದವನೇ ದೊಡ್ಡಪ್ಪ ಧನವುಳ್ಳವನೇ ಗುಣವಂತ; ಮೋಸ-ವಂಚನೆಗಳಲ್ಲಿ ಪಳಗಿದವನೇ ಬುದ್ಧಿವಂತ, ಅವನೇ ಯೋಗ್ಯತಾಸಂಪನ್ನ! ಇಂಥ ಅನೀತಿಯ ವಿಷಮ ವಾತಾವರಣ ನಮ್ಮ ಸಮಾಜದಲ್ಲಿ ಉಂಟಾದಾಗ ಅದನ್ನು ಹೊಡೆದು ಹಾಕಿ ಸಮಾಜದಲ್ಲಿ ಶುದ್ಧವಾದ ವಾತಾವರಣವನ್ನು ಉಂಟು ಮಾಡುವ ಸಂಸ್ಥೆಗಳಾವುವು? ನಿರ್ಮಾಣ ಮಾಡುವ ವ್ಯಕ್ತಿಗಳಾರು? ದೇಶಕ್ಕೆ ಬೇಕಾದ ಒಂದು ರಾಷ್ಟ್ರೀಯ ಶೀಲದ ಭದ್ರಬುನಾದಿಯನ್ನು ಹಾಕುವವರು ಯಾರು? ಶೀಲಸಂಪನ್ನರಾದ ವ್ಯಕ್ತಿಗಳನ್ನು ನಿರ್ಮಾಣ ಮಾಡುವವರು ಯಾರು? ಎಲ್ಲರೂ ತಮ್ಮ ತಮ್ಮ ವ್ಯಾಪಾರ ಉದ್ದಿಮೆಗಳಲ್ಲಿ ಸೇರಿ ತಮ್ಮ ಸ್ವಾರ್ಥವನ್ನು ಪೂರ್ಣವಾಗಿಸಲು ಉದ್ಯುಕ್ತರಾದರ ಶಿಕ್ಷಣದಂಥ ನಿಃಸ್ವಾರ್ಥ ಕಾರ್ಯವನ್ನು ಮಾಡುವವರು ಯಾರು? ಜನರು ನಿಕ್ಕಾರು! ಆದರೆ ಯೋಗ್ಯ ಜನರು ಸಿಗುವದು ತೀರ ವಿರಳ. ಎಲ್ಲಿ ಯೋಗ್ಯ ಜನರು ಶಿಕ್ಷಣ ರಂಗದಲ್ಲಿ ಕಾರ್ಯ ಮಾಡುವದಿಲ್ಲವೋ ಅಂಥ ಸಮಾಜ ಹೆಚ್ಚಿನ ಔನ್ನತ್ಯವನ್ನು ಪಡೆಯಲಾರದು. ಆದುದರಿಂದ ನಮ್ಮ ದೇಶವು ತನ್ನ ಪೂರ್ವ ವೈಭವವನ್ನು ಮರಳಿ ಪಡೆಯಬೇಕಾದರೆ, ಜಗತ್ತಿನ ದೊಡ್ಡ ರಾಷ್ಟ್ರಗಳ ಮಾಲಿಕೆಯಲ್ಲಿ ನಿಲ್ಲಬೇಕಾದರೆ ತನ್ನ ದೇಶದ ಶಿಕ್ಷಕವೃಂದವನ್ನು ಅತ್ಯಂತ ಗೌರವ ಹಾಗೂ ಆದರಗಳಿಂದ ಕಾಣಬೇಕು. ಅವರ ಯೋಗ ಕ್ಷೇಮಗಳ ಹೊಣೆಯನ್ನು ಅರಿಯಬೇಕು.

ಇತ್ತೀಚೆಗೆ ನಮ್ಮ ದೇಶದಲ್ಲಿ ಪಂಚವಾರ್ಷಿಕ ಯೋಜನೆಗಳನ್ನು ಕಲ್ಪಿಸಿ ದೇಶದ ಸಂಪತ್ತನ್ನು ಹೆಚ್ಚಿಸಲು ಹೆಣಗುತ್ತಿದ್ದೇವೆ. ಅದರಂತೆ ನಮ್ಮ ಸಂಪತ್ತೂ ಬಹಳ ಮಟ್ಟಿಗೆ ಹೆಚ್ಚಿದೆ. ಆದರೆ ಆ ಸಂಪತ್ತಿನ ಅರ್ಥವನ್ನು ಮಾಡಿಕೊಳ್ಳದ ಜನರಿದ್ದರೆ ಆ ಸಂಪತ್ತಿನಿಂದ ನಮ್ಮ ದೇಶದ ಬೆಲೆ ಏರಲಾರದು; ನಮಗೆ ಸುಖ ದೊರೆಯಲಾರದು. ಆದುದರಿಂದ ನಮ್ಮ ಭೌತಿಕ ಸಂಪತ್ತನ್ನು ಹೆಚ್ಚಿಸುವದರ ಜೊತೆಗೆ ಅವಕ್ಕೆ ಅರ್ಥ ಹಚ್ಚುವ ಮತ್ತು ಅರ್ಥ ಮಾಡಿಕೊಳ್ಳುವ ಸುಶಿಕ್ಷಿತ ಜನ ಬೇಕಾಗಿದೆ. **ಇಂಥ ಸುಶಿಕ್ಷಿತ ನಾಗರಿಕ**

ರೇ ದೇಶದ ನಿಜವಾದ ಸಂಪತ್ತು; ಇದೇ ಮಾನವೀಯ ಸಂಪತ್ತು. ಇದನ್ನು ಹೆಚ್ಚಿಸುವದೇ ಅತ್ಯಂತ ಮುಖ್ಯವಾದುದು. ಈ ಮಾನವೀಯ ಸಂಪತ್ತು ಹೆಚ್ಚಬೇಕಾದರೆ ಮನುಷ್ಯನ ಹೃನ್ಮನಗಳನ್ನು ಮೊದಲು ಕೃಷಿಗೊಳಿಸ ಬೇಕಾಗುತ್ತದೆ. ಇದನ್ನು ಮಾಡುವವರು ಶಿಕ್ಷಕರು. ಮನುಷ್ಯ ಚಿಕ್ಕ ಮಗುವಿದ್ದಾಗಿ ನಿಂದ ದೊಡ್ಡವನಾಗುವ ತನಕ ಅವನ ನಡೆನುಡಿಗಳನ್ನು ತಿದ್ದಿ ಶೀಲಸಂಪನ್ನನ್ನಾಗಿ ಮಾಡುವದು ತುಂಬಾ ಹೊಣೆಗಾರಿಕೆಯ ಕೆಲಸ. ಈ ಕಾರ್ಯವನ್ನು ಮಾಡಲು ಶೀಲಸಂಪನ್ನರಾದ, ಉಚ್ಚಮಟ್ಟದ ನೀತಿ ವಂತ ಜನರಿರಬೇಕು. ಅವರನ್ನು ಈ ಉದ್ಯಮದಲ್ಲಿ ತೊಡಗಿಸಬೇಕಾದರೆ ಅವರಿಗೆ ತಕ್ಕ ಪ್ರೋತ್ಸಾಹಗಳು ಸಿಗಬೇಕು; ಯೋಗ್ಯ ಮಾನ-ಮರ್ಯಾದೆಗಳಿರಬೇಕು; ಅವರ ಉನ್ನತಿಯನ್ನು ಸಮಾಜ ನೋಡಿ ಕೊಳ್ಳಬೇಕು. ಅಂದರೆ ಅವರು ಉತ್ಸಾಹದಿಂದ ಹಾಗೂ ಕಳಕಳಿಯಿಂದ ದುಡಿ ಯುತ್ತಾರೆ ಈ ತರಹದ ಒಂದು ತಿಳುವಳಿಕೆಯ ಸೌಹಾರ್ದವಾತಾವರಣವನ್ನು ಸಮಾಜದಲ್ಲಿ ನಿರ್ಮಿಸಲೋಸುಗವೇ ಡಾ|| ರಾಧಾಕೃಷ್ಣನ್‌ರವರು ಶಿಕ್ಷಕರ ದಿನಾಚರಣೆಯನ್ನು ಆಚರಿಸಲು ಉದ್ಯುಕ್ತರಾದರು. ನಾವು ಅವರ ಈ ಉದ್ದೇಶವನ್ನು ನೆನಪಿನಲ್ಲಿಟ್ಟುಕೊಂಡು ಅವರು ಹಾಕಿ ಕೊಟ್ಟ ಈ ಸಂಪ್ರದಾಯವನ್ನು ತುಂಬಾ ಸಂತೋಷದಿಂದ ಮುಂದುವರಿಸಬೇಕು.

'ಶಿಕ್ಷಕ ದಿನಾಚರಣೆ' ಯ ಎರಡನೆಯ ಉದ್ದೇಶವೆಂದರೆ, ಶಿಕ್ಷಕರಾದವರು ಇಂದು ತಮ್ಮ ಆತ್ಮಪರೀಕ್ಷೆಯನ್ನು ಮಾಡಿಕೊಳ್ಳುವ ದಿನ; ತಮ್ಮ ಲೋಪ ದೋಷಗಳನ್ನು ಅರಿತು, ತಿದ್ದಿಕೊಂಡು ಪುನಃ ತಮ್ಮ ಕರ್ತವ್ಯಪಾಲನೆಗೆ ಉದ್ಯುಕ್ತರಾಗಬೇಕು. ಸಮರ್ಪಣ ಭಾವದಿಂದ ಸೇವೆ ಸಲ್ಲಿಸಲು ಪ್ರತಿಜ್ಞೆಗೈಯ್ಯಬೇಕು. "ಭಾರತವು ನನ್ನ ದೇಶ; ಭಾರತೀಯರೆಲ್ಲರೂ ನನ್ನ ಬಂಧು-ಭಗಿನಿಯರು. ನನ್ನ ದೇಶವನ್ನು ಆತ್ಮಸಾಕ್ಷಿಯಾಗಿ ಪ್ರೀತಿಸುತ್ತೇನೆ. ಅದರ ಘನಪರಂಪರೆಯ ಬಗೆಗೆ ತುಂಬಾ ಅಭಿಮಾನತಾಳುತ್ತೇನೆ. ಅದರ ಘನತೆ ಗೌರವಗಳನ್ನು ಹೆಚ್ಚಿಸಲು ನನ್ನ ಶಕ್ತಿಮೀರಿ ಪ್ರಯತ್ನಿಸುತ್ತೇನೆ. ನನ್ನ ತಂದೆ ತಾಯಿಗಳಲ್ಲಿ, ಗುರು ಹಿರಿಯರಲ್ಲಿ ಹಾಗು ಪ್ರತಿಯೊಬ್ಬರಲ್ಲಿಯೂ ವಿನಯವುಳ್ಳವನಾಗಿ ವರ್ತಿಸುತ್ತೇನೆ. ನನ್ನ ಸುಖವನ್ನು ಕೊಂಚ ಕಡಿಮೆ ಮಾಡಿಯಾದರೂ ನನ್ನ ದೇಶದ ಹಾಗೂ ನನ್ನ ಜನತೆಯ ಶ್ರೇಯೋಭಿವೃದ್ಧಿಗಳಿಗಾಗಿ ಸದಾ ಶ್ರಮಿಸಲು ಪ್ರತಿಜ್ಞೆಗೈಯ್ಯುತ್ತೇನೆ."

ಈ ಘನ ಉದ್ದೇಶದಿಂದ ಪ್ರೇರಿತನಾಗಿ ಈ ತರಹದ ಅಂತರಂಗ ಶುದ್ಧಿಯನ್ನು ತನ್ನ ರಾಷ್ಟ್ರದ ಮಕ್ಕಳ ಭವಿತವ್ಯವನ್ನು ಉಜ್ವಲ ಗೊಳಿಸಲು ಕಂಕಣ ಬದ್ಧನಾಗಬೇಕು. ತನ್ನ ಜೀವನದುದ್ದಕ್ಕೂ ಈ ಪವಿತ್ರ ಭಾವನೆಯಿಂದ ಪ್ರೇರಿತನಾಗಿ ತನ್ನ ಕರ್ತವ್ಯವನ್ನು ನಿರ್ವಹಿಸಬೇಕು. ಅಂದರೆ

ಮಾತ್ರ "ಶಿಕ್ಷಕ ದಿನ" ವನ್ನು ಆಚರಿಸಿದಂತಾಗುತ್ತದೆ; ಸಮಾಜದ ಋಣವನ್ನು ತೀರಿಸಿದಂತಾಗುತ್ತವೆ. ಇದಿಲ್ಲದಿದ್ದರೆ ಅದು ಕೇವಲ ಆತ್ಮವಂಚನೆ ಯಾದೀತು. ಒಟ್ಟಿನಲ್ಲಿ ಹೇಳುವವಾದರೆ, ಜನತೆಯಲ್ಲಿ ಶಿಕ್ಷಕರ ಬಗೆಗೆ ಗೌರವ ಆದರಗಳನ್ನು ಹಾಗೂ ಶಿಕ್ಷಕರಲ್ಲಿ ಕರ್ತವ್ಯಪಾಲನೆಯ ಪ್ರಜ್ಞೆಯನ್ನು ಮೂಡಿಸುವದೇ ಆಗಿದೆ. ಈ ಘನ ಉದ್ದೇಶಗಳು ಈಡೇರುವಂತೆ ಭಾರತೀಯರಾದ ನಾವೆಲ್ಲರೂ ಈ ದಿನದ ಮಹತ್ವವನ್ನು ಅರಿತು ಅದರ ಸರಿಯಾದ ಅರ್ಥವನ್ನು ಮಾಡಿಕೊಂಡು ಅಂತಃಕರಣಪೂರ್ವಕವಾಗಿ ಈ ದಿನವನ್ನು ಆಚರಿಸಿದರೆ ನಮ್ಮ ದೇಶದ ಗತವೈಭವವು ಪುನರುಜ್ಜೀವನಗೊಳ್ಳುವದರಲ್ಲಿ ಯಾವ ಸಂದೇಹವಿಲ್ಲ.

● ● ●

## ಗಟಾರು ಇರಲಿಲ್ಲ

ಒಬ್ಬ ನಾಗರಿಕ : ಒಳಚರಂಡಿ ಯೋಜನೆ ಹಾಗೂ ಗಟಾರಿನ ಅಡಿಗಲ್ಲು ಹಾಕಿದರು, ನಮ್ಮ ಮಾನ್ಯ ಕೆ.......... ಮಂತ್ರಿವರ್ಯರು. ಅವರಿಗೆ ನಾವು ಕೃತಜ್ಞರಾಗಿರ ಬೇಕಲ್ಲವೇ?

ಇನ್ನೊಬ್ಬ ನಾಗರಿಕ : ನಮ್ಮಲ್ಲಿ ಗಟಾರು ಇರಲಿಲ್ಲ; ನಿಜ.

ಒಬ್ಬ ನಾಗರಿಕ : ನಿನ್ನ ಅರ್ಥ ?

ಇನ್ನೊಬ್ಬ ನಾಗರಿಕ : ನಮಲ್ಲಿ ಗಟಾರು ಇರಲಿಲ್ಲ ಇದರರ್ಥ ನಮಲ್ಲಿ ಕೊಳೆ ನೀರೂ ಇದ್ದಿದ್ದಿಲ್ಲ. ರಾಡೀನೂ ಇದ್ದಿದ್ದಿಲ್ಲ. ನವೀನ ಯೋಜನೆಗಳ ಉದ್ಘಾಟನವಾದ ನಂತರ ಎಲ್ಲಾ ರಾಡೀ ಹೊರ ಬರ್ತಾಯಿದೆ. ಬಹಳ ಹಾದಿಗಳಿಂದ. ಅದಕ್ಕೇ ಈ ಒಳಚರಂಡಿ!



# ಘೇರೋ

## — ಒಂದು ಕ್ಷ--ಕಿರಣ ವಿಶ್ಲೇಷಣೆ

—ಕೆ. ಎಸ್. ಶರ್ಮಾ,
ಎಂ. ಎ., ಎಲ್ ಎಲ್. ಬಿ., ಡಿ.ಪಿ.ಎ.

[ ಭಾರತದಲ್ಲಿ ಘೇರೋ ಚಳುವಳಿ ಜನನತಾಳಿ ಈಗಾಗಲೇ ಆರು ತಿಂಗಳಾಯಿತು. ಆದರೆ ಇನ್ನೂ ಅನೇಕರಿಗೆ 'ಘೇರೋ' ಅಂದರೇನು, ಇದಕ್ಕೆ ರೀತಿ-ನೀತಿ ಏನಾದರೂ ಇದೆಯೋ, ಇದರ ಗುರಿ ಏನು ಮುಂತಾದ ವಿಷಯಗಳಬಗ್ಗೆ ವಿಶೇಷವಾಗಿ ಗೊತ್ತಿಲ್ಲ. ಇತ್ತೀಚಿಗೆ ಕೇರಳದ ಸಚಿವರೊಬ್ಬರು ತಮಗೆ ಘೇರೋ ಬಗ್ಗೆ ಏನೂ ಗೊತ್ತಿಲ್ಲ ಎಂದು ಹೇಳಿದ್ದಾರೆ. ಪ್ರಗತಿಪರ ಸರ್ಕಾರದ ಸಚಿವರು ಕೆಲವರಿಗೇ ಇದರ ಬಗ್ಗೆ ತಿಳಿಯುದಿರುವಾಗ ಶ್ರೀ ಸಾಮಾನ್ಯರ ಗತಿಯೇನು? ಆದ್ದರಿಂದ 'ಘೇರೋ'ವಿನ ವೈಚಾರಿಕ ಹಾಗೂ ರಾಜಕೀಯ ಶಾಸ್ತ್ರ ಪ್ರಧಾನ ವಿವೇಚನೆಯ ಅವಶ್ಯಕತೆಯನ್ನು ಗಮನಿಸಿ ಈ ಕ್ಷ-ಕಿರಣ ವಿಶ್ಲೇಷಣೆಯನ್ನು 'ಮಾಧವಿ' ಯ ಓದುಗರಿಗೆ ಅರ್ಪಿಸುತ್ತಿದ್ದೇವೆ.

— ಸಂ.]

"ಘೇರೋ" ರಾಜಕೀಯ ವಿಚಾರ ಕ್ಷೇತ್ರದಲ್ಲಿ ಒಂದು ಪ್ರಚಂಡ ವಿವಾದದ ಬಿರುಗಾಳಿಯನ್ನೇ ಎಬ್ಬಿಸಿದೆ. ರಾಜಕೀಯ ವಿಚಾರದ ಬಲ ಹಾಗೂ ಎಡಗುಂಪುಗಳ ನಡುವಿನ ತಾಕಲಾಟ, ಈ ಬಿರುಗಾಳಿಗೆ ಚೇತನವನ್ನು ಕೊಟ್ಟಿದ್ದರೆ, ಕಾಯ್ದೆ ಪಂಡಿತರ ಉಲ್ಲೇಖಗಳು ಈ ವಿವಾದಕ್ಕೆ ಬಣ್ಣವನ್ನು ಒದಗಿಸಿದೆ. ಕ್ರಾಂತಿಕಾರೀ ಸಮಾಜವಾದಿಗಳು 'ಘೇರೋ, ಕಾರ್ಮಿಕರ ಒಂದು ಬ್ರಹ್ಮಾಸ್ತ್ರ, ಬಂಡವಾಳ ಶಾಹಿಗಳನ್ನು ನಿರ್ನಾಮಮಾಡುವಲ್ಲಿ ಮಾರಣಾಸ್ತ್ರ, ಪ್ರಜಾಸತ್ತಾತ್ಮಕ ಕಕ್ಷೆಯೊಳಗೆ ನ್ಯಾಯಬದ್ಧ ಪ್ರತಿಭಟನಾ ವಿಧಾನದ ಒಂದು ನವೀನ ತಂತ್ರ" ಎಂದು ಪ್ರತಿಪಾದಿಸುತ್ತಾರೆ. ಬಂಡವಾಳ ಶಾಹೀ ತತ್ವದ ವೀರ ಪ್ರತಿ ಪಾದಿಕರು ' ಪ್ರಜಾಸತ್ತಾತ್ಮಕ ಭವ್ಯ ರಚನೆಯನ್ನು ಬುಡಸಮೇತ ಕಿತ್ತೆಸೆಯಲು ಅನ್ಯಾಯ ಅತ್ಯಾಚಾರಗಳ ಬಲವನ್ನು ಪಡೆದು ಸ್ಫೋಟಗೊಳ್ಳುತ್ತಿರುವ ಕಾರ್ಮಿಕರ ಕ್ರೌರ್ಯದ ಫಲ ಘೇರೊ" ಎಂದೆನ್ನುತ್ತಾರೆ. ಉದ್ದಿಮೆದಾರರು, ಘೇರೋ ಒಂದು ಶಾಪ ಎಂದು ಭಾವಿಸಿದರೆ, ಕಾರ್ಮಿಕರು – ಸಮತಾವಾದಿಗಳು ಘೇರೋವನ್ನು ಸಮತಾವಾದೀ ಸ್ವಾತಂತ್ರ್ಯಾರ್ಜನೆಗೊಂದು ಸೂಕ್ತ ಆಯುಧ ಎಂದು ಪರಿಗಣಿಸುತ್ತಾರೆ. ಈ ವಾದ ವಿವಾದಗಳು, ಪ್ರಕೋಪಗಳು, ಯುಕ್ತ ಅಯುಕ್ತಗಳು ವಿವೇಚನೆಗೆ ಗುರಿಯಾದಾಗ ಘೇರೋವಿನ ವಾಸ್ತವೀಚಿತ್ರ ದೊರೆಯುತ್ತದೆ. ಈ ವಾಸ್ತವೀ ಚಿತ್ರದ ಹಿನ್ನೆಲೆಯಲ್ಲಿ ಈ ಕ್ರಮದ ನ್ಯಾಯಬದ್ಧತೆ-ಕ್ರಿಯಾ ಸೂಕ್ತತೆಗ ವಿಶ್ಲೇಷಣೆಯೂ ಸಾಧ್ಯ ಎಂಬ ಭಾವನೆಯೇ "ಘೇರೋ" ವಿನ ಕ್ಷ–ಕಿರಣ ವಿವೇಚನೆಗ ಎಡೆಮಾಡಿದೆ. ರೋಗವನ್ನರಿಯುವ ತನಕ ಅದರ ನಿವಾರಣೆಯು ಸಾಧ್ಯವಿಲ್ಲ. ರೋಗವೇ ಇಲ್ಲದಿದ್ದರೆ ನಿವಾರಣೆಯ ಪ್ರಶ್ನೆಯೇ ಇರುವದಿಲ್ಲ. ಈ ಕ್ಷ–ಕಿರಣ ಘೇರೋದ ವಿಶ್ಲೇಷಣೆಯನ್ನು ಪೋಷಕ ಗೊಳಿಸಲೆಂಬುದೇ ಇದರ ಉದ್ದೇಶ.

ಹಿನ್ನೆಲೆ :—

ನಾಲ್ಕನೆಯ ಮಹಾಚುನಾವಣೆಯು ಅನೇಕ ವಿಶ್ಲೇಷಣೆಗಳಿಗೆ ಅವಕಾಶಮಾಡಿ ಕೊಟ್ಟಿದೆ. ಚುನಾವಣಾಫಲಿತಾಂಶವು ಅತೀ ಚಾಣಾಕ್ಷ ರಾಜಕೀಯ ಭವಿಷ್ಯಕಾರರನ್ನೂ ದಂಗುಬಡಿಸಿ, ಸಾರ್ವಜನಿಕರ ಅಭಿಪ್ರಾಯದ ನಿರ್ಧಾರಕ್ಕೆ ಉಪಯೋಗಿಸುವ ಅಳತೆಗೋಲನ್ನೇ ಬದಲು ಮಾಡುವಂತೆ ಮಾಡಿದೆ. ಸಾರ್ವಜನಿಕ ಅಭಿಪ್ರಾಯವು ಮಿಶ್ರಿತವಾಗಿದ್ದು, ಒಂದೆಡೆ ಕಾಂಗ್ರೇಸ ಪಕ್ಷಕ್ಕೆ ಭರಿಸಲಾಗದ ಹಾನಿಯನ್ನು ಮಾಡಿದ್ದರೆ, ಇನ್ನೊಂದೆಡೆ ಕಾಂಗ್ರಸ್ಸೇತರ ಪಕ್ಷಗಳಿಗೂ ಭಾರತದಲ್ಲಿ ಅಧಿಕಾರ ಪಕ್ಷವಾಗುವ ಅವಕಾಶವಿದೆ ಎಂಬ ಆಶೆಯನ್ನು ಮೂಡಿಸಿದೆ. ಕಾಂಗ್ರಸ್ಸಿನ ಅನಿರೀಕ್ಷಿತ ಸೋಲಿಗೆ ಅನೇಕ ಕಾರಣಗಳನ್ನು ಸೂಚಿಸಿದರೂ ಅದರಲ್ಲಿ ಮುಖ್ಯವಾದುದೆಂದರೆ ೨೦ ವರ್ಷಗಳ ಕಾಂಗ್ರೇಸ್ಸಿನ ಸತತ ಅಧಿಕಾರವು ಜನತೆಯನ್ನು ದುಃಖ ದುಮ್ಮಾನಗಳಿಂದ ಪಾರುಮಾಡಲು ಸಮರ್ಥವಾಗಲಿಲ್ಲವೆಂಬುದು. ಕೆಲವರು ನಮ್ಮ ಪ್ರಜೆಗಳಲ್ಲಿ ರಾಜಕೀಯ ಎಚ್ಚರಿಕೆ ಉಂಟಾಗಿರುವದೇ ಕಾಂಗ್ರೇಸ ಪತನಕ್ಕೆ ಕಾರಣವೆನ್ನುತ್ತಾರೆ. ಅದರಲ್ಲಿ ಒಂದು ಗುಂಪು ಪ್ರಗತಿಪರ ರಾಜಕೀಯ ವಿಚಾರವಾದ ಜನಪ್ರಿಯವಾಗುತ್ತಿದೆ.ಎಂದರೆ ಮತ್ತೊಂದು ಗುಂಪು ಪ್ರತಿಗಾಮಿ ಶಕ್ತಿಗಳು ಬಲಿಷ್ಟ ಗೊಂಡಿವೆಯೆನ್ನುತ್ತಾರೆ. ಆಂಧ್ರ, ಮೈಸೂರು, ಆಸ್ಸಾಂ, ಮಹಾರಾಷ್ಟ್ರ ರಾಜಸ್ತಾನ, ನಾಗಾಲ್ಯಾಂಡ, ಗುಜರಾತ, ಹಿಮಾಚಲ ಪ್ರದೇಶಗಳಲ್ಲಿ ಕಾಂಗ್ರೇಸ್ಸ ಅಧಿಕಾರದಲ್ಲಿದ್ದರೆ, ಪಶ್ಚಿಮ ಬಂಗಾಲ್, ಮದ್ರಾಸ್, ಕೇರಲ. ಉತ್ತರಪ್ರದೇಶ, ಪಂಜಾಬ,ಹರಿಯಾನಾ, ಬೀಹಾರ,ಒರಿಸ್ಸಾ, ಮಧ್ಯ ಪ್ರದೇಶ ಈ ಒಂಬತ್ತು "ರಾಜ್ಯಗಳಲ್ಲಿ ಕಾಂಗ್ರೇಸ್ಸೇತರ ಪಕ್ಷಗಳೋ ಅಥವಾ ಕಾಂಗ್ರೇಸ್ಸೇತರಪಕ್ಷಗಳ ಸಂಮಿಶ್ರ ಸರ್ಕಾರವೋ ಅಧಿಕಾರದಲ್ಲಿದೆ. ಕಾಂಗ್ರೇಸ್ಸ ಈಗ ಕೇವಲ ನೂರಕ್ಕೆ ೩೬ ರಷ್ಟುಜನರನ್ನು ಮಾತ್ರ ಪ್ರತಿನಿಧಿಸುತ್ತವೆ. ಆದರೆ ಕೇಂದ್ರದಲ್ಲಿ ಕಾಂಗ್ರೇಸ್ ಅಧಿಕಾರೀ ಪಕ್ಷ. ಈ ಸ್ಥಿತಿಯನ್ನುನೋಡಿದರೆ ಭಾರತವನ್ನು ೧೮ ಕುದುರೆಗಳಿಂದ ಎಳೆಯಲ್ಪಡುತ್ತಿರುವ ರಥಕ್ಕೆ ಹೋಲಿಸ ಬಹುದು. ಒಂದೊಂದು ಕುದುರೆ ಒಂದೊಂದು ಕಡೆ ಎಳೆದರೆ ರಥದ ಮುನ್ನಡೆಯು ಗತಿಯೇನು ಎಂಬುದರ ಬಗ್ಗೆ ವಿವರಿಸ ಬೇಕಾಗಿಲ್ಲ ಈ ಅಯೋಮಯ ಪರಿಸ್ಥಿತಿಯಲ್ಲಿ ರಾಷ್ಟ್ರದ ಅಧಃಪತನ ಎಲ್ಲಿ ಕಾದಿದೆಯೋ ಎನಿಸುವಂತಾಗಿದೆ. ರಾಷ್ಟ್ರದ ಈ ಹಿನ್ನೆಲೆಯಲ್ಲಿ ಮತ್ತೊಂದು ಮಹತ್ವದ ಅಂಶವನ್ನು ಮರೆಯಬಾರದು. ಅದು ಕಾರ್ಮಿಕರ ಹಾಗೂ ಬಂಡವಾಳ ಶಾಹಿಗಳ ನಡುವಿನ ಹೋರಾಟ. ಅದರಲ್ಲೂ ಸಮಾಜವಾದೀ ಪಕ್ಷಗಳು ಕೇರಳ ಹಾಗೂ ಪಶ್ಚಿಮ ಬಂಗಾಲದಲ್ಲಿ ಅಧಿಕಾರಕ್ಕೆ ಬಂದಿರುವಾಗ ಈ ಹೋರಾಟ ಹೊಸ ಚೈತನ್ಯವನ್ನೂ ಪಡೆಯುತ್ತಿದೆ ಎನ್ನಬೇಕು. ಈ ಹಿನ್ನೆಲೆಯಲ್ಲಿ ನಾವು " ಘೇರೋ "ವನ್ನು ಪರಿ

ಶೀಲಿಸಿ, ವಿಮರ್ಶಿಸಿ, ಅದರ ಮೌಲ್ಯನಿರೂಪಣೆಯನ್ನು ಮಾಡಬೇಕು.

ಈಗ ೮೧ ವರ್ಷಗಳ ಹಿಂದಿನ ಮಾತು. ಅಮೆರಿಕಾದ ಹೇ ಮಾರ್ಕೆಟ ಚೌಕದಲ್ಲಿ ಆದ ಘಟನೆಯನ್ನು ನೆನಸಿದರೇ ಇಂದೂ ಮೈಮೇಲೆ ಮುಳ್ಳೇಳುತ್ತದೆ. ಮೇ ೧ ೧೮೮೬ ರಂದು ಅಮೇರಿಕದ ಕಾರ್ಮಿಕ ಬಾಂಧವರು '' ದಿನಕ್ಕೆ ೮ ಗಂಟೆ ಮಾತ್ರ ಕೆಲಸ'' ಎಂಬ ಘೋಷಣೆಯನ್ನು ಮಾಡುತ್ತ, ಈ ಬೇಡಿಕೆಯನ್ನು ಪಡೆಯಲು ಜಗತ್ತಿನಲ್ಲೇ ಪ್ರಥಮ ಸಲ ಸಂಘಟಿತ ಸಂಪು ಹೂಡಿದಾಗ ಆ ಪ್ರದರ್ಶನಕಾರರನ್ನು ಉದ್ದಿಮೆಗಳ ಮಾಲಕರಿಂದ ಪ್ರೇರಿತರಾದ ಪೋಲೀಸರು ಸುಟ್ಟು ಕೊಂದು ಆ ಚಳುವಳಿಕಾರರನ್ನು ರಕ್ತದ ಮಡುವಿನಲ್ಲಿ ಮುಳುಗಿಸಿ ಬಿಟ್ಟರು. ಬಡಕಾರ್ಮಿಕರ ಅಶಕ್ತತೆಗೂ ಸಾಹುಕಾರರ ಕ್ರೌರ್ಯಕ್ಕೆ ತುತ್ತಾಗಿ ಆಹುತಿಯಾಯಿತು. ಆದರೆ ಆಗ ಕಾರ್ಮಿಕರಲ್ಲಿ ಸಂಘಟನೆಯ ಪ್ರಜ್ಞೆ ಹೆಚ್ಚಾಗಿರಲಿಲ್ಲ. ಕಾರ್ಮಿಕ ಸಂಘಗಳನ್ನು ಸೇರುವದೆಂದರೆ ಒಂದು ಪಾಪ ಅಥವಾ ತಮ್ಮ ಹೊಟ್ಟೆಯ ಮೇಲೆ ಕಲ್ಲು ಹಾಕಿಕೊಳ್ಳುವ ಕೃತಿ ಎಂದು ಬಯಸುತ್ತಿದ್ದರು. ಆ ಸ್ಥಿತಿಯಲ್ಲಿ ಸಂಪನ್ನು ಆಕ್ರಮವೆಂದು ಭಾವಿಸಿ, ಅದರಲ್ಲಿ ಭಾಗವಹಿಸಿದವರನ್ನು ಕುರಿಗಳನ್ನು ಕಡಿಯುವಂತೆ ಕಡಿದು ಹಾಕಿದ್ದರು. ಈ ಚಾರಿತ್ರ್ಯಾತ್ಮಕ ದಿನ ಇಂದು ಜಗತ್ತಿನಾದ್ಯಂತ '' ಮೇದಿನವೆಂದು ಜಾಗತಿಕ ಕಾರ್ಮಿಕರ ಐಕ್ಯತೆಯ ದಿನವಾಗಿ ಆಚರಿಸಲ್ಪಡುತ್ತಿದೆ. ಅಂದು ಅಶಕ್ತ ಪ್ರತಿಭಟನೆಯಾಗಿ ಪ್ರಾರಂಭವಾದದ್ದು ಇಂದು ಜಾಗತಿಕ ಶಕ್ತಿಯಾಗಿ ಪರಿಣಮಿಸಿದೆ. ಅಂದು ಆಕ್ರಮವೆಂದು ಸಾರಲಾದ "ಸಂಪು" ಈಗ ಕ್ರಮಬದ್ಧವಾಗಿದೆ. (ಭಾರತದಲ್ಲಿ ಅವಶ್ಯಕ ನೌಕರರು ಮಾತ್ರ ಸಂಪು ಮಾಡುವಂತಿಲ್ಲ). ಅಂತೆಯೇ ಕಾರ್ಮಿಕರ ಹೊಸ ಆಯುಧ ''ಘೇರೋ'' ಇಂದು ಅಕ್ರಮವೆಂದು ಸಾರಲ್ಪಟ್ಟರೂ, ಅದು ಕಾಲಕ್ರಮೇಣ ಕ್ರಮ ಬದ್ಧವಾಗಿ, ಕಾರ್ಮಿಕರ ಬಲಿಷ್ಠ ಆಯುಧವಾಗುವುದೋ ಏನೋ?

## "ಘೇರೋ" ಒಂದು ನಾವೀನ್ಯತೆ

ಕಾರ್ಮಿಕರ ಮಾಲಕರ ನಡುವಿನ ಹೋರಾಟದಲ್ಲಿ ಕಾರ್ಮಿಕರ ಆಯುಧಗಳು, ಆಡಳಿತದ ಅಸ್ತ್ರಗಳು ನಮಗೇನೂ ಹೊಸತಲ್ಲ. ಪ್ರತಿಭಟನಾ ಪ್ರದರ್ಶನದಿಂದ ಪ್ರಾರಂಭಿಸಿ ಪ್ರತಿಭಟನಾ ಮೆರವಣಿಗೆ, ಉಪಕರಣಗಳನ್ನು ಕೆಳಗಿಡುವ ಸಂಪು, ಸಾಂಕೇತಿಕ ಸಂಪು, ಅನಿರ್ದಿಷ್ಟ ಸಂಪು ಮುಂತಾದ ಆಯುಧಗಳನ್ನು ಕಾರ್ಮಿಕರು ಹಾಗೂ ಕಾರ್ಮಿಕ ಸಂಘಗಳು ಕರಗತ ಮಾಡಿ ಕೊಂಡಿದ್ದರೆ, ಬಂಡವಾಳಶಾಹೀ ಆಡಳಿತವು ಕೆಲಸಗಾರನಿಗೆ ಮುನ್ನೆಚ್ಚರಿಕೆ ಕೊಡುವದರಿಂದ ಹಿಡಿದು, ಬಡತಿ ನಿಲ್ಲಿಸುವುದು, ಸಸ್ಪೆಂಡ್ ಮಾಡುವದು, ಕೆಲಸದಿಂದ ಮನೆಗಪ್ಪಣೆ ಕೊಡುವದರ ವರೆಗೆ ನಿರ್ದಾಕ್ಷಿಣ್ಯವಾಗಿ ಉಪಯೋಗಿಸುತ್ತದಲ್ಲದೆ, ಕಾರ್ಮಿಕ ಸಂಘಗಳು ಸುಸಂಘಟಿತ

ವಾದವುಗಳಾಗದಿದ್ದರೇ ಆ ಉದ್ದಿಮೆಗಳಲ್ಲಿ ಉದ್ದಿಮೆಯನ್ನು ಮುಚ್ಚುವದು; ಮುಂತಾದ ಆಯುಧಗಳನ್ನು ಉಪಯೋಗಿಸುತ್ತದೆ. ಕಾರ್ಮಿಕರಲ್ಲಿ ಸಂಘಟನೆಯೇ ಶಕ್ತಿಯಾದರೆ, ಆಡಳಿತಕ್ಕೆ-ಸರಕಾರಕ್ಕೆ ಅಧಿಕಾರವೇ ಶಕ್ತಿಯಾಗಿ ಪರಿಣಮಿಸುತ್ತದೆ. ಈ ಕಾರ್ಮಿಕರ-ಬಂಡವಾಳದ ನಡುವಿನ ಹೋರಾಟ ಇಂದಿನದಲ್ಲ. ಇಂದು ಅನೇಕ ವರ್ಷಗಳಿಂದ ಜಗತ್ತಿನ ಎಲ್ಲ ಭಾಗಗಳಲ್ಲಿ ನಿರಂತರವಾಗಿ ನಡೆದೇಯಿದೆ.

ಕಾರ್ಮಿಕರೇ ಆಳುವವರಾದ ರಾಷ್ಟ್ರಗಳಾದ ಸಮಾಜವಾದೀ ರಾಷ್ಟ್ರಗಳಲ್ಲಿ ಮಾತ್ರ ಈ ಹೋರಾಟಕ್ಕೆ ಅವಕಾಶವಿಲ್ಲ. ಏಕೆಂದರೆ ಅಲ್ಲಿ ವರ್ಗಗಳೇ (ಕಾರ್ಮಿಕ ಮೂಲಕ) ಇಲ್ಲ. ಎಲ್ಲರೂ ಕಾರ್ಮಿಕರೇ ಎಲ್ಲರೂ ಆಡಳಿತಗಾರರೇ. ಅವುಗಳು ವರ್ಗರಹಿತ ಸಮಾಜಗಳು. ಈ ವರ್ಗಗಳ ಹೋರಾಟದ ಚರಿತ್ರೆಯಲ್ಲಿ ಇಲ್ಲಿಯ ವರೆಗೆ "ಘೇರೋ" ಎಂಬ ಮಾತು ಕೇಳಿಬಂದಿರಲಿಲ್ಲ. ಇತ್ತೀಚೆಗೆ ಮಾತ್ರ ಈ ಮಾತು ಆಗಾಗ ಕೇಳಬರುತ್ತಿದೆ. ಅದರ ಬಗ್ಗೆ ಅನೇಕ ವರದಿಗಳು ಪ್ರತಿದಿನ ವೃತ್ತಪತ್ರಿಕಗಳಲ್ಲಿ ಬಿಂಬಿಸುತ್ತಿವೆ. ಈಗ "ಘೇರೋ" ಎಂದರೇನು ? ಇದು ಎಲ್ಲಿ ಜನ್ಮತಾಳಿತು ಏತಕ್ಕಾಗಿ? ಮುಂತಾದ ವಿಷಯಗಳ ಬಗ್ಗೆ ವಿಚಾರಮಾಡೋಣ.

ಕಾರ್ಮಿಕರು ಉದ್ದಿಮೆದಾರರ ಅಥವಾ ಮಾಲಿಕರ ಮುಂದಿಟ್ಟ ಬೇಡಿಕೆಗಳು ಮನ್ನಿಸಲ್ಪಡದಿದ್ದರೆ, ಅಥವಾ ಕಾರ್ಮಿಕರಿಗೆ ಯಾವುದೇ ವಿಧದಲ್ಲಿ ಮಾಲಿಕರಿಂದ ಅನ್ಯಾಯವಾದರೆ, ಈ ಅನ್ಯಾಯ ಮಾಡಿದ ಮಾಲಿಕನನ್ನೋ, ಉದ್ದಿಮೆಯ ಅಧಿಕಾರಿಯನ್ನೋ ಎಲ್ಲ ಕಾರ್ಮಿಕರೂ ಮುತ್ತಿಗೆ ಹಾಕಿ, ಅವನು ಕಾರ್ಮಿಕರ ಬೇಡಿಕೆಗಳನ್ನು ಪೂರೈಸುವ ತನಕ ಅವನನ್ನು ಅಲ್ಲಿಯೇ ಬಂಧಿಸುವ ಕಾರ್ಮಿಕರ ಹೊಸ ತಂತ್ರವೇ "ಘೇರೋ". ಘೇರೋ ೧೯೬೭ ರ ಮಾರ್ಚ ಎರಡನೆಯ ವಾರದಲ್ಲಿ ಪಶ್ಚಿಮ ಬಂಗಾಲದಲ್ಲಿ ಜನ್ಮತಾಳಿದೆ. ಅಂದಿನಿಂದ ಅದು ಹೆಚ್ಚು ಹೆಚ್ಚು ಜನಪ್ರಿಯವಾಗುತ್ತಾ ಭಾರತದ ಎಲ್ಲ ರಾಜ್ಯಗಳಲ್ಲಿ ಹಬ್ಬುತ್ತಿದೆ. "ಘೇರೋ" ಜನಿಸಲು ಕಾರಣವೇನು ? ಕಾರ್ಮಿಕರಿಗೆ ಇಲ್ಲಿಯ ವರೆಗೆ ಪರಂಪರಾನುಗತವಾಗಿ

---

**ಉತ್ತರಗಳು : ಮರ್ಕಟರಾಯ**

| | |
|---|---|
| ೧. ಪುರಂಧರದಾಸ | ೨. ಬಬೂನ |
| ೩. ಚಿಪ್ಪಿ | ೪. ಡಾರ್ವಿನ್ |
| ೫. ಕಿಷ್ಕಿಂಧೆ | ೬. ಹನುಮಂತ |
| ೭. ಚಿಂಪಾಂಜಿ | ೮. ಆಗದೆ ಎಂದಿತು ಮರಿಕಪಿ |

---

ಬಳಿಕೆಯಲ್ಲಿ ಬಂದಿದ್ದ ಕ್ರಮಗಳು ಅವರ ಹೋರಾಟದಲ್ಲಿ ನ್ಯಾಯ ದೊರಕಿಸಲು ಅಸಮರ್ಥವಾದವೇ? ಯಾವ ಯಾವ ಕಾರಣಗಳು ಘೇರೋವಿನ ಜನನಕ್ಕೆ ಅನುವು ಮಾಡಿಕೊಟ್ಟವು?

ಭಾರತದಲ್ಲಿ ಸ್ವಾತಂತ್ರ್ಯಾರ್ಜನೆಯ ನಂತರ ಕಾರ್ಮಿಕ ದೃಷ್ಟಿಯಿಂದ ವಿವೇಚಿಸಿದರೇ ಅವನ ಜೀವನನಂಟೇ ಬಡತನವಾಗಿಯೂ, ನಿತ್ಯ ಜೀವನವು ಬಳಲಿಕೆ ಬವಣೆಯಾಗಿಯಾ ಪರಿಣಮಿಸಿದೆ ಎನ್ನುವುದರಲ್ಲಿ ಸಂದೇಹವಿಲ್ಲ. ಮೂರು ಪಂಚವಾರ್ಷಿಕ ಯೋಜನೆಗಳು ಪೂರ್ತಿಗೊಂಡಿದ್ದರೂ ನಿರುದ್ಯೋಗಿಗಳ ಸಂಖ್ಯೆ ಒಂದು ಕೋಟಿ ಇಪ್ಪತ್ತು ಲಕ್ಷಕ್ಕೆ ಏರಿದೆ. ನಾಲ್ಕನೇಯ ಪಂಚ ವಾರ್ಷಿಕ ಯೋಜನೆಯ ಅಂತ್ಯಕ್ಕೆ ನಿರುದ್ಯೋಗವು ಒಂದು ಕೋಟಿ ಎಂಭತ್ತು ಲಕ್ಷಕ್ಕೆ ಹೆಚ್ಚುವ ನೀರಿಕ್ಷೆಯನ್ನು ತಜ್ಞರು ವ್ಯಕ್ತಪಡಿಸುತ್ತಾರೆ. ಶ್ರಮಿಕನಿಗೆ ಕೆಲಸವಿಲ್ಲ. ಕೆಲಸ ಮಾಡುವವನಿಗೆ ಹೊಟ್ಟೆತುಂಬ ಅನ್ನ, ಮೈತುಂಬ ಬಟ್ಟೆ, ಇರಲು ಒಂದು ಗುಡಿಸಲು ಏನೂ ಇಲ್ಲ. ಕಳೆದ ೨೦ ವರ್ಷಗಳಲ್ಲಿ ಸರ್ಕಾರ ದಬ್ಬಾಳಿಕೆಯ ಫಲವಾಗಿ ಕಾರ್ಮಿಕರು ಪಟ್ಟಪಾಡು ವರ್ಣನಾತೀತ. ಪ್ರಿವೆಂಟಿವ್ ಡಿಟೆನ್ಷನ್ ಆಕ್ಟ ಮತ್ತು ಡಿಫೆನ್ಸ ಆಫ್ ಇಂಡಿಯಾ ಆಕ್ಟ ಇವುಗಳು ಕಾರ್ಮಿಕರನ್ನು, ಕಾರ್ಮಿಕ ಧುರೀಣರನ್ನು ಹೆಣಹಾಕಲು ಮಾಡಿದ ಕಾಯ್ದೆಗಳಂತೆಯೇ ಉಪಯೋಗಿಸಲಾಗಿವೆ. ಕಾರ್ಮಿಕನಿಗೆ ಶಾಂತಿಯಿಲ್ಲ ಅವನಿಗೆ ಸುಖವಿಲ್ಲ. ಹೀಗಿದೆ ದೇಶದ ಸ್ಥಿತಿ. ರಾಷ್ಟ್ರದ ಈ ವಾತಾವರಣದಲ್ಲಿ ನಾಲ್ಕನೆಯ ಚುನಾವಣೆಯ ಫಲವಾಗಿ ಪಶ್ಚಿಮ ಬಂಗಾಲದಲ್ಲಿ ಎಡಪಕ್ಷಗಳ ಸಂಯುಕ್ತ ರಂಗ ಅಧಿಕಾರಕ್ಕೆ ಬಂತು. ೧೯೬೭ ರ ಮಾರ್ಚ ೧ ರಂದು ಸಮಾಜವಾದೀ ಪ್ರಭಾವಿತ ಸಂಯುಕ್ತರಂಗ ಅಧಿಕಾರ ಸ್ವೀಕರಿಸಿದಾಗ ಪಶ್ಚಿಮ ಬಂಗಾಲದ ಜನತೆ ಹರ್ಷೋದ್ಗಾರಗಳಿಂದ ಹಬ್ಬವನ್ನೇ ಆಚರಿಸಿತು. ಆದರೆ ಅಲ್ಲಿಯ ಅಂದಿನ ಸ್ಥಿತಿ ಕಾರ್ಮಿಕರ ದೃಷ್ಟಿಯಿಂದ ಚಿಂತಾಜನಕವಾಗಿತ್ತು ಎಂದು ಹೇಳಬೇಕು. ಜನವರಿ ೧೯೬೭ ರಿಂದ ಮಾರ್ಚ ೧೯೬೭ ರ ವರೆಗೆ ೯೫ ಉದ್ದಿಮೆಗಳಲ್ಲಿ ಕೆಲಸಮಾಡುತ್ತಿದ್ದ ೨೩೦೦೦ ಕಾರ್ಮಿಕರನ್ನು "ಲೇ ಆಫ್" ಮಾಡಲಾಗಿತ್ತು; ೪೯ ಕಾರಖಾನೆಗಳಲ್ಲಿ ೧೦೦೦ಕ್ಕೂ ಮಿಕ್ಕಿ ಕಾರ್ಮಿಕರನ್ನು ಕೆಲಸದಿಂದ ತೆಗೆಯಲಾಗಿತ್ತು, ೮ ಕಾರ್ಖಾನೆಗಳು ಮುಚ್ಚಲ್ಪಟ್ಟಿದ್ದುದರಿಂದ ೭೦೦ ಕ್ಕೂ ಮಿಕ್ಕಿ ನೌಕರರು ನಿರುದ್ಯೋಗಿಗಳಾಗಿದ್ದರು. ಪಶ್ಚಿಮ ಬಂಗಾಲದಲ್ಲಿ ಮಾಲಕರ ಈ ಅನ್ಯಾಯ ಅತ್ಯಾಚಾರಗಳಿಗೆ ಬೇಸತ್ತು, ಕಂಗೆಟ್ಟಿದ್ದ ಕಾರ್ಮಿಕರು "ಘೇರೋ" ಅಸ್ತ್ರವನ್ನು ಉಪಯೋಗಿಸಿದರು. ಮಾರ್ಚ ೧೫ ರ ಸುಮಾರಿಗ "ಘೇರೋ" ಗಳ ಪ್ರಯೋಗ ಪಶ್ಚಿಮ ಬಂಗಾಲದ ಮೂಲೆ ಮೂಲೆಗಳಲ್ಲಿ ಪ್ರಾರಂಭವಾಯಿತು. ಸಂಯುಕ್ತರಂಗ ಸರ್ಕಾರ, ಸಮಾಜವಾದೀ ಸರ್ಕಾರವಾಗಿದ್ದುದು ಕಾರ್ಮಿಕರಿಗೆ ನವಚೈತನ್ಯವನ್ನು

ಒದಗಿಸಿತು. ಕಾರ್ಮಿಕ ಮಂತ್ರಿ ಶ್ರೀ ಸುಬೋಧ್ ಬೆನರ್ಜೀ — "ಘೇರೋ ಕಾರ್ಮಿಕರ ಕ್ರಮಬದ್ಧ ಹಕ್ಕು ಎಂದು ಕಾರ್ಮಿಕರ ನಾಯಕರಿಗೆ ಹೇಳಿದ ಮೇಲಂತೂ ಪಶ್ಚಿಮ ಬಂಗಾಲದಲ್ಲಿ ಕಾರ್ಮಿಕರ ಬಂಡವಾಳದ ಹೋರಾಟದ ಬಣ್ಣವೇ ಬದಲಾಯಿತು. ಉದ್ದಿಮೆದಾರ ರಿಗೆ ಈ ಹೊಸ ಅಸ್ತ್ರ ಒಂದು ಎದುರಿಸ ಲಾರದ ಆಯುಧವಾಗಿ ಪರಿಣಮಿಸಿದೆ. ಸಂಯುಕ್ತ ಸರ್ಕಾರವು ಕಾರ್ಮಿಕರ — ಉದ್ದಿಮೆದಾರರ ತಂಟೆಯಲ್ಲಿ ಪೋಲೀಸರು ಹಸ್ತಕ್ಷೇಪ ಮಾಡಬಾರದೆಂದು, ಸೂಚನೆ ಹೊರಡಿಸಿದ ಮೇಲಂತೂ ಉದ್ದಿಮೆದಾರ ರಿಗೆ ಭೀತಿಯೇ ಉಂಟಾಯಿತು.

ಪಶ್ಚಿಮ ಬಂಗಾಲದ ಮುಖ್ಯ ಮಂತ್ರಿ ಗಳಾದ ಶ್ರೀ ಅಜಾಯ್ ಮುಖರ್ಜಿಯವ ರಿಗೆ ಉದ್ದಿಮೆದಾರರಿಂದ ದೂರು ಹೋಯಿ ತು. ಘೇರೋ ರಾಷ್ಟ್ರದ ವಾತಾವರಣವನ್ನೇ ಬದಲಾಯಿಸಿ ಬಿಟ್ಟಿತು. ರಾಷ್ಟ್ರದ ಎಲ್ಲ ಭಾಗಗಳ ಕಣ್ಣು ಪಶ್ಚಿಮ ಬಂಗಾಲದಲ್ಲಿ ನಡೆದಿದ್ದ 'ಘೇರೋ'ಗಳ ಮೇಲೆಯೇ ಇತ್ತು. ಅನೇಕ ಪತ್ರಿಕೆಗಳು ತಮ್ಮ ಸಂಪಾದಕೀಯಗಳ ಮೂಲಕ "ಘೇರೋ" ವಿನ ಬಗ್ಗೆ ವಿವಿಧ ಅಭಿಪ್ರಾಯವನ್ನು ಬರೆ ದವು. "ಹಿಂದೂ" ದಿನಪತ್ರಿಕೆಯು ತನ್ನ ಮಾರ್ಚ ೩೦, ೧೯೬೭ ಸಂಚಿಕೆಯಲ್ಲಿ "ಆತ್ಮಹತ್ಯಾ ಧೋರಣೆ" ಎಂಬ ಶಿರೋನಾಮದಿಂದ — ಪಶ್ಚಿಮ ಬಂಗಾಲದಲ್ಲಿ ಬಂಗಾರದ ಮೊಟ್ಟೆಯಿಡುವ ಕೋಳಿಗಳಂತಿರುವ ಉದ್ದಿಮೆಗಳ ಬಗ್ಗೆ ಪಶ್ಚಿಮ ಬಂಗಾಲದ ಸರ್ಕಾರ ತಾಳಿರುವ ಧೋರಣೆ ನೋಡಿದರೆ, ಅವರು ಎಲ್ಲರೂ ಕೋಳಿಯನ್ನು ಕೊಯ್ಯುವ ಪ್ರಯತ್ನ ಮಾಡುತ್ತಿದ್ದಾರೋ ಎಂದು ತೋರುತ್ತದೆ. ಸರ್ಕಾರದ ಮುಖ್ಯಸ್ಥರೇ ಘೇರೋವನ್ನು ಪ್ರೋತ್ಸಾಹಿಸುತ್ತಿರವದನ್ನು ನೋಡಿದಾಗ ಇದರಿಂದ ಉದ್ದಿಮೆದಾರರಿಗೆ ಅಭದ್ರತೆ ಹೆಚ್ಚುತ್ತಿದೆ ಎಂದು ಹೇಳಬೇಕು....

.... ಇದನ್ನು ನೋಡಿದರೆ, ಕಾಯ್ದೆ— ಶಿಸ್ತುಗಳ ಬಗ್ಗ ಸರ್ಕಾರೀ ಜವಾಬ್ದಾರೀ ನಿರ್ವಹಣೆಯು ವಿಚಿತ್ರ ರೀತಿ ಇದಾಗಿದೆ ಎಂದು ತೋರತ್ತದೆ"— ಎಂದು ಅಭಿ ಪ್ರಾಯ ಪಟ್ಟಿತು.

### ವಾಣಿಜ್ಯ ಸಂಘದ ಹಾಗೂ ಆಡಳಿತಾ ಅಧಿಕಾರಿಗಳ ದೃಷ್ಟಿ

ಕಲಕತ್ತಾದಲ್ಲಿಯ ವಾಣಿಜ್ಯ ಸಂಘದ ವಕ್ತಾರನೊಬ್ಬನು "ಘೇರೋ" ಬಗ್ಗೆ ತನ್ನ ಅಭಿಪ್ರಾಯ ವ್ಯಕ್ತ ಪಡಿಸುತ್ತಾ.... "ಘೇರೋ ಕಾಯ್ದೆ ಬಾಹಿರವಷ್ಟೇ ಅಲ್ಲ. ಎಲ್ಲ ಕೇಂದ್ರ ಕಾರ್ಮಿಕ ಸಂಘಗಳೂ ಒಪ್ಪಿರುವ "ಶಿಸ್ತಿನ ನಿಯಮಗಳ ವಿರುದ್ಧ ವಿದೆ ಕೆಲಸದಿಂದ ನಿವೃತ್ತಗೊಳಿಸುವದು, ಕೆಲಸದಿಂದ ತೆಗೆಯುವದು. ಇದು ಇಂಡ ಸ್ಟ್ರಿಯಲ್ ಡಿಸ್ಪ್ಯೂಟ್ಸ ಆಕ್ಟ'ದ ಅನು ಸಾರ ಮಾಡಬೇಕಾಗುತ್ತದೆ. ಇವುಗಳಲ್ಲಿ ಅಂತರವಾದರೆ ಉದ್ದಿಮೆ ನ್ಯಾಯಾಲಯ ಗಳಿವೆ. ಸರ್ಕಾರವು ಉದ್ದಿಮೇದಾರರನ್ನು ನೌಕರಿಯಿಂದ ಮುಕ್ತಗೊಳಿಸುವಾಗ ಆಗಲಿ, ಉದ್ದಿಮೆಯನ್ನು ಮುಚ್ಚಬೇಕಾ

ದಾಗ ಆಗಲಿ ನಿರ್ಬಂಧ ಉಪಯೋಗಿಸ ಬೇಕೆಂದು ಸೂಚನೆ ನೀಡುತ್ತದೆ. ಹೀಗಿರುವಾಗ ಕಾರ್ಮಿಕ ಸಂಘಗಳು, 'ಶಿಸ್ತಿನ ನಿಯಮ'ಗಳಿಗೆ ಅಂಟಿಕೊಳ್ಳುವಂತೆ ಏಕೆ ನಿರ್ದೇಶಿಸಬಾರದು, ಘೋರೋ ಹಾಗೂ ಅಶಿಸ್ತು, ಆಡಳಿತ ಹಾಗೂ ತಾಂತ್ರಿಕ ವರ್ಗಕ್ಕೆ ತೊಂದರೆ ಮಾಡುತ್ತದೆ. ಕಾರ್ಮಿಕರಿಗೆ ತೊಂದರೆಗಳಿದ್ದರೆ ಘಟನಾತ್ಮಕ ರೀತಿಯಲ್ಲಿ ಅವುಗಳನ್ನು ಬಗೆಹರಿಸಿಕೊಳ್ಳಬಹುದು. ಕಾರ್ಮಿಕರು ಹೇಗೆ ಪ್ರಜೆಗಳೋ ಹಾಗೆಯೇ ಆಡಳಿತ ವರ್ಗದವರೂ ಪ್ರಜೆಗಳಾದ್ದರಿಂದ ಅವರಿಗೂ ಸರ್ಕಾರದಿಂದ ಸಂರಕ್ಷಣೆ ಪಡೆಯುವ ಹಕ್ಕಿದೆ" ಎಂದಿದ್ದಾನೆ. ವಣಿಕ ಸಂಘದ ಧುರೀಣನ ದೃಷ್ಟಿ ಹೀಗಿರುವಾಗ ಆಡಳಿತ ದೃಷ್ಟಿಯನ್ನು ಪ್ರತಿಬಿಂಬಿಸುವ ಓರ್ವ ಆಡಳಿತಾಧಿಕಾರಿಯ ಅಭಿಪ್ರಾಯವನ್ನು ನೋಡೋಣ.

"ಘೇರೋಗಳಿಗೆ ಮುಖ್ಯವಾಗಿ ನಾಲ್ಕು ಕಾರಣಗಳಿವೆ. (೧) ಕಾರ್ಮಿಕರು ವಿಶ್ವಾಸವನ್ನು ವಹಿಸಿದ್ದ ಕಾರ್ಮಿಕವಾದೀ ಪಕ್ಷ ಅಧಿಕಾರಕ್ಕೆ ಬಂದುದರ ಫಲವಾಗಿ ಕಾರ್ಮಿಕರಲ್ಲಿ ಉಂಟಾಗಿರುವ ಸ್ವಾಭಾವಿಕ ಚೈತನ್ಯ (೨) ಕಾರ್ಮಿಕರ ತಂಟೆಗಳಲ್ಲಿ ಕಾಂಗ್ರೆಸ್ಸ ಸರ್ಕಾರವಿದ್ದಾಗ ಪೋಲಿಸರು ಹಸ್ತಕ್ಷೇಪ ಮಾಡುತ್ತಿದ್ದರೆಂಬ ತಪ್ಪುಕಲ್ಪನೆ (೩) 'ಘೇರೋ' ಮುಂತಾದ ಅಕ್ರಮ ಪ್ರತಿಭಟನೆಗಳು ಪ್ರಜಾತಂತ್ರಕ್ಕೆ ಕೊಡಲಿ ಪೆಟ್ಟು ಕೊಟ್ಟೀತೆಂಬುದನ್ನು ಅರಿಯದಿರುವಿಕೆ (೪) ಕಾರ್ಮಿಕರ ಸಮಸ್ಯೆಗಳನ್ನು ಬಗೆಹರಿಸುವದರಲ್ಲಿ ಆಗುವ ಅನಿರ್ದಿಷ್ಟ ವಿಲಂಬ. ಈ ಕಾರಣಗಳಿಂದ ಪ್ರಾರಂಭವಾಗಿರುವ 'ಘೇರೋ' ಗಳು ಮುಂದುವರಿದರೆ ಅದು ಕಾರ್ಮಿಕ ಸಂಘಟನೆಗೆ ಪೆಟ್ಟು ಕೊಡಬಹುದು. ಘೇರೋಗಳಿಂದ ತಮ್ಮ ಸಂಕಷ್ಟಗಳು ನಿವಾರಣೆಯಾದರೆ ಕಾರ್ಮಿಕರು ಕಾರ್ಮಿಕ ಸಂಘಗಳ ಸದಸ್ಯರೇಕಾಗಬೇಕು? ಆದರೆ ಒಂದು ಮಾತು ನಿಜ. 'ಘೇರೋ' ತಕ್ಷಣ ಫಲ ಒದಗಿಸಿದರೂ ಅದು ಒಂದಲ್ಲ ಒಂದು ರೀತಿಯಲ್ಲಿ ಅರಾಜಕತೆಗೆಡೆಕೊಡುತ್ತದೆ.

ಈ ರೀತಿಯಾಗಿ ಉದ್ದಿಮೆದಾರರ ಪ್ರತಿನಿಧಿಗಳಾದ ವಣಿಕ ಸಂಘದ ವಕ್ತಾರ ಹಾಗೂ ಆಡಳಿತಾಧಿಕಾರಿ "ಘೇರೋ" ಅಕ್ರಮವಾದದ್ದು, ಅದು ಪ್ರಜಾಸತ್ತೆಗೆ ಕೊಡಲಿ ಪೆಟ್ಟಾಗಿ ಪರಿಣಮಿಸಬಹುದು ಎನ್ನುತ್ತಾರೆ. ಈ ಅಭಿಪ್ರಾಯಗಳಿಗೆ ಪಶ್ಚಿಮ ಬಂಗಾಲದ ಮುಖ್ಯ ಮಂತ್ರಿಗಳ ಪ್ರತಿ ಕ್ರಿಯೆಯನ್ನು ಪರಿಶೀಲಿಸೋಣ.

### ಮಂತ್ರಿಗಳ ಅಭಿಪ್ರಾಯಗಳು

ಪಶ್ಚಿಮ ಬಂಗಾಲದ ಮುಖ್ಯ ಮಂತ್ರಿಗಳಾದ ಶ್ರೀ ಅಜಾಯ್ ಮುಖರ್ಜಿಯವರು ತಮ್ಮ ರಾಜ್ಯದಲ್ಲಿ ಬೆಳೆಯುತ್ತಿರುವ "ಘೇರೊ" ಗಳ ಬಗ್ಗೆ ಅಭಿಪ್ರಾಯ ವ್ಯಕ್ತಪಡಿಸುತ್ತಾ........ ಕೆಲ ಹಿತಾಸಕ್ತಿಗಳು ಪಶ್ಚಿಮ ಬಂಗಾಲದ ಉದ್ದಿಮೆ. ರಂಗದಲ್ಲಿ "ಘೇರೋ" ಗಳ ಬಗ್ಗೆ ದೊಡ್ಡ ರಂಭಾ

ಟವನ್ನೇ ನಡೆಸಿದ್ದಾರೆ. ಸಂಯುಕ್ತ ರಂಗವು ಅಧಿಕಾರ ವಹಿಸಿ ಕೊಂಡ ನಂತರ ಈ ತರಹದ ಪ್ರತಿಭಟನೆ ನಡೆಧಿದ್ದರೂ, ಕಾರ್ಮಿಕ ಸಮಸ್ಯಾ ಪರಿಹಾರಕ್ಕೆ ಪ್ರತಿಭಟನೆ ನಡೆಸುವದು ಉದ್ದಿಮೆ ರಂಗಕ್ಕೆ ಹೊಸದೂ ಅಲ್ಲ, ಅದರಲ್ಲಿ ವಿಚಿತ್ರವಾದದ್ದು ಏನೂ ಇಲ್ಲ, ಅದರಿಂದ ಭಯಪಡಬೇಕಾಗಿಯೂ ಇಲ್ಲ. ಆದರೆ ಉದ್ದಿಮೆ ಮಾಲಕರು ಔದ್ಯೋಗಿಕ ಸಂಭಂಧದ ಬಗ್ಗೆ ಹೊಸ ಧೋರಣೆ ತಾಳುವದು ಅವಶ್ಯ. ತಾವೂ ಉದ್ದಿಮೆಯ ಅವಿಭಾಜ್ಯ ಶಕ್ತಿಗಳು ಎಂಬ ಭಾವನೆ ಕಾರ್ಮಿಕರಲ್ಲಿ ಮೂಡಿ ಬರುವಂತಿರಬೇಕು ಉದ್ದಿಮೆದಾರರು ಕಾರ್ಮಿಕರ ಬಗ್ಗೆ ತೋರುವ ಮನೋವೃತ್ತಿ. ಮಾಲಿಕರ ಧೋರಣ ಹಾಗಾದಾಗ ಔದ್ಯೋಗಿಕ ಶಾಂತಿ ಸಾಧ್ಯ. ಇದರೊಡನೆ ಕಾರ್ಮಿಕರು, ಉದ್ದಿಮೆದಾರರು ಇಬ್ಬರೂ ಅವರವರಲ್ಲಿಯ ಲೋಪಗಳನ್ನು ಸರಿತಿದ್ದಿ, ಹೊಂದಿಕೊಂಡು ಹೋಗುವ ಪ್ರವೃತ್ತಿ ಬೆಳೆಸಿಕೊಳ್ಳಬೇಕು" ಎಂದಿದ್ದಾರೆ

ಪಶ್ಚಿಮ ಬಂಗಾಲದ ಶ್ರಮಿಕ ಮಂತ್ರಿ ಶ್ರೀ ಸುಭೋದ್ ಬೆನರ್ಜಿ ಬಹಳ ಖಚಿತ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.– "ನಾವು ಕಾರ್ಮಿಕ ಧೋರಣೆಯನ್ನು ಬದಲಾಯಿಸುವದಿಲ್ಲ. ಯಾವ ವಲಯಗಳಿಂದ ಒತ್ತಾಯ ಬಂದರೂ ನಮ್ಮ ನೀತಿಗೆ ನಾವು ಅಂಟಿಕೊಳ್ಳುತ್ತೇವೆ. ಘೇರೋ ಚಳುವಳಿ ಕಾರ್ಮಿಕರ ಕ್ರಮ ಬದ್ಧ ಹಕ್ಕು. ಅದು ಪ್ರಜಾಸತ್ತಾತ್ಮಕ ಕಾರ್ಮಿಕ ಸಂಘಗಳ ಹಕ್ಕು. ಕಾರ್ಮಿಕರ ಚಳುವಳಿ ಕಾಯ್ದೆ ಹಾಗೂ ಶಾಂತಿಯ ಭಂಗವನ್ನು ಎಲ್ಲಿಯ ವರೆಗೆ ಉಂಟುಮಾಡುವದಿಲ್ಲವೋ ಅಲ್ಲಿಯ ವರೆಗೆ ಅವರಲ್ಲಿ ಸರ್ಕಾರ ಹಸ್ತಕ್ಷೇಪ ಮಾಡುವದಿಲ್ಲ. ಎಲ್ಲಿಯ ವರೆಗೆ ಘೇರೋ ಪ್ರಜಾಸತ್ತಾತ್ಮಕ ಮತ್ತು ಕ್ರಮಬದ್ಧವಾಗಿರುತ್ತದೆಯೋ ಅಲ್ಲಿಯವರೆಗೆ ಸರ್ಕಾರವು ಘೇರೋ ನಿಲ್ಲಿಸಲು ಪೋಲೀಸರನ್ನು ಕಳುಹಿಸುವದಿಲ್ಲ. ಕಾರ್ಮಿಕರ ಕುಂದು ಕೊರತೆಗಳು, ಸಮಸ್ಯೆಗಳು ನಿವಾರಿಸಿಕೊಳ್ಳಲು ಯಾವ ವಿಧದ ಚಳುವಳಿ ಹೂಡಬೇಕು ಎಂಬುದರ ಬಗ್ಗೆ ನಿರ್ಧರಿಸಲು ಅವರಿಗೆ ಅಧಿಕಾರವಿದೆ. ಶ್ರೀ ಬ್ಯಾನರ್ಜಿಯವರು ಪಶ್ಚಿಮ ಬಂಗಾಲದ ಉದ್ದಿಮೆದಾರರಿಗೂ ಮುನ್ಸೂಚನೆ ಕೊಟ್ಟಿದ್ದಾರೆ, ಘೇರೋಗಳು ಮುಂದುವರಿಯಲು ಸರ್ಕಾರ ಅವಕಾಶ ಕೊಟ್ಟರೆ ತಾವು ಉದ್ದಿಮೆಗಳನ್ನು ಬೇರೆ ರಾಜ್ಯಗಳಿಗ ಸ್ಥಳಾಂತರಿಸುವದಾಗಿ ಕೆಲ ಉದ್ದಿಮೆದಾರರು ಸರ್ಕಾರಕ್ಕೆ ಬೆದರಿಕೆ ಹಾಕಿದ್ದಾರೆ. ಅದಕ್ಕೆ ಉತ್ತರ ರೂಪವಾಗಿ ಶ್ರೀ ಬೆನರ್ಜಿ —"ನಮ್ಮ ಸರ್ಕಾರವು ಕಾರ್ಖಾನೆಗಳನ್ನು ಮುಚ್ಚುವದನ್ನಾಗಲೀ ಅವುಗಳನ್ನು ಸ್ಥಳಾಂತರಿಸುವದನ್ನಾಗಲೀ ಸಹಿಸುವದಿಲ್ಲ, ಪ್ರಸಂಗ ಬಂದರೆ ಯಂತ್ರಗಳನ್ನು ಇತರ ರಾಜ್ಯಗಳಿಗೆ ಸ್ಥಳಾಂತರ ಮಾಡುವದನ್ನು ನಿರ್ಬಂಧಿಸುತ್ತೇವೆ. ಆದರೆ ನಮ್ಮ ರಾಜ್ಯದಲ್ಲೇ ಬೇರೆಡೆಗೆ ಸ್ಥಳಾಂತರವಾಗಲೀ ಕಾರ್ಖಾನೆಯ ವಿಸ್ತರಣೆ ಯಾಗಲೀ

ಮಾಡುವದಿದ್ದರೆ ಅನುಮತಿ ನೀಡುತ್ತೇವೆ" ಎಂದು ಹೇಳಿದ್ದಾರೆ.

ಆಡಳಿತದ ಅನ್ಯಾಯ ಕಾರ್ಮಿಕ ನೀತಿ ಮತ್ತು ಕಾರ್ಮಿಕರಿಗೆ ಆಡಳಿತದ ಅನೀತಿಯಿಂದ ಆಗುತ್ತಿರುವ ಸಂಕಟ-ತೊಂದರೆಗಳೇ ಘೇರೋಗ ಮೂಲ. ಘೇರೋ ಚಳುವಳಿ ಪ್ರಾರಂಭವಾಗಿದ್ದರೆ ಅದಕ್ಕೆ ಕಾರ್ಮಿಕರನ್ನು ದೂರುವಂತಿಲ್ಲ. ಆಡಳಿತದಾರರ ನೀತಿಯೇ ಇದಕ್ಕೆ ಕಾರಣ" ಎಂದು ವಿವರಿಸಿದ್ದಾರೆ. ಪಶ್ಚಿಮ ಬಂಗಾಲದ ಮುಖ್ಯ ಮಂತ್ರಿ ಹಾಗೂ ಶ್ರಮಿಕ ಮಂತ್ರಿಗಳ ಅಭಿಪ್ರಾಯ ಹೀಗಿದ್ದರೆ ಕೇಂದ್ರ ಸಚಿವರ ಪ್ರತಿಕ್ರಿಯೆಗಳನ್ನು ವೀಕ್ಷಿಸೋಣ.

ಕೇಂದ್ರದ ಶ್ರಮಿಕ ಮಂತ್ರಿ ಶ್ರೀ ಜಯಸುಖ್‌ಲಾಲ್ ಹಾಥಿಯವರು ಮೇ ತಿಂಗಳು ನಡೆದ ರಾಜ್ಯಗಳ ಶ್ರಮಿಕ ಮಂತ್ರಿಗಳ ಸಮ್ಮೇಳನದ ಅಧ್ಯಕ್ಷೀಯ ಭಾಷಣದಲ್ಲಿ "ಘೇರೋ ಚಳುವಳಿಯು ಉತ್ಪಾದನೆಯನ್ನು ಕಡಿತಗೊಳಿಸುವದಲ್ಲದೆ ಆಡಳಿತಾಧಿಕಾರಿಗಳ ಹಾಗೂ ಮೇಲ್ವಿಚಾರಕರ ಮೇಲೆ ಘಾತಕ ಪರಿಣಾಮ ಉಂಟು ಮಾಡಬಹುದು. ಕಾರ್ಮಿಕರು ನ್ಯಾಯವಾದ ಬೇಡಿಕೆಗಳನ್ನು ಪಡೆಯಲು ಹೋರಾಡಬಹುದು. ಆದರೆ ಅವರ ನ್ಯಾಯವಾದ ಬೇಡಿಕೆಗಳೂ ಪರಿಹಾರಕ್ಕೆ ರಚನಾತ್ಮಕ ವಿಧಾನವನ್ನು ರೂಪಿಸಬೇಕು. ಅವರು ಪ್ರತಿಭಟನಾತ್ಮಕ ಆಂದೋಲನೆಯ ಮಾರ್ಗದಿಂದ ದೂರವಾಗಿರುವಂತೆ ಶ್ರಮಿಸಬೇಕು ಎಂದು ಹೇಳಿದರಲ್ಲದೆ. "ಈ ಸಮಸ್ಯೆ ಉತ್ಪಾದನೆಯನ್ನು ಕ್ಷೀಣಿಸುತ್ತದೆ. ನೌಕರಿಯ ಭದ್ರತೆಗೆ ಧಕ್ಕೆ ತರುತ್ತದೆ. ಈ ಕ್ಲಿಷ್ಟ ಸ್ಥಿತಿಯಿಂದ ಪಾರಾಗಲು ಒಂದು ಸೂಕ್ತ ಸೂತ್ರವನ್ನು ಕಂಡು ಹಿಡಿಯದಿದ್ದರೆ ಸಾಮಗ್ರಿಗಳ ಕೊರತೆ, ಏರುತ್ತಿರುವ ಬೆಲೆಗಳು, ಔದ್ಯೋಗಿಕ ಅಶಾಂತಿ ಬಗೆಹರಿಯಲು ಸಾಧ್ಯವಿಲ್ಲ" ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಘೇರೋಗಳ ನ್ಯಾಯ ಬದ್ಧತೆಯ ಬಗ್ಗೆ ವಿವರಿಸುತ್ತಾರೆ. "ಘೇರೋ ಕಾಯ್ದೆ ಬಾಹಿರವಾದದ್ದು. ಶಿಕ್ಷೆಗೆ ಗುನ್ನೆಯಾದ ಕಾರ್ಮಿಕರ ನ್ಯಾಯಬದ್ಧ ಹಕ್ಕಿನ ಕ್ರಮ ಘೇರೋ ಅಲ್ಲ" ಎಂದು ಹೇಳಿ "ಕಾರ್ಮಿಕರು ಘೇರೋದಲ್ಲಿ ತೊಡಗುವದನ್ನು ಹೇಗೆ ಕೇಂದ್ರಸರ್ಕಾರವು ಸಹಿಸುವದಿಲ್ಲವೋ ಹಾಗೆಯೇ ಮಾಲಿಕರು ನೌಕರರನ್ನು ತೊಂದರೆಗೆ ಈಡುಮಾಡಿದರೂ ಸಹಿಸುವದಿಲ್ಲ." ಎಂದು ಅಭಿಪ್ರಾಯ ಪಟ್ಟರು.

## ಆಂಧ್ರ ಸರ್ಕಾರದ ಧೋರಣ

ಆಂಧ್ರದ ಪ್ರಚಾರ ಹಾಗೂ ಶ್ರಮಿಕ ಮಂತ್ರಿ ಶ್ರೀ ಕೊಂಡಾಲಕ್ಷ್ಮಣ ಬಾಪೂಜಿಯವರು "ಘೇರೋವನ್ನು ಕಾರ್ಮಿಕ ಚಳುವಳಿಯ ಅಂಗೀಕೃತ ಕ್ರಮವೆಂದು ಸ್ವೀಕರಿಸುವುದು ಸಾಧ್ಯವಿಲ್ಲ. ಹಾಗೆ ಒಪ್ಪಿದರೆ ಚೀನದ "ಕೆಂಪುರಕ್ಷ"ರ ಚಳುವಳಿಯಂತಾದೀತು. ಆದ್ದರಿಂದ ಆಂಧ್ರ ಪ್ರದೇಶ ಸರ್ಕಾರವು ಕಾರ್ಮಿಕರು ಘೇರೋ

ಚಳುವಳಿಯನ್ನು ನಡೆಸಿ ಕೊಡುವದಿಲ್ಲ ಅಂತೆಯೇ ಆಡಳಿತ ವರ್ಗವು ಕಾರ್ಮಿಕರನ್ನು ಅನ್ಯಾಯದಿಂದ ತೊಂದರೆಗೀಡು ಮಾಡುವದಕ್ಕೂ ಬಿಡುವದಿಲ್ಲ" ಎಂದು ತಮ್ಮ ಸರ್ಕಾರದ ಧೋರಣೆಯನ್ನು ವಿವರಿಸಿದ್ದಾರೆ.

## ಕೇರಳ ಮತ್ತು ಘೇರೋ

ಕೇರಳದ ಔದ್ಯಮಿಕ ಮಂತ್ರಿ ಶ್ರೀ ಟಿ ವಿ. ಥಾಮಸ್‌ರವರು ಕೇರಳ ಔದ್ಯೋಗಿಕ ನೀತಿಯನ್ನು ವಿವರಿಸುತ್ತಾ "ನಾವು ಘೇರೋವನ್ನು ಪ್ರೋತ್ಸಾಹಿಸುವದಿಲ್ಲ; ಕೇರಳವು ತನ್ನ ಶಕ್ತಿ ಮೀರಿ ಶ್ರಮಿಸಿ ಸಂಪು, ಹೊರಕೀಲಿ ಮುಂತಾದವುಗಳಿಗೆ ಅವಕಾಶ ಕೊಡದ ಔದ್ಯೋಗಿಕ ಶಾಂತಿಗೆ ಶ್ರಮಿಸುವದಾದ್ದರಿಂದ ನಮ್ಮ ರಾಜ್ಯದಲ್ಲಿ ಘೇರೋದ ಅವಶ್ಯಕತೆಯೇ ಬೀಳುವದಿಲ್ಲ. ನಾವು ಶ್ರೀಘ್ರದಲ್ಲೇ ಔದ್ಯೋಗಿಕ ಸಂಬಂಧದ ಮಸೂದೆಯನ್ನು ಜಾರಿಗೆ ತರುವವರಿದ್ದೇವೆ. ಅದರಲ್ಲಿ ಒಂದೇ ಉದ್ದಿಮೆಯಲ್ಲಿ ಕಾರ್ಮಿಕ ಸಂಘಗಳು ಬಹುಸಂಖ್ಯೆಯಲ್ಲಿರುವದನ್ನು ಖಂಡಿಸಿದ್ದೇವೆ. ಶೇಖಡ ೫೧ ರಷ್ಟು ನೌಕರರು ಸೇರಿರುವ ಕಾರ್ಮಿಕ ಸಂಘಕ್ಕೆ ಮನ್ನಣೆ ನೀಡುವ ಸೂಚನೆ ಅದರಲ್ಲಿದೆ. ಕಾರ್ಮಿಕರ ಸಮಿತಿಯನ್ನೊಂದು ರಚಿಸುವ ಯೋಜನೆಯೂ ಇದೆ. ಇದು ಜಾರಿಗೆ ಬಂದರೆ ಕಾರ್ಮಿಕರು ಉದ್ದಿಮೆಯ ಆಡಳಿತದಲ್ಲಿ ಭಾಗವಹಿಸಿದಂತೆಯೇ ಆಗುತ್ತದೆ." ಎಂದು ಹೇಳಿದ್ದಾರೆ.

## ಮದ್ರಾಸ ಸರ್ಕಾರದ ನಿಲುಮೆ

ಮದ್ರಾಸಿನ ಶ್ರಮಿಕ ಮಂತ್ರಿ ಶ್ರೀ. ಎಸ್. ಮಾಧವನ್‌ರವರು "ಮದ್ರಾಸ್ ಸರ್ಕಾರವು ಘೇರೋವನ್ನು ನಿರ್ಬಂಧಿಸುವದು ಏಕೆಂದರೆ ಘೇರೋಗಳಿಂದ ಹಿಂಸಾಕೃತಿಗಳಾಗುವ ಸಂಭವಗಳಿವೆ. ಆದರೆ ನಮ್ಮ ಸರ್ಕಾರವು. ಕಾರ್ಮಿಕರು ತಮ್ಮ ಬೇಡಿಕೆಗಳ ಪರಿಹಾರಕ್ಕಾಗಿ ವರ್ಷಾನುಗಟ್ಟಲೆ ಕಾಯುವದನ್ನು ಪ್ರೋತ್ಸಾಹಿಸುವದಿಲ್ಲ. ಕಾರ್ಮಿಕರನ್ನೊಳಗೊಂಡ ಒಂದು ಸಮಿತಿಯನ್ನು ರಚಿಸುವ ಯೋಜನೆಯನ್ನು ಸರ್ಕಾರವು ತಾಳಿದೆ. ಈ ಸಮಿತಿಯ ಸಲಹೆ ಪಡೆದು ಎಲ್ಲ ಸಮಸ್ಯೆಗಳನ್ನು ಬಗೆ ಹರಿಸಬೇಕೆಂಬ ಅಭಿಪ್ರಾಯ ಸರ್ಕಾರದ್ದಾಗಿದೆ." ಎಂದು ತಮ್ಮ ಸರ್ಕಾರದ ನಿಲುಮೆಯನ್ನು ವಿವರಿಸಿದ್ದಾರೆ.

## ಘೇರೋ ಕಾಯ್ದೆ ಬದ್ಧವೇ? ಅದು ಧರ್ಮಸಮ್ಮತವೇ ?

ಯಾವುದೇ ಕೃತಿಯು ಯೋಗ್ಯತೆಯನ್ನು ನಿರ್ಧರಿಸಬೇಕಾದರೆ ಅದನ್ನು ಎರಡು ದೃಷ್ಟಿಗಳಿಂದ ನೋಡ ಬೇಕಾಗುತ್ತದೆ. ಒಂದು ಅದರ ಕಾಯ್ದೆ ಬದ್ಧತೆ, ಇನ್ನೊಂದು ಅದರ ಧರ್ಮ ಸಮ್ಮತಿ. ಏಕೆಂದರೆ ಕೇವಲ ಕಾಯ್ದೆ ಬದ್ಧವಾದದು ಧರ್ಮಸಮ್ಮತಿ ಪಡೆದ ಕೃತಿ ಎಂದು ಹೇಳಲು ಬರುವುದಿಲ್ಲ. ಅದರಿಂದಾಗಿ ಘೇರೋವನ್ನು ಈ ಎರಡೂ ದೃಷ್ಟಿಗಳಿಂದ ವಿವೇಚಿಸಬೇಕು.

ಕಾಯ್ದೆಯ ದೃಷ್ಟಿಯಿಂದ ಈ ಕೃತಿಯನ್ನು ಪರಿಶೀಲಿಸಿದರೆ "ಘೇರೋ" ವನ್ನು ಇಂಡಿಯನ್ ಪೀನಲ್ ಕೋಡಿನ ೩೪೯ ನೇಯ ಕಲಮಿನ ಕಕ್ಷೆಯಲ್ಲಿ ತರಬಹುದು. ಈ ಕಲಮಿನಲ್ಲಿ "ಯಾರೇ ಆಗಲಿ ಸ್ವಯಂಕೃತಿಯಿಂದ ಯಾವುದೇ ದಿಕ್ಕಿನಲ್ಲಿ ಹೋಗುವದನ್ನು ಪ್ರತಿಬಂಧಿಸಿದರೆ ಆಗ ಆವ್ಯಕ್ತಿಯನ್ನು ಅಕ್ರಮವಾಗಿ ಬಂಧಿಸಿದಂತಾಗುತ್ತದೆ. ಎಂದಿದೆ. ಹೀಗೆ ಅಕ್ರಮವಾಗಿ ಜಲನವನ್ನು ನಿರ್ಬಂಧಿಸುವವನಿಗೆ ಒಂದು ತಿಂಗಳಿನ ಸಾದಾಶಿಕ್ಷೆ ಅಥವಾ ರೂ ೫೦೦.೦೦ ದಂಡ ಅಥವಾ ಎರಡುಕೂಡಿ ದಂಡನೆಯನ್ನು ನೀಡಬಹುದು. ಇದು ಕಾಯ್ದೆಯ ಒಂದು ದೃಷ್ಟಿ ನಾವು ಕಾಯ್ದೆಯ ಇನ್ನೊಂದು ದೃಷ್ಟಿಯಿಂದ ಇದೇ ಸಮಸ್ಯೆಯ ಇನ್ನೊಂದು ಮುಖವನ್ನು ಪರಿಶೀಲಿಸೋಣ. ನಮ್ಮ ಪ್ರಜಾರಾಜ್ಯದಲ್ಲಿ ಪ್ರಜೆಗಳು ಹೇಗೆ ಕೆಲಕಾಯ್ದೆಗಳಿಗೆ ಕಟು ಬದ್ಧರೋ ಅಂತೆಯೇ ರಾಜ್ಯಗಳೂ ಕೆಲ ನಿಯಮಗಳಿಗೆ ನೈತಿಕವಾಗಿ ಬಂಧನಕ್ಕೊಳಗಾಗಿರುತ್ತದೆ. ಪ್ರಜೆಗಳ ಬೇಕಾಯ್ದೆ ವರ್ತನೆಗೆ ಶಿಕ್ಷೆ ಇದೆ. ಆದರೆ ರಾಜ್ಯಗಳು ಕೆಲನ್ಯಾಯ ಬದ್ಧ ಸೂತ್ರಗಳ ವಿರುದ್ಧ ನಡೆದರೆ ಅದಕ್ಕೆ ಶಿಕ್ಷೆಯಿಲ್ಲ, ಆದರೆ ಆ ರಾಜ್ಯದ ಆಡಳಿತೆ ನಡೆಸುವ ರಾಜಕೀಯ ಪಕ್ಷಗಳು ಪ್ರಜೆಗಳ ಮುಂದೆ ಚುನಾವಣೆಗೆ ನಿಂತಾಗ ಅವರ ಕೃತಿಯ ಫಲವನ್ನು ಅವರು ಉಣ್ಣಬೇಕಾಗುತ್ತದೆಯಷ್ಟೆ ಆದರೆ ಸರ್ಕಾರವೇ ಕಾಯ್ದೆಯ ಅನ್ವಯ ನಡೆಯದಿದ್ದರೆ ಪ್ರಜೆಗಳು ಹೀಗೆ ಕಾಯ್ದೆಯನ್ನು ಗೌರವಿಸುತ್ತಾರೆ? ಇದು ಬಹಳ ಕ್ಲಿಷ್ಟ ಪರಿಸ್ಥಿತಿ. ಇದು ಇನ್ನೊಂದು ಮುಖ. ಈ ಸ್ಥಿತಿಯ ಸಂಪೂರ್ಣ ವಿವೇಚನೆ ಮಾಡಿದಾಗ ಕೇಂದ್ರ ಸರ್ಕಾರವೇ ಆಗಲಿ, ರಾಜ್ಯಸರ್ಕಾರಗಳೇ ಆಗಲಿ ರಾಜ್ಯಂಗದ "ರಾಜ್ಯ ಧೋರಣೆಗಳ ಮಾರ್ಗದರ್ಶಕ ನೀತಿಯನ್ನು ಪರಿಪಾಲಿಸಬೇಕು. ವ್ಯಕ್ತಿಗಳನ್ನು ರಾಜ್ಯಾಂಗದ ಮೂಲಭೂತ ಹಕ್ಕುಗಳು ನಿಯಂತ್ರಿಸಿದರೆ, ರಾಜ್ಯಗಳಿಗೆ ಮಾರ್ಗದರ್ಶನ ನೀಡುವದು "ರಾಜ್ಯ ಧೋರಣೆಗಳ ಮಾರ್ಗದರ್ಶಕ ನೀತಿ, ನಮ್ಮ ರಾಜ್ಯಂಗದ ನಿಯಮ ೩೭ ರಂತೆ "ರಾಜ್ಯಗಳ ಧೋರಣೆಯ ಮಾರ್ಗದರ್ಶಕ ನೀತಿಯನ್ನು ನ್ಯಾಯಾಲಯದಲ್ಲಿ ಪ್ರತಿಪಾದಿಸಲು ಬರುವದಿಲ್ಲವಾದರೂ ಈ ತತ್ವಗಳು ದೇಶದ ಆಡಳಿತದ ದೃಷ್ಟಿಯಿಂದ ಮೂಲಭೂತ ವಿದ್ದು ಈ ತತ್ವಗಳನ್ನು ಕಾಯ್ದೆ ರಚನೆಯಲ್ಲಿ ಪಾಲಿಸಬೇಕು" ಎಂದಿದೆ. ನಿಯಮ ೩೮, ೩೯, ೪೧, ೪೨, ೪೩ ಗಳನ್ನು ಪರಿಶೀಲಿಸಿದರೆ ಕೆಳಗಿನ ಅಂಶಗಳು ವ್ಯಕ್ತವಾಗುತ್ತದೆ.

೧) ರಾಜ್ಯದ ಎಲ್ಲ ಸಂಸ್ಥೆಗಳಲ್ಲಿ ಸಾಮಾಜಿಕ ಆರ್ಥಿಕ ಹಾಗೂ ರಾಜಕೀಯ ನ್ಯಾಯವನ್ನು ಒದಗಿಸುವಂತಹ ಸಮಾಜವನ್ನು ರಚಿಸಿ, ಅದನ್ನು ರಕ್ಷಿಸಿ, ಜನತೆಯ ಕಲ್ಯಾಣಕ್ಕಾಗಿ ರಾಜ್ಯವು ಶ್ರಮಿಸಬೇಕು.

೨) ರಾಜ್ಯವು ತನ್ನ ಧೋರಣೆಯ ನಿರೂಪಣೆಯಲ್ಲಿ ಮುಖ್ಯವಾಗಿ ಅ) ಪ್ರಜೆಗಳು

ಅಂದರೆ ಸಮವಾಗಿ ಸ್ತ್ರೀಯರು ಹಾಗೂ ಪುರುಷರು ತಮ್ಮ ಜೀವನೋಪಾಯದ ಮಾರ್ಗವನ್ನು ಪಡೆಯುವ ಹಕ್ಕನ್ನು ಹೊಂದಿದ್ದಾರೆ. ಆ) ಸಮಾಜದ ಸಂಪನ್ಮೂಲಗಳನ್ನು ಪಡೆಯುವದು ಹಾಗೂ ನಿಯಂತ್ರಿಸುವದು ಸಾಮಾನ್ಯರ ಒಳ್ಳೆಯದನ್ನು ಸಾಧಿಸುವಂತೆ ವಿತರಣೆ ಮಾಡಬೇಕು.

ಇ) ಆರ್ಥಿಕ ಪದ್ಧತಿಯು ಸಂಪತ್ತಿನ ಕೇಂದ್ರೀಕರಣಕ್ಕಾಗಲಿ, ಸಾಮಾನ್ಯರ ಅಹಿತವಾಗುವ ರೀತಿಯ ಉತ್ಪಾದನೆಗಾಗಲಿ ಅವಕಾಶ ಕೊಡದಾರದು.

ಈ) ಸ್ತ್ರೀ-ಪುರುಷರಿಗೆ ಸಮಾನವಾದ ಕೆಲಸಕ್ಕೆ ಸಮಾನವಾದ ವೇತನ ಇರಬೇಕು.

ಉ) ಕೆಲಸ ಮಾಡುವ ಹಕ್ಕು, ಶಿಕ್ಷಣ ಪಡೆಯುವ ಹಕ್ಕು; ನಿರುದ್ಯೋಗ ಮುದಿ ವಯಸ್ಸು ರೋಗ ಅಂಗವಿಕಲತೆ ಮುಂತಾದವುಗಳ ನಿವಾರಣೆಗೆ ಸಾರ್ವಜನಿಕ ಸಹಾಯಗಳನ್ನು ರಾಜ್ಯವು ದೊರಕಿಸಬೇಕು.

ಊ) ರಾಜ್ಯವು ನ್ಯಾಯವಾದ ಹಾಗೂ ಮಾನವೀಯ ಸ್ಥಿತಿಯನ್ನು ನೌಕರಿ ಹಾಗೂ ಮಾತೃತ್ವ ಪರಿಹಾರಗಳ ಬಗ್ಗೆ ದೊರೆಯುವ ಅವಕಾಶ ಕೊಡಬೇಕು.

ಋ) ರಾಜ್ಯವು ಕಾಯ್ದೆಯನ್ನು ಮಾಡುವದರಿಂದಾಗಲೀ ಅಥವಾ ಮತ್ಯಾವದಾದರೂ ರೀತಿಯಿಂದಾಗಲೀ ಒಕ್ಕಲುತನ ಔದ್ಯೋಗಿಕ ಅಥವಾ ಇತರ ಕೆಲಸಗಾರರಿಗೆ ಕೆಲಸ, ಜೀವನ ವೇತನ, ಉಚಿತ ಜೀವನ ಮಟ್ಟವನ್ನು ಬದಗಿಸ ಬಲ್ಲ ನೌಕರಿಯ ಸ್ಥಿತಿ, ವಿರಾಮದ ಪೂರ್ಣ ವಿನಿಯೋಗ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಅವಕಾಶಗಳ ಪೂರ್ಣ ಲಾಭ ದೊರಕಿಸುವಂತೆ ಶ್ರಮಿಸಬೇಕು. ಅದರಲ್ಲೂ ಗ್ರಾಮಗಳಲ್ಲಿ ಗೃಹಕೃಗಾರಿಕೆಯನ್ನು ವ್ಯಕ್ತಿಗಳ ಅಥವಾ ಸಹಕಾರೀ ತಳಹದಿಯ ಮೇಲೆ ಬೆಳಸಲು ಶ್ರಮಿಸಬೇಕು.

ಈ ಅಂಶಗಳಲ್ಲಿ ಒಂದಾದರೂ ಕಳೆದ ೩೦ ವರ್ಷಗಳ ಆಡಳಿತದ ಫಲವಾಗಿ ದೊರೆತಂತೆ ಕಾಣುವದಿಲ್ಲ. ಈ ಗುರಿಗಳ ಸಾಧನೆಯ ಬಗ್ಗೆ ಶ್ರಮಿಸುವುದಕ್ಕೆ ಬದಲಾಗಿ ಇದರ ವಿರುದ್ಧವಾಗಿ ವರ್ತಿಸಿ, ನಮ್ಮ ಶ್ರಮಿಕರ ಆರ್ಥಿಕ, ಸಾಮಾಜಿಕ, ರಾಜಕೀಯ ಪತನಕ್ಕೆ ಹಾದಿ ಮಾಡುತ್ತಿದೆ ನಮ್ಮ ಸರ್ಕಾರ. 'ಸಮವಾದ ಕೆಲಸಕ್ಕೆ ಸಮವಾದ ವೇತನ' ಕೇವಲ ಒಂದು ಘೋಷಣೆಯಾಗಿ ಪರಿಣಮಿಸಿದೆ. ರಾಷ್ಟ್ರದ ಸಂಪನ್ಮೂಲಗಳು, ಸಂಪತ್ತು ಕೆಲವೇ ಬಂಡವಾಳಶಾಹಿಗಳ ಹಸ್ತ ಗತವಾಗಿದೆ. ನೌಕರಿಯ ಸ್ಥಿತಿಗತಿಗಳು ಸುಧಾರಿಸಿಲ್ಲ. ಜೀವನದ ವೇತನದ ಮಾತಂತೂ ಕನಸಿನವೇ ಆಗಿದೆ. ಎಲ್ಲಕ್ಕಿಂತ ಶೋಚನೀಯವಾದ ವಿಷಯವೆಂದರೆ ಸರ್ಕಾರವು ಈ ಮಾರ್ಗದರ್ಶಕ ನೀತಿಗಳ ಅನ್ವಯ ಶ್ರಮಿಸುವುದರಬದಲು ಅವುಗಳ ತದ್ವಿರುದ್ಧ ತಮ್ಮ ರೀತಿಯನ್ನು ರಚಿಸಿ, ಕಾಯ್ದೆಯನ್ನು ರೂಪಿಸುತ್ತಿರುವದು. ಸರ್ಕಾರವು

ರಾಜ್ಯಾಂಗದಲ್ಲಿಯ ಮಾರ್ಗದರ್ಶ ನೀತಿಗಳ ವಿರುದ್ಧ ವರ್ತಿಸಿದ್ದಾಗ ಅದು ಘಟನಾ ವಿರುದ್ಧವಾಗುವದಿಲ್ಲ ವೆಂದಾಗಲೀ ಸರ್ಕಾರದ ಅಘಟನಾತ್ಮಕ ವರ್ತನೆ ನ್ಯಾಯ ಬಾಹಿರವೆಂದಾಗಲೀ ನ್ಯಾಯಾಲಯದಲ್ಲಿ ನಿರ್ಧರಿಸಲು ರಾಜ್ಯಾಂಗದ ಮೇರೆಗೆ ಬರುವದಿಲ್ಲವೆಂಬ ಒಂದೇ ಲೋಪಕ್ಕೆ ಸರ್ಕಾರ ಹಾಗೆ ವರ್ತಿಸಿದರೆ ಕಾಯ್ದೆಬದ್ಧವಾಗಿ ನಡೆಯುದ ಪ್ರಜೆಗಳನ್ನು ಆರೋಪದ ಮೇಲೆ ಶಿಕ್ಷಿಸಲು ಸರ್ಕಾರ ಯಾವ ನೈತಿಕ ಬಲವನ್ನು ಹೊಂದುತ್ತದೆ? ಪ್ರಜೆಗಳ ಹಾಗೂ ಸರ್ಕಾರದ ಕ್ರಮ-ಅಕ್ರಮಗಳ ವಿವೇಚನೆ ಹೀಗಿದ್ದರೆ ಅಕ್ರಮವಾದ ಹಾಗೂ, ನ್ಯಾಯ ಬಾಹೀರವಾದ ರೀತಿಯಲ್ಲಿ ವರ್ತಿಸುವದು ಸರಿಯೋ-ತಪ್ಪೋ ಎಂಬುದನ್ನು ಪರಿಶೀಲಿಸೋಣ. ನ್ಯಾಯಬಾಹಿರ ವರ್ತನೆಯೆಂದೊಡನೆ ಗುನ್ನೆಗಾರರ ನೆನಪು ಬರುವದು ಸ್ವಾಭಾವಿಕ. ರಾಷ್ಟ್ರದ ಆಡಳಿತೆ ಸುಭದ್ರವಾಗಿ ಸುಗಮವಾಗಿ ನಡೆಯಬೇಕಾದರೆ ಪ್ರಜೆಗಳು ಕಾಯ್ದೆಯನ್ನು ಗೌರವಿಸುವದು, ಪಾಲಿಸುವದು ಬಹಳ ಮುಖ್ಯ. ಆದರೂ ಜಗತ್ತಿನ ಚರಿತ್ರೆಯಲ್ಲಿ ನ್ಯಾಯಬಾಹಿರ ವರ್ತನೆಗಳಿಗೇನು ಕೊರತೆಯಿಲ್ಲ. ಅದರಲ್ಲೂ ಆಳುವ ಸರ್ಕಾರ ಜನತೆಯ ಕಲ್ಯಾಣಕ್ಕೆ ಶ್ರಮಿಸದಿದ್ದರೆ, ಜನತೆಯನ್ನು ಗುಲಾಮರನ್ನಾಗಿಸಿಕೊಂಡು ಆಳಬೇಕೆಂಬ ಪ್ರವೃತ್ತಿ ತೋರಿಸಿದರೆ ಜನತೆಯು ಒಂಡೆದ್ದು ನ್ಯಾಯ ಬಾಹಿರ ವರ್ತನೆಯಲ್ಲಿ ತೊಡಗುವದೇನು ಹೊಸತಲ್ಲ. ಎಲ್ಲ ಕ್ರಾಂತಿಗಳ ಹಿನ್ನೆಲೆಯಲ್ಲಿ ಈ ಕಾಯ್ದೆ ಭಂಗ ಚಳುವಳಿಯು ಋುಳ ಇದ್ದದ್ದೇ. ನಮ್ಮ ಭಾರತದ ಉದಾಹರಣೆಯನ್ನೇ ತೆಗದುಕೊಂಡರೆ, ರಾಷ್ಟ್ರಪಿತ ಗಾಂಧೀಜೀಯವರ ನೇತೃತ್ವದಲ್ಲಿ ಭಾರತಲ್ಲಿ ಜನತೆ ನಡೆಸಿದ ಸ್ವಾತಂತ್ರ ಹೋರಾಟದಲ್ಲಿ ಅಡಗಿದ ಉಪ್ಪು ಸತ್ಯಾಗ್ರಹ, ಚಲೇ ಜಾವ್ ಚಳುವಳಿ ಮುಂತಾದವುಗಳು ಕಾಯ್ದೆ ಭಂಗ ಕೃತಿಗಳೇ! ಈ ರೀತಿಯ ವಿಮರ್ಶೆಗೆ ನಾವು ತೊಡಗಿದಾಗ ಕಾಯ್ದೆ ಭಂಗಮಾಡುವದು ಧರ್ಮ ಬದ್ಧವೋ, ಎಂಬುದರ ವಿವೇಚನೆಯನ್ನು ಮಾಡಬೇಕಾಗುತ್ತದೆ. ಗಾಂಧೀಜೀಯವರ ಸತ್ಯಾಗ್ರಹ ಚಳುವಳಿ ಬ್ರಿಟಿಷರ ದೃಷ್ಟಿಯಲ್ಲಿ ಕಾಯ್ದೆಭಂಗ ಕೃತಿ ಹಾಗೂ ರಾಷ್ಟ್ರದ್ರೋಹ ನೀತಿಯಾದರೆ, ಭಾರತೀಯರ ದೃಷ್ಟಿಯಲ್ಲಿ ಸ್ವಾತಂತ್ರ್ಯ ಹೋರಾಟ ಪವಿತ್ರ ಕರ್ತವ್ಯವಾಗಿತ್ತು; ಭಂಗವು ಆಗ ಭಾರತೀಯರ ಧರ್ಮವಾಗಿತ್ತು. ಇದೇ ರೀತಿ ಯಾವುದೇ ಅನ್ಯಾಯ ಪ್ರಜೆಗಳ ಮೇಲಾದರೆ ಅದನ್ನು ಘಟನಾತ್ಮಕ ರೀತಿಯಲ್ಲಿ ಸರಿತಿದ್ದಲು ಸಾಧ್ಯವಾಗದಿದ್ದರೆ ಕಾಯ್ದೆ ಭಂಗ ಚಳುವಳಿಗೇ ತೊಡಗಬೇಕಾಗುತ್ತದೆ, ಎಂಬುದು ಚರಿತ್ರ ಸಿದ್ಧ ಸಿದ್ಧಾಂತ. ಈಗ ಉದಾಹರಣೆಗೆ ಪಾನ ಪ್ರತಿಬಂಧದ ರದ್ದತಿಯನ್ನು ಮೈಸೂರ ಸರ್ಕಾರ ಅಕ್ಟೋಬರ 1 1967 ರಂದು ಜಾರಿಗೆ ತರಲಿದೆ, ನಮ್ಮ ರಾಜ್ಯಾಂಗದ ಮಾರ್ಗದರ್ಶಕ ತತ್ವಗಳಂತೆ ಇದು ಅಘಟ

ನಾತ್ಮಕ ಕೃತಿ. ಪಾನಪ್ರತಿಬಂಧವನ್ನು ವಿಸ್ತರಿಸಿ, ಪ್ರಜೆಗಳ ಆರೋಗ್ಯ ರಕ್ಷಣೆಗೆ ಸರ್ಕಾರ ನೆರವಾಗಬೇಕೆಂದು ರಾಜ್ಯಾಂಗ ೪೭ನೆ ನಿಯಮದಲ್ಲಿ ವಿಧಿಸಿದೆ. ಈ ಅಘಟನಾತ್ಮಕ ಕೃತಿಯನ್ನು ವಿರೋಧಿಸಬೇಕಾದರೆ ಎರಡು ಮಾರ್ಗಗಳು ತೆರವಾಗಿರುತ್ತವೆ. ಒಂದು ಕಾಯ್ದೆಯ ತಿದ್ದುಪಡಿ— ಅದಕ್ಕಾಗಿ ಘಟನಾತ್ಮಕ ಹೋರಾಟ. ಇನ್ನೊಂದು ಕಾಯ್ದೆಯ ಭಂಗ, ಪ್ರತಿಭಟನಾ ರೀತಿ. ರಾಜ್ಯದ ವಿಧಾನ ಸಭಾ, ಪರಿಷತ್ತುಗಳಲ್ಲಿಯ ಬಹುಮತವುಳ್ಳ ಪಕ್ಷ ಈ ಕೃತಿಗೆ ಕೈ ಹಾಕಿದಾಗ, ಇದನ್ನು ವಿರೋಧಿಸಬೇಕೆನ್ನುವವರು ಕಾಯ್ದೆ ಭಂಗದ ರೀತಿಯನ್ನು ಹೂಡಬೇಕಾದೀತು ! ತತ್ವಕ್ಕೇ ಅಂಟಿಕೊಂಡು, ತತ್ವ ಪ್ರತಿಪಾದನೆಗೆ—ಸಾಧನೆಗೆ ಜೀವವನ್ನೇ ಮುಡಿಪಿಡಲು ಸಿದ್ಧವೆಂಬ ಗಾಂಧೀವಾದಿಗಳು ಈಗ ಸರ್ಕಾರದ ವಿರುದ್ಧ ಕಾಯ್ದೆಭಂಗ ಚಳುವಳಿಯನ್ನೇ ಹೂಡಬೇಕು. ಹಾಗೆ ಗಾಂಧೀವಾದಿಗಳು ಕಾಂಗ್ರೇಸ್ ಸರ್ಕಾರದ ವಿರುದ್ಧವೇ ಕಾಯ್ದೆ ಭಂಗ ಚಳುವಳಿ ಹೂಡಿದರೆ ಅದನ್ನು ಅಧರ್ಮವೆಂದು ಹೇಗೆ ಹೇಳಲು ಸಾಧ್ಯ? ಅದು ಅಕ್ರಮ ನಿಜ; ಆದರೆ ಅಧರ್ಮವಲ್ಲ. ಅಂತೆಯೇ "ಘೇರೋ" ಚಳುವಳಿಯ ಶಾಸ್ತ್ರಿಕ ವಿವೇಚನೆಗೆ ತೊಡಗಿದರೆ. ಬಹಳ ಮೋಜಿನ ಸಂಗತಿಗಳ ಅರಿವಾಗುತ್ತದೆ. ಇಲ್ಲಿ ಮಾರ್ಕ್ಸವಾದದ ವಿಶ್ಲೇಷಣೆಯನ್ನು ಮಾಡಬೇಕಾಗುತ್ತದೆ. ಮಾರ್ಕ್ಸ ವರ್ಗರಹಿತ ಸಮಾಜದ ರಚನೆಯನ್ನು ಗುರಿಯಾಗಿರಿಸಿದ್ದಾನೆ. ಪ್ರಜಾಸಮಸ್ತ ಸ್ವಾಮ್ಯವಾದದ ಸ್ಥಾಪನೆಗೆ ವರ್ಗರಹಿತ ಸಮಾಜದ ಅವಶ್ಯಕತೆಯನ್ನು ವಿವರಿಸಿ ಈ ವರ್ಗರಹಿತ ಸಮಾಜದ ರಚನೆಯ ಸಾಧನೆಗೆ ಎರಡು ಮುಖ್ಯ ಹಂತಗಳನ್ನು ಸೂಚಿಸಿದ್ದಾನೆ. ಅದರಲ್ಲಿ ಮೊದಲನೆಯದು ವರ್ಗ ಹೋರಾಟ; ಎರಡನೆಯದು ಕಾರ್ಮಿಕರ ನಿರಂಕುಶ ಪ್ರಭುತ್ವ. ಮಾರ್ಕ್ಸ ಅಭಿಪ್ರಾಯದಂತೆ ವರ್ಗ ಹೋರಾಟವು ಕಾರ್ಮಿಕ ನಿರಂಕುಶ ಪ್ರಭುತ್ವಕ್ಕೆ ದಾರಿಮಾಡಿ ಕೊಡುತ್ತದೆ. ನಿರಂಕುಶ ಪ್ರಭುತ್ವವು ಪರಿವರ್ತನಾಕಾಲ. ಈ ಅವಧಿಯಲ್ಲಿ ಎಲ್ಲ ವರ್ಗಗಳು ನಿರ್ಮೂಲನಗೊಂಡು ವರ್ಗರಹಿತ ಸಮಾಜ ಸ್ಥಾಪಿಸಲ್ಪಡುತ್ತದೆ. ಈ ತತ್ವವನ್ನು ನಾವು ಅಭ್ಯಸಿಸಿದಾಗ ಮಾರ್ಕ್ಸವಾದಿಗಳು ವರ್ಗ ಹೋರಾಟವನ್ನು ಮುಖ್ಯ ಕರ್ತವ್ಯವಾಗಿ ಪರಿಗಣಿಸುತ್ತಾರೆ. ವರ್ಗ ಹೋರಾಟದಿಂದ ಕಾರ್ಮಿಕರ ರಾಜ್ಯ ಸ್ಥಾಪನೆ ಸಾಧ್ಯವೆಂದು ನಂಬುತ್ತಾರೆ. ಭಾರತದಲ್ಲಿ ಕಾರ್ಮಿಕರು, ಕಾರ್ಮಿಕ ಸಂಘಗಳು ನಡೆಸಿರುವ ಈ ವರ್ಗ ಹೋರಾಟದ ಹೊಸ ಆಯುಧವಾಗಿ ಘೇರೋ ಬಂದಿದೆ. ಇದು ಕಾಯ್ದೆ ಬಾಹಿರವಾದರೂ 'ತತ್ವಯುಕ್ತ ಪ್ರತಿಭಟನಾ ಕ್ರಮ. ರಷ್ಯಾದ ಶಿಲ್ಪಿ ಲೆನಿನ್ ಪ್ರತಿಪಾದಿಸಿದಂತೆ "ಕ್ರಾಂತಿಕಾರರು ವಿಜಯವನ್ನು ಪಡೆಯಬೇಕಾದರೆ ತಾವು ಯಾವ ರಾಜ್ಯವನ್ನು ಉರುಳಿಸ ಬೇಕೆನ್ನುತ್ತಾರೋ ಆದರ ಕಾಯ್ದೆಗಳನ್ನು ಪರಿಪಾಲಿ

ಸಬಾರದು" ಎಂಬ ತತ್ವವನ್ನು ಮಾರ್ಕ್ಸವಾದಿಗಳು ವರ್ಗರಹಿತ ಸಮಾಜದ ಸಾಧನೆಯಲ್ಲಿ ಬಳಸುತ್ತಿದ್ದಾರೆ.

ಅಂತೂ "ಘೇರೋ" ಚಳುವಳಿ ಒಂದು ದೊಡ್ಡ ವಿವಾದದ ಸುಂಟರುಗಾಳಿಯನ್ನು ಎಬ್ಬಿಸಿದೆ. ಭಾರತದಲ್ಲಿ ಪ್ರಜಾಸಮಸ್ತ ಸಾಮ್ಯವಾದವು ಹೊಂದೀತೋ ಇಲ್ಲವೋ ಎಂಬುದರ ಅಗ್ನಿ ಪರೀಕ್ಷೆ "ಘೇರೋ" ಚಳುವಳಿಯ ಜಯಾಪಜಯಗಳ ಮೇಲೆ ಕೆಲಮಟ್ಟಿಗೆ ಅವಲಂಬಿಸಿದೆ ಎಂದು ಹೇಳಬಹುದು. ಸಧ್ಯದ ಭಾರತದ ರಾಜಕೀಯ – ಸಾಮಾಜಿಕ — ಆರ್ಥಿಕ ವಾತಾವರದರಣದಲ್ಲಿ ಕಾರ್ಮಿಕರ ಬ್ರಹಾಸ್ತ್ರ "ಘೇರೋ". ವರ್ಗ ಹೋರಾಟದ ನವೀನ ಆಯುಧವಾದ "ಘೇರೋ" ವರ್ಗರಹಿತ ಸಮಾಜ ಸ್ಥಾಪನೆಗೆ ಹಾದಿ ಮಾಡುತ್ತದೆಯೋ ಅಥವಾ ಸಮಾಜವಾದ ಸ್ಥಾಪನೆಯ ಗುಪ್ತಕ್ರಾಂತಿಗೆ ಅಡ್ಡಿಯಾದೀತೋ ಎಂಬುದು ಈ ಹಂತದಲ್ಲಿ ಕೇವಲ ಊಹಾಪೋಹದ ಅಂಶವೇ ಎಂದು ಹೇಳಬಹುದು.

• • •



ತಾರೆ ಕಲ್ಪನಾ ರವರ

ಕಲಾತ್ಮಕ ಉತ್ತರಗಳು



ಕನ್ನಡ ಚಿತ್ರರಂಗದ ಭವ್ಯ ತಾರೆಯಾಗಿ ಮಿನುಗುತ್ತಾ ಕಲಾರಾಧನೆಯಲ್ಲಿ ತೊಡಗಿರುವ 'ಕಲ್ಪನಾ' ಅವರನ್ನು ಕನ್ನಡ ಚಿತ್ರರಂಗದ ಬಗ್ಗೆ ಕೆಲವು ಪ್ರಶ್ನೆಗಳನ್ನು ಕೇಳಿದಾಗ ಅವರು ಅವುಗಳಿಗೆ ಬಹಳ ಕಲಾತ್ಮಕ ಉತ್ತರಗಳನ್ನು ಕಳುಹಿಸಿದ್ದಾರೆ. ನಮ್ಮ ವಾಚಕವೃಂದಕ್ಕೆ ಈ ಪ್ರಶ್ನೋತ್ತರಗಳನ್ನು ಇಲ್ಲಿ ಕೊಡಲಾಗಿದೆ.

ಪ್ರ: (ಅ) ನೀವು ಹೇಗೆ ಚಿತ್ರರಂಗವನ್ನು ಪ್ರವೇಶಿಸಿದಿರಿ ? (ಬ) ಯಾವ ಮಹತ್ವದ ಘಟನೆ ನಿಮ್ಮನ್ನು ಈ ರಂಗಕ್ಕೆ ಸೆಳೆಯಿತು ?

ಉ : (ಅ) ಶ್ರೀ ಪಾತಲೂರವರ ಪದ್ಮಿನಿ ಸಂಸ್ಥೆಯಲ್ಲಿ ಮೂರು ವರುಷಗಳ ವರೆಗೆ ಬೇರೆ ಸಂಸ್ಥೆಯ ವಿನಃ ಮಿಕ್ಕಾವ ಸಂಸ್ಥೆಯ ಕರೆ ಬಂದರೂ ನಟಿಸಲಾರೆನೆಂಬ ನಿಬಂಧನೆಗೆ ಸಮ್ಮತದ ಸಹಿ ಹಾಕುವುದರ ಮೂಲಕ ಚಿತ್ರರಂಗಕ್ಕೆ ನನ್ನ ಪ್ರವೇಶವಾಯಿತು. (ಬ) "ನನ್ನ ಜೀವನದಲ್ಲಿ ನಡೆಯಬೇಕಾದ ಮುಂದಿನ ಮಹತ್ವದ ಘಟನೆಗಳಿಗೆ ನಾನಿಟ್ಟಿರುವ ತಾಣ ಚಿತ್ರ-ರಂಗ" ಎಂಬ ಆ ಬ್ರಹ್ಮಬರೆಹದ ಪರೋಕ್ಷ ಪ್ರೇರಣೆ "ಯಾರೇನೆಂದರೂ ಸರಿ, ನಾನು ಸಿನಿಮಾರಂಗ ಸೇರಿಯೇ ಸಿದ್ಧ" ಎಂಬ ಛಲ ರೂಪಕವಾಗಿ ನನ್ನನ್ನಿಲ್ಲಿಗೆ ಸೆಳೆದು ನಡೆಯುಲಿರುವ ಮುಂದಿನ ಘಟನೆಗಳಿಗೆ ನಾಂದಿ ಹಾಡಿತೆನ್ನಲೇ ?

ಪ್ರ : (ಅ) ಚಿತ್ರರಂಗದಲ್ಲಿ ಸೇವೆ ಸಲ್ಲಿಸಲು ಪ್ರಾರಂಭಿಸಿದಂದಿನಿಂದ ನಿಮಗಾದ ಮೋಜಿನ ಅನುಭವಗಳಾವುವು ? (ಬ) ನೀವು ನಿಮ್ಮ ಕಾರ್ಯ ನಿರ್ವಹಣೆಯಲ್ಲಿ ಎದುರಿಸಬೇಕಾದ ವಿಶಿಷ್ಟ, ವಿಚಿತ್ರ ಸಮಸ್ಯೆಗಳು, ತೊಂದರೆಗಳು ಯಾವುವು ? (ಕ) ನೀವು ಅವುಗಳನ್ನು ಹೇಗೆ ಎದುರಿಸಿದಿರಿ ?

ಉ: (ಅ) ಆದ ಅನುಭವಗಳು ಸಂಖ್ಯಾತೀತವಾದರೂ ಮೋಜೆಂದು ಗಣಿಸಬಹುದಾದ ಅನುಭವ ಇನ್ನೂ ಆಗಿಲ್ಲ.

(ಬ) ವಿಶಿಷ್ಟ, ವಿಚಿತ್ರ ಸಮಸ್ಯೆ ಹಾಗೂ ತೊಂದರೆಗಳು ೧. ಸಹನಟನ ಬಗ್ಗೆ ಗೌರವ ವಿಶ್ವಾಸಗಳಿಲ್ಲದಿದ್ದರೂ ಪ್ರಣಯ ಸನ್ನಿವೇಶಗಳಲ್ಲಿ ನೈಜ ಪ್ರಣಯಿಯಂತೆ ನಟಿಸಬೇಕಾದ ಪರಿಸ್ಥಿತಿ. ೨. ಮನಸ್ಸು, ಮನೆ, ಪರಿಸ್ಥಿತಿ ಹೇಗೇ ಇರಲಿ ಸನ್ನಿವೇಶಕ್ಕೆ ತಕ್ಕಂತೆ ನಾನಾ ಹಾವಭಾವಗಳನ್ನು ಬಲವಂತವಾಗಿ ಬರಿಸಿಕೊಳ್ಳಲೇಬೇಕಕದ ಸಂದರ್ಭಗಳು. ೩. ಸತ್ತು ಹೆಣವಾಗಿ ನಟಿಸಬೇಕಾದ ಸಂದರ್ಭದಲ್ಲಿ ಲೀಲಾಜಾಲವಾಗಿ ಆಡೋ ಉಸಿರನ್ನು ಉಸಿರಾಡದಂತಿರಿಸಿ ನೈಜ ಶವ ನಟನೆಗಾಗಿ ಪಡೋ ಆ ಸಂಕಟ. ೪. ಮನಸಾ ತಿಂದು ತೇಗಬೇಕೆಂಬ ಚಪಲವಿದ್ದರೂ ದೇಹದಾಕಾರ ಕೆಡುವುದೆಂಬ ಭಯದಿಂದ ಬರೇ ಬಾಯಿ ಚಪ್ಪರಿಸುವುದರಲ್ಲೇ ತೃಪ್ತಿ ಕಾಣಬೇಕಾದ ಸಂದರ್ಭ. ೫. ಹೊರಾಂಗಣ ಚಿತ್ರೀಕರಣದಲ್ಲಿ ಸುಡುತ್ತಿರುವ ಬಿಸಿಲನ್ನು ಬೆಳದಿಂಗಳ ಶೀತಲವೆಂದು ಭಾವಿಸಿ ಹಾಡಿ ಕುಣಿಯಬೇಕಾದ ಆ ವೇದನೆ. ೬. ದೇಹ ಮನಸ್ಸಿಗೆಷ್ಟೇ ಆಯಾಸವಾಗಿದ್ದರೂ ನೋಡಲೆಂದು ಬಂದ ನಮ್ಮ ರಸಿಕವರ್ಗವನ್ನು ಹಸನ್ಮುಖಿಯಾಗಿ ಮಾತನಾಡಿಸಲೇಬೇಕಾದ ಆ ವಿಷ-

'ಮಾಧವಿ'ಗಾಗಿ ಪ್ರತ್ಯೇಕ

ಪರೀಕ್ಷೆ— ಹೀಗೆ ಬರೆಯುತ್ತ ಹೋದರೆ ಪುಟಗಟ್ಟಲೇ ವಿವರಿಸಿ ಹೇಳಲಾರದ ನಿಮ್ಮ ಪ್ರಶ್ನೆಗೆ ಅತಿ ಮುಖ್ಯವೆನಿಸಿದ ಹಲವೇ ಉತ್ತರಗಳನ್ನು ಮಾತ್ರ ಬರೆದಿದ್ದೇನೆ.

(ಕ) ವಹಿಸು ಕೆಲಭಾರಗಳ ಸಹಿಸು
ಕೆಲ ನೋವುಗಳ
ಪ್ರಹರಿ ಸಿರಿಗಳನನಿತು ಯುಕ್ತಗಳ
ನರಿತು
ಮಹಿಯ ನಾಟಕದಿ ನೇರ
ಮನಸಿಟ್ಟು ಕುಣಿಕುಣಿದು
ಲಹರಿಸಾತ್ಮಲಯದಿ ಮಂಕುತಿಮ್ಮ.

ಪ್ರ: (ಅ) ಕನ್ನಡ ಚಿತ್ರರಂಗದ ಮಟ್ಟದ ಬಗ್ಗೆ ನಿಮ್ಮ ಅಭಿಪ್ರಾಯವೇನು? (ಬ) ಈಗಿನ ಮಟ್ಟವನ್ನು ತುಲನಾತ್ಮಕವಾಗಿ ವಿಚಾರಿಸಿದರೆ ಅಸಮಾಧಾನಕರವೆಂಬ ಅಭಿಪ್ರಾಯ ನಿಮ್ಮದಾದರೆ ಅದನ್ನು ಸರಿ ತಿದ್ದಲು ನಿಮ್ಮ ಸಲಹೆಗಳೇನು?

ಉ: (ಅ) ದುರಭಿಪ್ರಾಯವಂತೂ ಖಂಡಿತ ಇಲ್ಲ. (ಬ) ಈಬಗ್ಗೆ ಹಿಂದಿನ ಹಿರಿಯರು ಅಂದಿನಿಂದಲೂ ನೀಡುತ್ತ ಬಂದಿರುವ ಸಲಹೆಗಳೇ ಕಾರ್ಯರೂಪಕ್ಕಿಳಿಯದೆ ಬಿದ್ದಿರೋವಾಗ ಇನ್ನು ಹೊಸದಾಗಿ ನೀಡುವ ಸಲಹೆಯ ಗತಿ ಇನ್ನೇನಾಗಬೇಕು? ನೀವೇ ಹೇಳಿ.

ಪ್ರ: "ನಮ್ಮ ಚಿತ್ರರಂಗದಲ್ಲಿ ಸಾಹಸೀ ಪ್ರವೃತ್ತಿ ಕಡಿಮೆ. ಹೊಸತನ್ನು ಪ್ರಯೋಗಿಸೋಣ ಎಂಬ ಉತ್ಸಾಹ ಶೂನ್ಯತೆಯಿದೆ" ನಿಮ್ಮ ಅಭಿಪ್ರಾಯವೇನು?

ಉ: ಹೊಸ ಪ್ರಯೋಗದ ಶೋಧಕ್ಕೆ ಶಕುನವಿನ್ನೂ ಸಿಕ್ಕಿಲ್ಲವಂತೆ ನಮ್ಮವರಿಗೆ.

ಪ್ರ: (ಅ) ನಮ್ಮ ಚಿತ್ರಗಳಿಗೂ, ವಾಸ್ತವತೆಗೂ ಅಜಗಜಾಂತರ"-- ಇದನ್ನು ನೀವು





ಒಪ್ಪುತ್ತೀರಾ ? (ಬ) ಇದಕ್ಕೆ ಕಾರಣ ವೇನು ?

ಉ : (ಅ) ವಾಸ್ತವತೆಗೆ ಭಂಗ ತಾರದಂಥ ಕೆಲವು ಚಿತ್ರಗಳು ಈಗಾಗಲೇ ತೆರೆ ಕಂಡಿವೆ ಎಂದರೆ ನೀವು ಒಪ್ಪುತ್ತೀರಾ ? (ಬ) ಅದು ತಪ್ಪು. ಮೇಲೆ ಹೇಳಿದಂತೆ ತೆರೆ ಕಂಡ ಚಿತ್ರಗಳಿಗೆ ಮಾತ್ರ ನಮ್ಮ ಜನತೆ ಪ್ರೋತ್ಸಾಹ ಕೊಡುವುದೊಂದರಿಂದಲೇ ಇದರ ನಿವಾರಣೆ ಸಾಧ್ಯ.

ಪ್ರ : ಜನತೆ ಚಿತ್ರರಂಗ. ಈ ದೃಷ್ಟಿಯಿಂದ ವಿಚಾರ ಮಾಡಿದರೆ (ಅ) ಚಿತ್ರಪ್ರೇಮಿಗಳು ನಿಮ್ಮನ್ನು ಹೇಗೆ ಕಾಣುತ್ತಾರೆ. (ಬ) ನೀವು ಅವರನ್ನು ಹೇಗೆ ಕಾಣುತ್ತೀರಿ ಎಂಬುದರಬಗ್ಗೆ ತಿಳಿಸುವಿರಾ?

ಉ : (ಅ) Take Respect Give Respect. (ಬ) Give Respect. Take Respect. ಅರ್ಥ ವಾಯಿತಲ್ಲವೇ?

ಪ್ರ : (ಅ) ನೀವು ಚಿತ್ರರಂಗದಲ್ಲಿ ಪ್ರವೇಶಿಸಿದ ಗುರಿ ಏನು? (ಬ) ಆ ಗುರಿ ಈಗ ಎಷ್ಟರಮಟ್ಟಿಗೆ ಸಾಧಿಸಿದೆ ? (ಕ) ನಿಮ್ಮ ಗುರಿ ಸಾಧಿಸಬಲ್ಲೆನೆಂಬ ಆಶೆ ನಿಮಗಿದೆಯೋ?

ಉ : (ಅ) ಸಾಧಿಸಿದ ಮೇಲೆ ಏನು ? ಎಂಬುದರ ವಿವರ ನೀಡುತ್ತೇನೆ. (ಬ) ಕಷ್ಟ ಎಂಬ ಅರಿವನ್ನು ಮಾಡಿಸುತ್ತಿದೆಯಾದರೂ ಸಾಧನೆಯು ಪಥವನ್ನೇನೂ ಬಿಟ್ಟಿಲ್ಲ. (ಕ) ಯಾಕೆ? ನಿಮಗೆ ಆ ಬಗ್ಗೆ ಸಂದೇಹವೆ?

ಪ್ರ : ಚಿತ್ರರಂಗದ ಮೂಲಕ ನಿಜವಾದ ಕಲಾರಾಧನೆ ಸಾಧ್ಯವೆಂಬುದು ನಿಮ್ಮ ಭಾವನೆಯೋ ?

ಉ : ಕಲಾರಾಧನೆಯೇ ಚಿತ್ರರಂಗದ ಗುರಿ ಎನ್ನುವ ಧೃಡಚಿತ್ತಕ್ಕೆ ಎಲ್ಲವೂ ಸಾಧ್ಯ.

ಪ್ರ : ಕನ್ನಡ ಚಿತ್ರರಂಗದಲ್ಲಿ 'ಹೀರೋ' ಗಳ ಕೊರತೆ ಇದೆ, ಇದರ ಬಗ್ಗೆ ಕನ್ನಡ ಚಿತ್ರರಂಗದ 'ಹೀರೋಯಿನ್'ಗಳ ಅಭಿಪ್ರಾಯವೇನು?

ಉ: 'ಹಿರೋಯಿನ್‌ಗಳ' ಅಭಿಪ್ರಾಯ ವೇನು ? ಎಂಬ ನಿಮ್ಮ ಪ್ರಶ್ನೆಗೆ 'ಹಿರೋಯಿನ್' ಆದ ನಾನೊಬ್ಬಳೇ ಹೇಗೆ ಉತ್ತರಿಸಲಿ?

* * *

Published by Shri K. A. Siddhanti, M. A. & Printed by Shri M. A. Kamat at Hindmata Printing House, Gandhi Chowk, Dharwar-1. Cover designed by Shri Krishna Potadar & printed at Ravindra Press, Dharwar-7

# ಕಸ್ತೂರಿ

ಮಾಸಿಕ ರಸಗಂಗೆ

ವಿಚಾರ * ವಿನೋದ * ವಿಜ್ಞಾನ

ನವ್ಹಂಬರ ೧೯೬೨



ಎಪ್ಪತ್ತೈದು ಪೈಸೆ



# ನಿಸರ್ಗ ದೀಪಾವಳಿ



ಹೊನ್ನೀಯ ಬಳಗವು
ಆರಲಾರದ ಬೆಳಕು.
ವನದೇವಿ ಮನೆಯು ಬೆಳಗ್ಯಾವ.
ತಾರೇಯ ನೆರವಿಯು
ಅಗ್ನೀಯ ಪುಂಜವು
ವ್ಯೋಮ ಸಾಗರದಿ ತೇಲ್ಯಾವ ॥ ೧ ॥

ರೂಪ ಯೌವನ ಕೂಡಿ
ಮನ್ಮಥಗ ಎದುರಾಗಿ
ಆರದ ಆರತಿ ಹಿಡಿದಾವ ।
ಕಷ್ಟದ ಕಾಡಿಗೆ
ಸುಖಜ್ಯೋತಿ ಸರಿಸ್ಯಾವ
ದೀವಳಿಗೆ ದೀಪಾ ಬೆಳಗ್ಯಾವ ॥ ೨ ॥



ದುಃಖ, ಸುಖವನರಸಿ
ಬೆಳಕು ಕತ್ತಲೆನೊರಸಿ
ಕಣ್ಣು ಮುಚ್ಚಾಲೆ ಆಡಿವೆ ದೀಪಾವಳಿ ।
ಮೇಲು ಕೀಳುಗಳ ಮೆಟ್ಟಿ
ಬಡವ ಬಲ್ಲಿದರ ಕಟ್ಟಿ
ಮನೆಗಳ ಮನಗಳ ಬೆಳಗಲೀ ದೀಪಾವಳಿ ॥ ೩ ॥

ಕೆ. ಎ. ಸಿದ್ಧಾಂತಿ, ಎಂ. ಎ.

---

### ನಮ್ಮ ರಸಿಕವೃಂದಕ್ಕೆ ಶುಭಾಶಯ

'ಮಾಧವಿ'ಯು ತನ್ನ ರಸಿಕವೃಂದಕ್ಕೆ ದೀಪಾವಳಿಯ ಶುಭಾಶಯಗಳನ್ನು ಕೋರುತ್ತದೆ. ದೀಪಾವಳಿಯ ಬೆಳಕು ನಿಮ್ಮ ಬಾಳನ್ನು ಬೆಳಗಲಿ.

—ಸಂ

# ಮಾಧವಿ ಅಂತರಂಗ



### ಲೇಖಕರಿಗೆ ಆಹ್ವಾನ

'ಮಾಧವಿ' ಯ ಉದ್ದೇಶವು ಸಾಮಾನ್ಯರಿಗೂ ವಿವಿಧ ರಂಗಗಳಲ್ಲಿ ಆಗುತ್ತಿರುವ ಪ್ರಗತಿಯ ಬಗ್ಗೆ ಮಾಹಿತಿ ಒದಗಿಸಬೇಕೆಂದಿರುವುದರಿಂದ ವೈಜ್ಞಾನಿಕ ಕ್ಷೇತ್ರದಲ್ಲಿ ಇತ್ತೀಚಿನ ಸಂಶೋಧನೆಗಳು-ಪ್ರಗತಿ; ಸಾಹಿತ್ಯ ರಂಗದಲ್ಲಿ ಮುನ್ನಡೆ; ಚರಿತ್ರೆ, ಸಮಾಜಶಾಸ್ತ್ರ, ರಾಜಕೀಯ ಶಾಸ್ತ್ರ, ಮನಶ್ಶಾಸ್ತ್ರ, ಮುಂತಾದವುಗಳಲ್ಲಿಯ ವಿಶ್ಲೇಷಣೆ ಬಗ್ಗೆ ಲೇಖನಗಳಿಗೆ ನಮ್ಮ ಸ್ವಾಗತವಿದೆ. ಹಾಸ್ಯ ವಿನೋದಗಳು ಹಾಗೂ ಜೀವನದಲ್ಲಿ ರಸಘಟನೆಗಳನ್ನು ಚಿತ್ರಿಸಿದರೂ ನಾವು ಸಂತೋಷದಿಂದ ಸ್ವೀಕರಿಸುತ್ತೇವೆ. ಲೇಖಕರಿಗೆ ಯೋಗ್ಯ ಗೌರವಧನ ನೀಡುವ ಉದ್ದೇಶವೂ ಇದೆ. ಲೇಖಕರು ತಮ್ಮ ಸಹಕಾರ ನೀಡಬೇಕಾಗಿ ವಿನಂತಿಸುತ್ತೇವೆ.

'ಮಾಧವಿ' ಕಾರ್ಯಾಲಯ, ಸ್ಟೇಷನ ರೋಡ, ಮಾಳಮಡ್ಡಿ, ಧಾರವಾಡ.

# ಜಿದ್ದಿಲ್ಲ ನೆಮಗಾಗಿ



**ಕುಳ್ಳರು ಇನ್ನು ಹೆದರಬೇಕಾಗಿಲ್ಲ**

"ಕಡಲೆ ಗಿಡಕ್ಕೆ ಏಣಿ ಹಾಕಬೇಕಾಯಿತಲ್ಲೋ"-ಅನ್ನುತ್ತಾರೆ ಕುಳ್ಳರನ್ನು ನೋಡಿ. "ಕಳ್ಳನ್ನ ನಂಬಿದರೂ ಕುಳ್ಳನ್ನ ನಂಬಬಾರದು" ಎಂದು ಚೇಷ್ಟೆ ಮಾಡುತ್ತಾರೆ ಅವನ ಚಾಣಾಕ್ಷತನಕ್ಕೆ ಹೆದರಿ. ಸಮಾಜದಲ್ಲಿ ಕಳ್ಳರನ್ನು ನೋಡಿ ನಗುವವರೂ ಇದ್ದಾರೆ, ಅವರ ಜಾಣ್ಮೆಗೆ ಬಲಿಯಾಗಿ ಅವರನ್ನು ಶಪಿಸುವವರೂ ಇದ್ದಾರೆ. ಆದರೆ ಇತ್ತೀಚೆಗೆ ನಡೆದಿರುವ ವೈದ್ಯಶಾಸ್ತ್ರ ಪ್ರಗತಿಯ ಮೇರೆಗೆ ಕುಳ್ಳರು ಹೆದರಬೇಕಾಗಿಲ್ಲ. ಅವರು ಉದ್ದವಾಗಲು ಬಯಸಿದರೆ ವೈದ್ಯಶಾಸ್ತ್ರ ಅವರಿಗೆ ಸಹಕಾರ ನೀಡಬಲ್ಲದು. ಲಿಲಿಪುಟರಿಗೂ ಗಲಿವರರಾಗುವ ಸುಸಂಧಿ ಈಗ ಉಂಟಾಗಿದೆ.

ಬೆಳೆಯುತ್ತಿರುವ ಮಕ್ಕಳಿಗೆ(growth harmones) ಬೆಳವಣಿಗೆ ನೀಡಬಲ್ಲ ಹಾರ್ಮೋನುಗಳನ್ನು ಚುಚ್ಚುವುದರಿಂದ ಬೆಳವಣಿಗೆ ಸಾಧ್ಯವೆಂದು ಸಂಶೋಧನದ ಫಲವಾಗಿ ಸಿದ್ಧವಾಗಿದೆ. ಲಂಡನ್ನಿನ ಮಕ್ಕಳ ಆರೋಗ್ಯ ಕೇಂದ್ರದ ಡಾ|| ಜೆ.

ಎಂ. ಟಾನರ್ ಮತ್ತು ಡಾ॥ ಆರ್.ಎಚ್. ವೈಟ್‌ಹೌಸ್ ಇವರುಗಳು ಈ ಬಗ್ಗೆ ಪ್ರಯೋಗ ನಡೆಸಿದ್ದರು. ಆರೋಗ್ಯವಂತ ಮಾನವನ ಪಿಟ್ಯುಟರಿ ಗ್ರಂಥಗಳಿಂದ ಸಂಗ್ರಹಿಸಿದ ಬೆಳವಣಿಗೆ ಹಾರ್ಮೋನು ಗಳನ್ನು ಚುಚ್ಚಲಾಗಿತ್ತು. ೧೦ ವರ್ಷ ಗಳಿಂದ ೧೬ ವರ್ಷಗಳ ಮಕ್ಕಳಲ್ಲಿ ಈ ಪ್ರಯೋಗದ ಫಲವಾಗಿ ಅವರ ಸಾಮಾನ್ಯ ಬೆಳವಣಿಗೆಗಿಂತಲೂ ಎರಡರಷ್ಟು ಬೆಳ ವಣಿಗೆ ಸಾಧಿಸಲಾಯಿತು.

× × × ×

## ಬಣ್ಣ ಕುರುಡರು

ಕಣ್ಣು ಕಂಡರೂ ಬಣ ಗುರ್ತಿಸಲಾಗ ದಿದ್ದರೆ ಅದಕ್ಕೆ 'ಬಣ್ಣ ಕುರುಡುತನ' (night blindness) ಎನ್ನುವು ದುಂಟು. ವಾಹನ ಚಲನ ಹೆಚ್ಚಾಗಿ ವಾಹನ ಚಲನ ನಿಯಂತ್ರಣದ ಪದ್ಧತಿ ಬದಲಾಗಿದೆ. ದೊಡ್ಡ ದೊಡ್ಡ ಪಟ್ಟಣ ಗಳಲ್ಲಿ ಕೆಂಪು ಹಾಗೂ ಹಸಿರು ಬಣ್ಣದ ವಿದ್ಯುದ್ದೀಪಗಳ ಸ್ವಯಂಚಾಲಿತ ಪದ್ಧತಿ ಯಿಂದ ವಾಹನ ಚಲನ ನಿಯಂತ್ರಣ ಮಾಡಲಾಗುತ್ತಿದೆ. ಬಣ್ಣ ಕುರುಡುತನ ವಿದ್ದವರು ವಾಹನ ನಿಯಂತ್ರಣ ಮಾಡು ವಾಗಾಗಲೀ, ರಸ್ತೆಗಳಲ್ಲಿ ಓಡಾಡುವಾಗ ಲಾಗಲೀ ಈ ಬಣ್ಣದ ಗುರ್ತಾಗದೆ ಆಘಾತ ಗಳಿಗೆ ತುತ್ತಾಗುವ ಸಂಭವಗಳು ಬಹಳ. ಇವರು ಒಬ್ಬಂಟಿಗರಾಗಿ ಓಡಾಡುವುದೂ ಅಪಾಯಕಾರಿಯೇ.

ಭಾರತದಲ್ಲಿ ಬಣ್ಣ ಕುರುಡುತನದಿಂದ ಪೀಡಿತರಾದವರು ಶೇಖಡ ೨ರಿಂದ ೬ರಷ್ಟು ಇದ್ದಾರೆ ಎಂದು ಸಂಶೋಧನೆಯ ಮೂಲಕ ತಿಳಿಯಲಾಗಿದೆ.

ಬಣ್ಣ ಕುರುಡುತನದ ಒಳಗೆ–ಹೊರಗೆ ಸೂಕ್ಷ್ಮ ಪರಿಶೀಲನೆ ನಡೆಸಿದ ತಜ್ಞರು ಕೆಲವು ವಿಸ್ಮಯಕಾರಕ ಅಂಶಗಳನ್ನು ಕಂಡು ಹಿಡಿದಿದ್ದಾರೆ.

೧. ಬಣ್ಣ ಕುರುಡುತನ ಆನುವಂಶಿಕ ರೋಗ. ತಂದೆಗೆ ಈ ರೋಗವಿದ್ದರೆ ಅದನ್ನು ಅವನು ತನ್ನ ಹೆಣ್ಣುಮಕ್ಕಳಿಗೆ ಆಸ್ತಿಯಾಗಿ ಅರ್ಪಿಸುತ್ತಾನೆ.

೨. ಒಂದೇ ಮನೆತನದಲ್ಲಿ ಪರಸ್ಪರ ವಿವಾಹಗಳಾಗುವುದರಿಂದ ಈ ಬಣ್ಣ ಕುರುಡುತನವಿದ್ದವರ ಮನೆತನಗಳಲ್ಲಿ ಈ ರೋಗದ ಆಸ್ತಿ ಹೆಚ್ಚು ಹೆಚ್ಚಾಗುತ್ತಾ ಹೋಗುತ್ತದೆ. ಇದನ್ನು ತಪ್ಪಿಸಲು ಬಣ್ಣ ಕುರುಡತನ ಪೀಡಿತ ಕುಟುಂಬಗಳು ತಮ್ಮ ಹತ್ತಿರ ಸಂಬಂಧಗಳಲ್ಲಿ ಮದುವೆ ಮಾಡಿ ಕೊಳ್ಳುವುದನ್ನು ತಪ್ಪಿಸಬೇಕು.

೩. ಬಣ್ಣ ಕುರುಡುತನ ನಾಗರಿಕರಲ್ಲಿ ಹೆಚ್ಚು. ಈ ಅಂಶ ಬಹಳ ಕುತೂಹಲ ಕಾರಿ. ಬಣ್ಣ ಕುರುಡುತನದ ಸಂಶೋ ಧಕರು ಕಾಡು ಮನುಷ್ಯರಲ್ಲಿಯ ಬಣ್ಣ ಕುರುಡರು ಹಾಗೂ ನಾಗರಿಕರಲ್ಲಿಯ ಬಣ್ಣ ಕುರುಡರ ಸಂಖ್ಯೆಯ ತುಲನೆ ಮಾಡಿ ಈ ಅಂಶವನ್ನು ಕಂಡುಹಿಡಿದಿ ದ್ದಾರೆ.

## ವಿದ್ಯಾರ್ಥಿಗಳ ರಾಜಕೀಯ

ಜಗತ್ತಿನ ಅನೇಕ ರಾಷ್ಟ್ರಗಳಲ್ಲಿ ನಡೆದ ನಡೆಯುತ್ತಿರುವ ದಂಗೆಗಳಿಗೆ, ಕ್ರಾಂತಿಗಳಿಗೆ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳ ನಾಯಕತ್ವ ಬಹುಮಟ್ಟಿಗೆ ಕಾರಣವೆಂದು ಅನೇಕ ವರದಿಗಳು ಬರುತ್ತಿವೆ. ಈ ಹಿನ್ನೆಲೆಯಲ್ಲಿ ಅಮೆರಿಕಾದ ಕಾಲೇಜ್ ವಿದ್ಯಾರ್ಥಿಗಳ ರಾಜಕೀಯ ಪ್ರಜ್ಞೆಯ ಬಗ್ಗೆ ಗಮನಿಸೋಣ. ಪ್ರೊ. ರಾಸ್ ಗೋಲ್ಡ್‌ಸನ್‌ರವರು ಅಮೆರಿಕಾದ ಕಾಲೇಜ್ ವಿದ್ಯಾರ್ಥಿಗಳ ರಾಜಕೀಯ ಪ್ರಜ್ಞೆಯ ಬಗ್ಗೆ ಸಂಶೋಧನೆ ನಡೆಸಿ– "ಅಮೆರಿಕಾದ ಕಾಲೇಜ್ ವಿದ್ಯಾರ್ಥಿಗಳು ಸಂಪ್ರದಾಯ ನಿಷ್ಠರೂ ಪ್ರತಿಕ್ರಿಯಾರಹಿತರು" ಎಂದು ಅಭಿಪ್ರಾಯಪಟ್ಟಿದ್ದಾರೆ. ಪ್ರೊ. ರಾಸ್‌ರವರ ನಿರ್ಣಯದಂತೆ "ಅಮೆರಿಕಾದ ವಿದ್ಯಾರ್ಥಿಗಳು ಸಾಮಾನ್ಯವಾಗಿ ರಾಜಕೀಯದಿಂದ ಹಿಂದೆ ಸರಿಯುವ ಪ್ರವೃತ್ತಿಯುಳ್ಳವರು. ಸುಮಾರು ೪೦ ರಷ್ಟು ಶೇಖಡ ವಿದ್ಯಾರ್ಥಿಗಳು ತಾವು ಯಾವ ರಾಜಕೀಯ ಪಕ್ಷದ ಬೆಂಬಲಿಗರೆಂದು ಹೇಳಲು ನಿರಾಕರಿಸಿದ್ದಾರೆ. ಇನ್ನುಳಿದವರಲ್ಲಿ ಸುಮಾರು ೩೦ ರಷ್ಟು ರಿಪಬ್ಲಿಕನ್ ಪಕ್ಷದ ಪರವಾಗಿಯೂ, ಸುಮಾರು ೩೦ ರಷ್ಟು ಡೆಮೊಕ್ರಾಟಿಕ್ ಪಕ್ಷದ ಬೆಂಬಲಿಗರೆಂದೂ ವ್ಯಕ್ತಪಡಿಸಿದ್ದಾರೆ."— ಎನ್ನುತ್ತಾರೆ.

ಅಮೇರಿಕಾದಲ್ಲಿಯ ವಿದ್ಯಾರ್ಥಿಗಳ ರಾಜಕೀಯ ಪ್ರಜ್ಞೆ ಹೀಗಿದ್ದಾಗ ನಮ್ಮ ದೇಶದ ವಿದ್ಯಾರ್ಥಿಗಳ ರಾಜಕೀಯ ಪ್ರಜ್ಞೆಯನ್ನು ಸಂಶೋಧಿಸಿ ಅರಿಯುವ ಕಾಲ ಸನ್ನಿಹಿತವಾಗಿದೆ.

× × × ×

## ನಿದ್ರೆಯ ಮರ್ಮ

ನಿದ್ರಾಲೋಲರನ್ನು 'ಕುಂಭಕರ್ಣ'ರೆಂದು ಚೇಷ್ಟೆ ಮಾಡುತ್ತೇವೆ. ಕೆಲವರು ನಿದ್ದೆ ಬಡಕರು ಮಂದ ಬುದ್ಧಿಯವರೆಂದು ಹಾಸ್ಯ ಮಾಡುತ್ತಾರೆ. ಕೆಲವರು ತಮ್ಮ ನಿದ್ದೆಯಲ್ಲಿಯೇ ಜಗತ್ಪ್ರದಕ್ಷಿಣೆ ಮಾಡುತ್ತಾರೆ— ಕನಸಿನ ವಾಹನದಲ್ಲಿ. ನಿದ್ದೆಯಲ್ಲಿ ನಡೆಯುವವರನ್ನೂ ನಾವು ಅರಿತಿದ್ದೇವೆ (Sleep walkers). ಇಷ್ಟಾದರೂ ನಿದ್ದೆಯಲ್ಲಿ ನಮ್ಮ ಮೆದುಳಿನ ಸ್ಥಿತಿ ಏನು ಎಂಬ ವಿಷಯ ನಮ್ಮಲ್ಲಿ ಅನೇಕರಿಗೆ ತಿಳಿದಿಲ್ಲ. ಇದು ವಿಜ್ಞಾನಿಗಳಿಗೇ ಒಂದು ಸಮಸ್ಯೆಯಾಗಿತ್ತು. ಆದರೆ ಇತ್ತೀಚೆಗೆ ಅಮೆರಿಕಾದ ಲೈಆನ್ಸ್ ವಿಶ್ವವಿದ್ಯಾಲಯದ ಪ್ರಯೋಗ ವೈದ್ಯ ಶಾಸ್ತ್ರಜ್ಞ ಪ್ರೊ. ಮೈಕಲ್ ಜೋವೆಟ್‌ರವರ ಸಂಶೋಧನೆ ಈ ಅಂಶದ ಬಗ್ಗೆ ಬೆಳಕನ್ನು ಚೆಲ್ಲುವಂತಿದೆ.

ಪ್ರೊ. ಮೈಕೆಲ್‌ರವರು ನಿದ್ರೆಯ ರಚನೆ–ಕಾರ್ಯ ರೀತಿಗಳ ಬಗ್ಗೆ ಪ್ರಯೋಗ ಮಾಡಲು ಬೆಕ್ಕುಗಳನ್ನು ಆರಿಸಿಕೊಂಡರು.

ಬೆಕ್ಕು ೨೪ ತಾಸುಗಳಲ್ಲಿ ೮ ತಾಸು ಎಚ್ಚರ ವಿದ್ದರೆ, ೧೨ ತಾಸು ತೂಕಡಿಸುತ್ತಿರುತ್ತದೆ. ಕೇವಲ ೪ ತಾಸು ಮಾತ್ರ ಗಾಢ ನಿದ್ರೆ ಮಾಡುತ್ತದೆ. ಇವುಗಳ ಮೇಲಿನ ಪ್ರಯೋಗದಿಂದ ಎಚ್ಚರವಿದ್ದಾಗ, ತೂಕಡಿಸುವಾಗ, ಗಾಢ ನಿದ್ರೆ ಮಾಡುವಾಗ ಮಿದುಳು ಹೇಗೆ ಕೆಲಸ ಮಾಡುತ್ತದೆಂದು ತಿಳಿಯಲು ಸಾಧ್ಯ; ಏಕೆಂದರೆ ಈ ಮೂರು ಬೇರೆ ಬೇರೆ ಸ್ಥಿತಿಗಳಲ್ಲಿ ಮಿದುಳು ಬೇರೆ ಬೇರೆ ರೀತಿಗಳಲ್ಲಿ ಕೆಲಸ ಮಾಡುತ್ತದೆ. ಎಚ್ಚರ ಸ್ಥಿತಿಯಲ್ಲಿದ್ದಾಗ, ಮಿದುಳಿನ ಮೇಲ್ಭಾಗ ( Cortex ) ಹಾಗೂ ಉಪ ಮೇಲ್ಭಾಗ ( Sub-cortex ) ಗಳಲ್ಲಿ ವಿದ್ಯುತ್ ಚಟುವಟಿಕೆ ವೇಗವಾಗಿದ್ದರೂ, ಅಷ್ಟು ತೀವ್ರವಾಗಿರುವುದಿಲ್ಲ; ಅಲ್ಲದೆ ಸ್ನಾಯುಗಳಲ್ಲಿ ತಕ್ಕ ಮಟ್ಟಿಗೆ ಬಿರುಸು ಉಳಿದಿರುತ್ತದೆ. **ತೂಕಡಿಕೆ**ಯಲ್ಲಿದ್ದಾಗ ಮಿದುಳಿನ ಮೇಲ್ಭಾಗ ಹಾಗೂ ಉಪಮೇಲ್ಭಾಗಗಳಲ್ಲಿ ವಿದ್ಯುತ್ ಚಟುವಟಿಕೆ ಕಡಿಮೆಯಾಗಿ, ಮಿದುಳಿನ ಅಲೆಗಳು ಮುದುಡಿಕೊಂಡಂತೆ ಕಂಡರೂ ಸ್ನಾಯುಗಳ ಬಿರುಸುತನ ಅಷ್ಟೇ ಉಳಿಯುತ್ತದೆ. ಆದರೆ **ಗಾಢ ನಿದ್ರೆ**ಯಲ್ಲಿದ್ದಾಗ ಮಿದುಳಿನ ಸ್ಥಿತಿ ಸಂಪೂರ್ಣ ಬೇರೆಯೇ. ಇದನ್ನು ಶೀಘ್ರ ಅಲೆಗಳ ನಿದ್ರೆ (Fast wave sleep) ಎನ್ನುತ್ತಾರೆ. ಕಣ್ಣುಗಳ ಶೀಘ್ರ ಚಲನದ ನಿದ್ರೆ, ಕನಸಿನ ನಿದ್ರೆ ಎಂದೂ ಇದನ್ನು ಕರೆಯುವದುಂಟು. ಈ ಸ್ಥಿತಿಯಲ್ಲಿ ಮೆದುಳಿನ ಮೇಲ್ಭಾಗ ಹಾಗೂ ಉಪ ಮೇಲ್ಭಾಗಗಳಲ್ಲಿ ಎಚ್ಚರ ಸ್ಥಿತಿಯಲ್ಲಿದ್ದಾಗಿನಂತೆ ಶೀಘ್ರ ವಿದ್ಯುಚ್ಚಲನ ಚಟುವಟಿಕೆ ಇರುತ್ತದೆ; ಕಣ್ಣುಗಳು ಶೀಘ್ರಗತಿಯಿಂದ ಮೇಲಕ್ಕೆ-ಕೆಳಕ್ಕೆ ಓಡಾಡುತ್ತವೆ. ಇದೊಂದು ವಿರೋಧಾಭಾಸವೇ ಸರಿ. ಆದರೆ ಎಚ್ಚರ ಸ್ಥಿತಿಗೂ ನಿದ್ರೆಯ ಸ್ಥಿತಿಗೂ ಒಂದೇ ವ್ಯತ್ಯಾಸವೆಂದರೆ ಗಾಢ ನಿದ್ರೆಯಲ್ಲಿದ್ದಾಗ ಸ್ನಾಯುಗಳ ಬಿರುಸುತನ ಇರುವುದಿಲ್ಲ.



---

"ವಸ್ತುಸ್ಥಿತಿ ಕೆಲವೊಮ್ಮೆ ಕಾಲ್ಪನಿಕತೆಗಿಂತಲೂ ವಿಚಿತ್ರವಾಗಿರುತ್ತದೆ."

---

# ತೆರೆದ ಪುಟ

ಪ್ರಿಯ ಮಾಧವಿಗೆ,

ನಿನ್ನ ಪ್ರಿಯಕರನ ಅಭಿನಂದನೆಗಳು. ಈ ನನ್ನ-ನಿನ್ನ ಪ್ರೇಮ, ಮೊದಲ ನೋಟದ ಪ್ರೇಮ (love at first sight). ನಾನು ಇದು ವರೆಗೆ ಎಷ್ಟೋ ಕನ್ನಡ ಲತೆಗಳನ್ನು ನೋಡಿದ್ದೇನೆ. ಆದರೆ ನಿನ್ನಂತೆ ನನ್ನ ಮನವನ್ನು ಯಾರೂ ಸೆರೆ ಹಿಡಿದಿರಲಿಲ್ಲ. ನಾನು, ನಿನ್ನ ಬಳಗದವರಿಗಿಂತ ಚಿಕ್ಕವನಾದರೂ, ನಿನಗಿಂತ ಹಿರಿಯನಾಗಿದ್ದೇನೆ. ಅದಕ್ಕಾಗಿ, ನಿನ್ನ ಒಲವು, ಒಯ್ಯಾರ, ಬೆಡಗು ಮತ್ತು ಮನ ಬೆಳಗುವ ನಿನ್ನ ಹೃದಯಾಂತರಂಗ ಸದಾಕಾಲ ಹೀಗೆ ಇರಲಿ, ಮತ್ತು ಬೆಳಗುತ್ತಾ ಸಾಗಲಿ ಎಂದು ದೇವರಲ್ಲಿ ಪ್ರಾರ್ಥಿಸುತ್ತೇನೆ.

ಇದು ನಿನ್ನ ಸ್ವಯಂವರದ ಕಾಲ. ಬಹಳ ಜನರ ಮನವನ್ನು ಸೆರೆ ಹಿಡಿಯಬೇಕಾದರೆ ನೀನು ನಿನ್ನ ಬಲಿಷ್ಠ ಸಮಕಾಲೀನರೊಂದಿಗೆ ಬಹಳಷ್ಟು ಸ್ಪರ್ಧಿಸಬೇಕಾಗಬಹುದು. ಆದರೆ ನಿನ್ನ ಬೆಡಗು-ಬಿನ್ನಾಣ, ಚೈತನ್ಯಗಳಿಂದ ನಿನಗೆ ಬಹಳಷ್ಟು ಪ್ರಿಯಕರರು ಸಿಗುತ್ತಾರೆ ಎಂಬುದರಲ್ಲಿ ಸಂದೇಹವಿಲ್ಲ. ಈ ಸಿಕ್ಕ ಪ್ರಿಯಕರರಲ್ಲಿ ನಾನೊಬ್ಬ.

ನಿನ್ನನ್ನು ಸಿನೆಮಾ ತಾರೆಯರೂ ಕೂಡ ಹೊಗಳಿದ್ದನ್ನು ನೋಡಿ ನನಗೆ ಮತ್ತಷ್ಟು ಸಂತೋಷವಾಯಿತು. ಆದರೆ ಅವರ ಹೊಗಳಿಕೆಯಲ್ಲಿ ಅಸೂಯೆ ಮಾತ್ರ, ಎದ್ದು ತೋರುತ್ತದೆ. ಯಾಕೆಂದರೆ, ಅವರಿಗಿಂತ ನಿನ್ನನ್ನು ಹೆಚ್ಚು ಜನ ಪ್ರೀತಿಸುತ್ತಾರೆ ಎಂದು. ನೋಡು, ನಿನ್ನ ಮೇಲೆ ಅಸೂಯೆ ಬಹಳಷ್ಟು ಜನಕ್ಕಿದೆ. ಎಲ್ಲರನ್ನು ಹಿಂದಕ್ಕಟ್ಟಿ ನೀನು ಮುಂದೆ ಬರುತ್ತೀ ಎಂಬ ನಂಬಿಕೆ ನನಗೆ ಬಹಳಷ್ಟು ಇದೆ.

ನಮಗಾಗಿ ನಿನ್ನನ್ನು ರೂಪಿಸಿರುವ ನಿನ್ನ ಬಳಗಕ್ಕೆ ನಾನು ಚಿರಋಣಿ. ದೀಪಾವಳಿ ಬರಲಿದೆ. ನೀನು ಮನೆಮನೆಯಲ್ಲಿ ಲಕ್ಷ್ಮಿಯಂತೆ ಬೆಳಗುತ್ತಿ, ಎಂದು ನಂಬಿರುವೆ.

ಮಾತುಂಗ, ನಿನ್ನ ಪ್ರಿಯಕರ,
ಮುಂಬೈ ಅರುಣ ಪಾಟೀಲ

× × ×

'ಮಾಧವಿ'ಗೆ ಸುಸ್ವಾಗತ. ತಮ್ಮ ತೃತೀಯ ಸಂಚಿಕೆಯನ್ನು ಕೊಂಡು ಓದಿದೆ. ಕನ್ನಡದ ಗಂಡು ನೆಲವಾದ ಧಾರವಾಡದ ಕೀರ್ತಿ, ಗೌರವ, ಘನತೆಗೆ ತಕ್ಕಂತೆ ಪತ್ರಿಕೆ ಪ್ರಕಟವಾಗುತ್ತಿರುವುದು ನನಗೆ ಸಂತೋಷವನ್ನುಂಟು ಮಾಡಿತು. 'ಜಯಂತಿ', 'ಜಯ ಕರ್ನಾಟಕ' ಮಾಸ ಪತ್ರಿಕೆಗಳು ಮಾಡಿದ ಸಾಮಾಜಿಕ, ಸಾಹಿತ್ಯಿಕ ಕ್ರಾಂತಿಯನ್ನು ನಾಡು ಎಂದಿಗೂ ಮರೆಯಲಾರದು. ಅವು ಇಂದು ನಶಿಸಿ ಹೋಗುತ್ತಿರುವ ಸಂಧಿಕಾಲದಲ್ಲಿ 'ಮಾಧವಿ' ಉದಯಿಸಿದ್ದಾಳೆ. ಕಾಲ– ಮಾನ– ಪರಿಸ್ಥಿತಿಗನುಗುಣವಾಗಿ ಅನೇಕ ಬದಲಾವಣೆಗಳೊಂದಿಗೆ ಹೊರಬೀಳುತ್ತಿದ್ದಾಳೆ.

'ಪ್ರಾದೇಶಿಕ ಭಾಷೆಗಳು ಬೇಕೋ–ಬೇಡವೋ' ಮಹತ್ವ ಪೂರ್ಣವಾಗಿದೆ.

'ವಿನಾಯಕ'ರ "ಜೀವನ- ನನ್ನ ಪ್ರಮುಖ ಗುರು" ಲೇಖ ತರುಣ ಜನಾಂಗಕ್ಕೆ ನೀಡಿದ ಮಹಾಮಂತ್ರವಾಗಿದೆ. 'ಕನ್ನಡ ವಿಶ್ವ ಕೋಶ' ಪ್ರಕಟಿಸುವ ನಿಮ್ಮ ಪವಿತ್ರ ಕಾರ್ಯಕ್ಕೆ ಸರ್ವರ ಪ್ರೋತ್ಸಾಹ ಸಿಗುವುದೆಂದು ಹಾರೈಸುವೆ.

'ಮಾಧವಿ' ಕನ್ನಡಿಗರಿಗೆ ಸಂಸ್ಕೃತಿ-ಸಾಹಿತ್ಯವೆಂಬ ಮಧುವನ್ನು ನಿರಂತರವಾಗಿ ಕೊಡುವ ಶಕ್ತಿ-ಸಾಮರ್ಥ್ಯವನ್ನು ತಾಯಿ ಭುವನೇಶ್ವರಿ ನೀಡಲೆಂದು ಪ್ರಾರ್ಥಿಸುತ್ತೇನೆ.

ಕಿಲ್ಲೆ, ತಮ್ಮವ,
ಧಾರವಾಡ ಎಸ್. ಎಸ್. ಭೂಸರಡ್ಡಿ

× × ×

ಸಂಪಾದಕರೇ,

'ಮಾಧವಿ'ಯ ಮೂರನೆಯ ಸಂಚಿಕೆ (ಅಕ್ಟೋಬರ್ ೬೭) ಓದಿದೆ. ವೈವಿಧ್ಯಪೂರ್ಣವಾಗಿ, ವಿವಿಧ ರಂಗಗಳ ಪ್ರಾತಿನಿಧಿಕ ಲೇಖನಗಳನ್ನೊಳಗೊಂಡು ಕನ್ನಡಿಗರ ವಿವಿಧ ಬಗೆಯ ಓದುಗರ ತೃಷೆ ತೀರಿಸುವಂತೆ ತಯಾರು ಮಾಡಿರುವುದು ಸಾಹಸೀ ಕಾರ್ಯವೇ ಸರಿ. ಆದರೆ ಇಂತಹ ಉತ್ತಮ ಸಂಗ್ರಹದಲ್ಲಿ ಒಂದು ಕಡೆ ನೀವು ಅಪಸ್ವರ ಹಾಡಿದ್ದೀರಿ. ಈ ಅಪಸ್ವರ ನನ್ನ ಮನಸ್ಸಿಗೆ ನೋವನ್ನುಂಟುಮಾಡಿತು. 'ಕನ್ನಡ ವಿಶ್ವಕೋಶ'ದ ಲೇಖಕ್ಕೆ ಸಂಪಾದಕರ ಟಿಪ್ಪಣಿ ಬರೆಯುವಾಗ 'ವಿಶ್ವಶೋಕ'ದ ಮಾತು ಇನ್ನು ನಿಲ್ಲಲಿ' ಎಂದಿದ್ದೀರಿ. ಅನೇಕರು 'ವಿಶ್ವಕೋಶದ ಮಾತು 'ವಿಶ್ವಶೋಕ' ವಾಗಿದೆ ಎಂದೆದ್ದರು ನಿಜ. ಈ ಅಪಸ್ವರ ನಿಲ್ಲಿಸಲೆಂದೇ ನೀವು ಈ ಕಾರ್ಯ ಕೈಗೊಂಡಿರುವುದೂ ನಿಜ. ಆದರೆ ನೀವು ಆ ಮಾತನ್ನು ಹೇಳಬಾರದಾಗಿತ್ತು. 'ವಿಶ್ವಕೋಶ'ದ ಕಾರ್ಯ ಒಂದು ಮಹಾಕಾರ್ಯ. ಇದನ್ನು ಕನ್ನಡದ ಕೊರತೆ ನೀಡುವ ಪವಿತ್ರ ದೃಷ್ಟಿಯಿಂದಲೇ ಮಾಡಬೇಕು. ಯಾರು ಏನು ಹೇಳಿದ್ದಾರೆ, ಯಾರು ಏನು ಮಾಡಿಲ್ಲ ಇದು ನಮ್ಮ ದೃಷ್ಟಿ ಆಗಬಾರದು.

ಕನ್ನಡಿಗರ ಹಿತ ದೃಷ್ಟಿಯಲ್ಲಿ ನೀವು ಇನ್ನು ಮುಂದೆ ಹೀಗೆ ಟೀಕಿಸದಿದ್ದರೆ ಒಳ್ಳೆಯದೆಂದು ನನ್ನ ಭಾವನೆ.

ನಿಮ್ಮ ಈ ಮಹತ್ಕಾರ್ಯದಲ್ಲಿ ಶುಭ ದೊರೆಯಲಿ. ಕನ್ನಡಕ್ಕೆ 'ವಿಶ್ವಕೋಶ' ಪ್ರಾಪ್ತವಾಗಲಿ. 'ಮಾಧವಿ' ಚಿರಾಯುವಾಗಿ ಎಲ್ಲರ ಮನೆ ಮನೆ, ಮನ ಮನ ಬೆಳಗಲಿ.

ತಮ್ಮವ,
ಹುಬ್ಬಳ್ಳಿ ಬಿ. ಶ್ರೀನಿವಾಸ

---

['ಮಾಧವಿ'ಯ ಬಗ್ಗೆ ಓದುಗರು ಕಳುಹಿಸುವ ಅಭಿಪ್ರಾಯಗಳಿಗೆ ಈ ಪುಟ ಮುಕ್ತ ಸ್ವಾಗತ ಕೋರುತ್ತದೆ.]

—ಸಂ.

---

ಕೈಲಾಸಂರವರ ವ್ಯಕ್ತಿತ್ವದ ಮೇಲೆ
ಶ್ರೀ ಕೆ. ವಿ. ಅಯ್ಯರ್‌ರವರು
ಚೆಲ್ಲಿದ ಹೊಸ ಬೆಳಕು

# 'ಕೈ' ಅಸಾಮಾನ್ಯರು: ವಿಚಿತ್ರ ವ್ಯಕ್ತಿ



['ಕನ್ನಡಕ್ಕೊಬ್ಬನೇ ಕೈಲಾಸಂ' ಎಂದು ಯಾವ ಕನ್ನಡಿಗನಿಗೆ ಗೊತ್ತಿಲ್ಲ. ಇವರು ಕನ್ನಡ ಸಾಹಿತ್ಯ ರಂಗದಲ್ಲಿ ತಮ್ಮ ಕ್ರಾಂತಿಕಾರೀ ನಾಟಕಗಳ ಮೂಲಕ ಹೊಸ ಕಿಡಿಯನ್ನೆಬ್ಬಿಸಿದರು, ಹೊಸ ಚೈತನ್ಯವನ್ನುಂಟುಮಾಡಿದರು. ಇವರ ಪುಣ್ಯಸ್ಮರಣೆಗಾಗಿ ಈ ಲೇಖನವನ್ನು ಪ್ರಕಟಿಸಲಾಗಿದೆ. ಸಂ].

"ಸರ್ಕಾರವು ಅವರನ್ನು ಆಳುವ ಅಧಿಕಾರಿಯಾಗು ಅನ್ನುತ್ತಿದ್ದರು. ಆದರೆ ಅವರು ತಮ್ಮೊಡನೆ ಕೆಲಸ ಮಾಡುವ ಕೂಲಿಕಾರರನ್ನೂ ತಮ್ಮಂತೆಯೇ ಭಾವಿಸಿ, ಪ್ರೀತಿಸುವ ಸಾಮಾನ್ಯರೇ ಆಗಿದ್ದರು. ಇದು ಅಂದಿನ ಕರಣಾಳು ಸರ್ಕಾರಕ್ಕೆ ರುಚಿಸಲಿಲ್ಲ. ಕೈಲಾಸಂ ನೌಕರಿಗೆ ರಾಜೀನಾಮೆ ಕೊಟ್ಟರು."—

ದಿ|| ಕೈಲಾಸಂರವರ ಆಪ್ತಮಿತ್ರರೂ, ಹೆಸರಾಂತ ಸಾಹಿತಿಗಳೂ ಆದ ಶ್ರೀ ಕೆ.ವಿ. ಅಯ್ಯರ್‌ರವರನ್ನು "ಕೈ" ರವರ ವ್ಯಕ್ತಿತ್ವದ ಪರಿಚಯ ಹೊಂದಲು ಸಂದರ್ಶಿಸಿದಾಗ ಅವರು ಹೇಳಿದ ಕೆಲವು ವಿಷಯಗಳು 'ಕೈ' ವ್ಯಕ್ತಿತ್ವದ ಬಗ್ಗೆ ಹೊಸ ಬೆಳಕು ಚೆಲ್ಲುವಂತಿದೆ. ಕೈಲಾಸಂರವರೊಡನೆ ಕೆಲಕಾಲ ಬಹಳ ಸಮೀಪದವರಾಗಿದ್ದು ಅವರ ಬಗ್ಗೆ ಅನುಭವಗಳನ್ನು ಸಂಗ್ರಹಿಸಿರುವ ಶ್ರೀ ಅಯ್ಯರ್ ರವರ ಭಾವನೆಗಳು ಅತಿ ಅಮೂಲ್ಯವಾದವು.

ಶ್ರೀ ಅಯ್ಯರ್‌ರವರನ್ನು 'ಕೈ' ರವರ

ಪ್ರಥಮ ದರ್ಶನದ ಬಗ್ಗೆ ಕೇಳಿದಾಗ— "ಈಗ ಮೂವತ್ತು ವರ್ಷಗಳ ಹಿಂದಿನ ಮಾತು. ಕೋಲಾರ್ ಚಿನ್ನದ ಗಣಿಯ ಬಳಿ ಕೈಲಾಸಂ "ಮೈನಿಂಗ್ ಇಂಜನಿಯರ್" ಎಂದು ಕೆಲಸ ಮಾಡುತ್ತಿದ್ದರು. ಅವರು ಉತ್ತಮ ಭಾಷಣಕಾರರು, ಆಂಗ್ಲ ಭಾಷಾ ಪಂಡಿತರು, ಅಸಾಮಾನ್ಯ ನಾಟಕ ಕಾರರು ಎಂದು ಮುಂತಾಗಿ ಕೇಳಿದ್ದೆ. ಅವರ ಮಾತುಗಳನ್ನು ಕೇಳಿ ಮುಗ್ಧರಾದವ ರನ್ನು ಕಂಡಿದ್ದೆ. ಆಕರ್ಷಿತನಾಗಿ ಅವರನ್ನು ಕಾಣಲು ಹೋದೆ. ನಾನು ಗಣಿಗಳ ಬಳಿಗೆ ಹೋದಾಗ ಸುಮಾರು ನಾಲ್ವತ್ತು ಜನ ಕೆಲಸ ಮಾಡುತ್ತಿದ್ದುದನ್ನು ಕಂಡೆ. ಯಾವ ಇಂಜನಿಯರ್‌ರೂ ನನ್ನ ಕಣ್ಣಿಗೆ ಬೀಳಲಿಲ್ಲ. ಸಮೀಪಕ್ಕೆ ಹೋಗಿ ವಿಚಾರಿಸಿದೆ. ಕೂಲಿಕಾರರಲ್ಲಿ ಕೂಲಿಕಾರರಾಗಿ, ಅವರಲ್ಲಿ ಕೆಲವರಿಗೆ ಅಗೆಯುವದನ್ನು ಕಲಿಸುತ್ತಿದ್ದ ಕೈಲಾಸಂರವರನ್ನು ಕಂಡಾಗ ಆಶ್ಚರ್ಯವಾಯಿತು. ಕೂಲಿಕಾರರನ್ನು ಹೆದರಿಸಿ, ಅವರ ಮೇಲೆ ದರ್ಬಾರು ಮಾಡುವ ಓರ್ವ ಆಫೀಸರನ ಚಿತ್ರ ನನ್ನ ಮನಸ್ಸಿನಲ್ಲಿದ್ದುದು ಮಾಯವಾಯಿತು. ಕೈಲಾಸಂರವರಲ್ಲಿ ಅಧಿಕಾರಿ ಎಂಬ ಜಂಭ, ಆಳಬೇಕೆಂಬ ಮನೋವೃತ್ತಿ ಎಳ್ಳಷ್ಟೂ ಇರಲಿಲ್ಲ. ಇವರಂಥ ಅಧಿಕಾರಿಗಳನ್ನು ಕಾಣುವುದು ಅತಿ ವಿರಳ.

ಇವರನ್ನು ಕಂಡಾಗ 'ನನ್ನಲ್ಲಿ ಉದ್ಭವವಾದ ಪ್ರಥಮ ಭಾವನೆಯೆಂದರೆ, 'ಕೈಲಾಸಂ ಅಸಾಮಾನ್ಯರು— ವಿಚಿತ್ರ ವ್ಯಕ್ತಿ' ಎಂದು–"

ಪ್ರ ಸರ್ಕಾರೀ ನೌಕರಿಯನ್ನು ಬಿಟ್ಟ ನಂತರ 'ಕೈ'ರವರಿಗೆ ಆರ್ಥಿಕ ಅಸ್ಥಿರತೆ ಒದಗಿತಲ್ಲವೆ ?

ಉ. ಅವರಿಗೆ ಯಾವಾಗಲೂ ಆರ್ಥಿಕ ಮುಗ್ಗಟ್ಟು ಇದ್ದೇ ಇತ್ತು. ಸರ್ಕಾರದ ಅಧಿಕಾರಿಯಾಗಿ ಐನೂರು, ಆರ್ನೂರು ಸಂಬಳ ಪಡೆಯುವಾಗಲೂ ಕೂಡ, ಸಂಬಳ ಬಂದ ಎರಡು-ಮೂರು ದಿನಗಳಲ್ಲಿ ಇದ್ದ ಹಣವನ್ನೆಲ್ಲಾ ಹಂಚಿ 'ಪಾಪರ್' ಆಗುತ್ತಿದ್ದರು. ಅವರಿಗೆ ಹಣದ ಮೇಲೆ ಮೋಹ ಇರಲಿಲ್ಲ— ಹಣಕ್ಕೆ ಅವರು ಲಕ್ಷ್ಯ ಕೊಟ್ಟವರೇ ಅಲ್ಲ. ಅವರು ವಿಚಿತ್ರ ವ್ಯಕ್ತಿ.

ಪ್ರ. ಪ್ರಾಪಂಚಿಕ ಮೌಲ್ಯಗಳ ದೃಷ್ಟಿಯಿಂದ, 'ಕೈ'ರವರು ಭಿನ್ನರಲ್ಲವೇ ?

ಉ. ಅವರು ಸಾಮಾನ್ಯರಂತಲ್ಲದೆ ಭಿನ್ನರಂತೂ ನಿಜ. ಅವರ ಪ್ರಾಪಂಚಿಕ ಮೌಲ್ಯಗಳ ದೃಷ್ಟಿಯೇ ಬೇರೆಯದಾಗಿತ್ತು. ಅವರು ಭಿನ್ನರಿದ್ದಂತೆಯೇ ವಿಚಿತ್ರರೂ ಆಗಿದ್ದರು.

ಪ್ರ. ಅವರು ಸಾಹಿತ್ಯ ರಚನೆಗೆ ಎಂದು ತೊಡಗಿದರು ?

ಉ. ಅವರಲ್ಲಿ ಸಾಹಿತ್ಯ ಸಂಪತ್ತು ಮೊದಲಿನಿಂದಲೇ ಇತ್ತು. ಇಂಗ್ಲಂಡಿನಿಂದ ಅನುಭವಗಳ, ಹೊಸ ಸಾಹಿತ್ಯ

ಪ್ರಯೋಗಗಳ ನಾವೀನ್ಯತೆಯ ಸಂಪತ್ತನ್ನೂ ಅವರು ತಂದಿದ್ದರು. ಅಲ್ಲಿಯ ಸಾಮಾಜಿಕ ನಾಟಕಗಳ ಪ್ರಯೋಗ, ಪರಿಣಾಮುಗಳನ್ನೂ ಅಭ್ಯಸಿಸಿದ್ದರು. ಆದರಂತೆ ಕನ್ನಡದಲ್ಲೂ ಸಾಮಾಜಿಕ ನಾಟಕಗಳ ಪ್ರಯೋಗವಾಗಬೇಕೆಂಬ ಆಶೆ ಅವರಲ್ಲಿತ್ತು. ಸರ್ಕಾರೀ ನೌಕರಿಗೆ ರಾಜೀನಾಮೆ ಕೊಟ್ಟದ್ದು ಇವರ ಹೊಸ ಉಪಕ್ರಮಕ್ಕೆ, ಸಾಹಿತ್ಯ ರಚನೆಗೆ ಹೆಚ್ಚು ಅವಕಾಶವನ್ನು ಒದಗಿಸಿತು. ಅವರು ನಾಟಕ, ಕವನ, ಮುಂತಾದ ಸಾಹಿತ್ಯ ಕೃತಿ ರಚನೆಗೆ ತೊಡಗಿದರು. "ಟೊಳ್ಳು – ಘಟ್ಟಿ" –ಅವರ ಪ್ರಥಮ ನಾಟಕ ಪ್ರಯೋಗ.

ಪ್ರ. ನೀವು ಈ ನಾಟಕ ಪ್ರಥಮ ಸಲ ಪ್ರದರ್ಶಿಸಲಾದಾಗ ನೋಡಿದಿರಾ ?

ಉ. ಇಲ್ಲ. ನಾನು ಅದು ಪ್ರಕಟವಾದೊಡನೆ ಓದಿ, ಆನಂದ ಪಟ್ಟೆ. ಆದರೆ, ನಾಟಕ ನೋಡಿರಲಿಲ್ಲ. ಬೆಂಗಳೂರಿನ 'ಅಮೆಚೂರ್ ನಾಟಕ ಸಂಘ' ದವರು ಇದರ ಪ್ರಥಮ ಪ್ರಯೋಗ ಮಾಡಿದರು.

ಪ್ರ. ನಿಮ್ಮ –ಕೈರವರ ಪ್ರಥಮ ಭೇಟಿಯಾದನಂತರ ಅವರು ನಿಮ್ಮ ಸಮೀಪದವರಾದರೆ ?

ಉ. ನಾನೇ ಅವರ ಅತಿ ಸಮೀಪಕ್ಕೆ ಹೋಗಲು ಯತ್ನಿಸಿದೆ. ಕೆಲಸಮಯ ಬಹಳ ಕೂಡಿಇರುವ ಸುಯೋಗ ನನಗೆ ಲಭಿಸಿತು. ಅವರು ನಮ್ಮ ಮನೆಯ ಬಳಿಯೇ ಇದ್ದರು.

ಪ್ರ. ನೀವು– ಅವರು ಕೂಡಿದಾಗ ಹೇಗೆ ಕಾಲವನ್ನು ವಿನಿಯೋಗಿಸುತ್ತಿದ್ದಿರಿ ?

ಉ. ಅವರು ನನ್ನ ಕೆಲಸದ ಸಮಯವನ್ನು ಹೆಚ್ಚಾಗಿ ತೆಗೆದುಕೊಳ್ಳುತ್ತಿರಲಿಲ್ಲ. ಸಾಮಾನ್ಯವಾಗಿ ಸಂಜೆ ಹಾಗೂ ರಾತ್ರಿಗಳನ್ನು ಕೂಡಿ ಕಳೆಯುತ್ತಿದ್ದೆವು. ನಾನು ಅವರು ಹೇಳಿದ್ದನ್ನು ಬರೆಯುತ್ತಿದ್ದೆ.

ಪ್ರ. ನಿಮಗೆ ಅವರು 'dictate' ಮಾಡಿದ ಕೆಲ ನಾಟಕಗಳ ಹೆಸರು ಹೇಳುವಿರಾ ?

ಉ. ತಾವರೇಕೆರೆ, ಅಹೋಬ್ಲು, ಅಮ್ಮಾವ್ರ ಗಂಡ, ಹುತ್ತದಲ್ಲಿ ಹುತ್ತ ಮುಂತಾದವು.

ಪ್ರ. ಅವರು ನಾಟಕಗಳನ್ನು ಬರೆಸುವಾಗ ಆ ನಾಟಕಗಳು ಯಾವುದಾದರೂ ಘಟನೆ ( ವೈಯಕ್ತಿಕ ) ಗಳ ಅಥವಾ ಅಂತಃಸ್ಫೂರ್ತಿಯ ಪ್ರೇರಣೆಯಿಂದ ಸ್ಫುಟವಾದವು ಎಂದೇನಾದರೂ ಅನಿಸುತ್ತಿತ್ತೋ ?

ಉ. ಅದು ನನಗೆ ಗೊತ್ತಿಲ್ಲ. ಅವರ ಮನಸ್ಸಿನಲ್ಲಿ ಆ ನಾಟಕಗಳು ಹೇಗೆ ರೂಪುಗೊಂಡವೋ, ಎಷ್ಟು ಕಾಲ ಮನಸ್ಸಿನ ಕುಲುಮೆಯಲ್ಲಿ ಬೆಂದು, ಪಕ್ವವಾಗಿ ಹೊರಬರುತ್ತಿದ್ದವೋ ನಾನು ಹೇಳಲಾರೆ.

ಪ್ರ. ನಾಟಕಗಳನ್ನು ಬರೆಸಲು ಪ್ರಾರಂಭಿಸಿದರೆ, ಅಡೆ–ತಡೆ ಇಲ್ಲದೆ ಅವರು ಹೇಳುತ್ತಿದ್ದರೇ ?

ಉ. ಅವರು ನಾಟಕಗಳನ್ನು ಹೇಳಲು ಪ್ರಾರಂಭಿಸಿದರೆ, ಒಂದೇ ಸಮನೆ, ಆತಂಕಗಳಿಲ್ಲದೆ ಸಂಭಾಷಣೆಗಳು ಪ್ರವಾಹದಂತೆ ಹರಿಯುತ್ತಿದ್ದವು. ಅನೇಕ ಸಲ ರಾತ್ರಿ ಕೂತು ಮುಂಜಾನೆಯ ವರೆಗೆ ಬರೆಸುತ್ತಿದ್ದರು. ಸಾಮಾನ್ಯವಾಗಿ ಮೂರು – ನಾಲ್ಕು ತಾಸಾದರೂ ಬರೆಯುತ್ತಿದ್ದೆವು.

ಪ್ರ. ಒಂದು ನಾಟಕಕ್ಕೆ ಎಷ್ಟು ದಿನಗಳ ಕಾಲ ತೆಗೆದುಕೊಳ್ಳುತ್ತಿತ್ತು ?

ಉ. ಕೆಲವು ನಾಟಕಗಳು ನಾಲ್ಕೈದು ದಿನಗಳು ತೆಗೆದುಕೊಳ್ಳುತ್ತಿದ್ದರೆ, ಕೆಲವು ಹತ್ತು-ಹದಿನೈದು ದಿನ ತೆಗೆದುಕೊಳ್ಳುತ್ತಿದ್ದವು.

ಪ್ರ. ಅವರ ಸಾಮಾಜಿಕ ನಾಟಕಗಳಲ್ಲಿ 'ಅಮ್ಮಾವ್ರ ಗಂಡ' ಒಂದು ವಿಶಿಷ್ಟತೆಯುಳ್ಳದ್ದಾಗಿದೆ. ಇದರಲ್ಲಿಯ ಸಂಭಾಷಣೆಗಳನ್ನು ಬರೆಸುವಾಗ ಅವರ ಪ್ರತಿಕ್ರಿಯೆಗಳು ಏನಾಗಿದ್ದವೆಂದು ವಿವರಿಸುವಿರಾ ?

ಉ. ಅವರ ಪ್ರತಿಕ್ರಿಯೆಗಳನ್ನು ಗಮನಿಸುವ ಅವಕಾಶ ಬರೆದುಕೊಳ್ಳುತ್ತಿದ್ದವರಿಗೆ ಲಭಿಸುತ್ತಲೇ ಇರಲಿಲ್ಲ. ಅವರು ಬರವಣಿಗೆಯ ಪಾಠ ದೋಷರಹಿತವಿರಬೇಕೆಂಬುದರ ಬಗ್ಗೆ ಬಹಳ ಮಹತ್ವ ಕೊಡುತ್ತಿದ್ದರು. ಆದ್ದರಿಂದ ನಮಗೆ ನಾವು ಬರೆಯುವುದರ ಕಡೆಯೇ ಲಕ್ಷ್ಯವಿರುತ್ತಿತ್ತು.

**ಕತ್ತಲೆಯಿಂದ ಬೆಳಕು !**

ಕೈಲಾಸಂರವರ ಇನ್ನೊಂದು ಪದ್ಧತಿ ಎಂದರೆ, ತಾವು ಕತ್ತಲಲ್ಲಿ ಕೂತು ಸಂಭಾಷಣೆಗಳನ್ನು ಹೇಳುತ್ತಿದ್ದರು. ನಮಗಿಂತ ಸ್ವಲ್ಪ ದೂರದಲ್ಲೇ ಅವರಿರುತ್ತಿದ್ದರು. ನಾವು ಚಿಮಣಿ ಎಣ್ಣೆಯ ದೀಪದ ಬೆಳಕಿನಲ್ಲಿ ಬರೆದುಕೊಳುತ್ತಿದ್ದೆವು.

ಹೀಗಾಗಿ ಬರೆದುಕೊಳ್ಳುವಾಗ ಅವರ ಪ್ರತಿಕ್ರಿಯೆ ನೋಡುವ ಅವಕಾಶ ನಮಗೆ ಇರಲೇ ಇಲ್ಲ.

ಪ್ರ. ಅವರ ಸಾಂಗತ್ಯದಲ್ಲಿ ನಿಮಗೆ ಆಗಿರುವ ರೋಮಾಂಚಕಾರೀ, ಅಥವಾ ಬಹಳ ಮಹತ್ವಪೂರ್ಣವೆನಿಸುವ ಸನ್ನಿವೇಶಗಳಲ್ಲಿ ಕೆಲವನ್ನು ಹೇಳುವಿರಾ ?

ಉ. ಕೈಲಾಸಂರವರಲ್ಲಿ ನಾವು ಅನೇಕಸಲ ಪ್ರತಿಭೆಯ ಮಿಂಚನ್ನು ಕಾಣುತ್ತಿದ್ದೆವು.

ಒಮ್ಮೆ ಗುಬ್ಬಿ ವೀರಣ್ಣನವರ ನಾಟಕಕ್ಕೆ ನಾನು ಕೈಲಾಸಂರವರೊಡನೆ ಹೋಗಿದ್ದೆ. ಅದು "ಕುರುಕ್ಷೇತ್ರ" ನಾಟಕ. ಶ್ರೀ ವೀರಣ್ಣನ ನಾಟಕಗಳಲ್ಲಿಯ ವೈಶಿಷ್ಟ್ಯವೆಂದರೆ ಯುದ್ಧ ಭೂಮಿಯ ದೃಶ್ಯದಲ್ಲಿ ನಿಜವಾದ ಆನೆ, ಕುದುರೆ, ರಥಗಳನ್ನೇ ರಂಗಸ್ಥಳಕ್ಕೆ ತರುವುದು. ಅಂದು ಅರ್ಜುನನ ರಥಕ್ಕೆ ಸ್ವಚ್ಛ ಬಿಳುಪಿನ ಕುದುರೆಗಳನ್ನು ಕಟ್ಟಿದ್ದರು. ಅವು ರಂಗಸ್ಥಳಕ್ಕೆ ಬಂದವು. ಯುದ್ಧದ ದೃಶ್ಯ............ಸಭಾಭವನದಲ್ಲಿ ಭಯಾನಕ ನಿಶ್ಶಬ್ದ, ಯುದ್ಧದ ವಾತಾವರಣ. ಅದರಲ್ಲಿ ಒಂದು ಕುದುರೆ ಮೂತ್ರ

ವಿಸರ್ಜನೆ ಮಾಡಿತು. ಪಾಪ! ರಂಗ ಸ್ಥಳದ ಪರಿಜ್ಞಾನ ಅದಕ್ಕೆಲ್ಲಿಯದು? ಅದೂ ಅಲ್ಲದೆ ಆ ಮೂತ್ರ ರಂಗದಿಂದ ಹರಿದು ಸಭೆಯ ಮುಂದಿನ ಸಾಲಿನಲ್ಲಿ ಕುಳಿತಿದ್ದ ಆಹ್ವಾನಿತರ ಕಡೆ ಬರಲಾರಂಭಿಸಿತು. ನಾವು ಎರಡನೆಯ ಸಾಲಿನಲ್ಲಿದ್ದೆವು. ಕೈಲಾಸಂ ತಕ್ಷಣ "ಉಚ್ಚೈ ಶ್ರವಸ್" ಎಂದರು. 'ಉಚ್ಚೈ ಶ್ರವಸ್ಸು' ಇಂದ್ರನ ಕುದುರೆಯ ಹೆಸರು. ಅದನ್ನು 'ಉಚ್ಚೈ-ಶ್ರವಿಸು' ಎಂಬ ಅರ್ಥ ಬರುವಂತೆ ಬಳಸಿದ್ದು ನಮ್ಮ ಸುತ್ತ ಕೂತಿದ್ದ ಎಷ್ಟೋ ಪಂಡಿತರಿಗೂ ತಕ್ಷಣ ಹೊಳೆಯಲಿಲ್ಲ. ಸ್ವಲ್ಪ ಹೊತ್ತಿನ ನಂತರ ನಾಟಕ ಭವನದ ತುಂಬೆಲ್ಲಾ ನಗುವಿನ ಪ್ರತಿಧ್ವನಿ ತುಂಬಿತು. ಒಬ್ಬೊಬ್ಬರು ನಗಲು ಪ್ರಾರಂಭಿಸಿದಾಗ ಈ ಸಾಂಕ್ರಾಮಿಕ ಎಲ್ಲೆಡೆ ಹಬ್ಬಿತು. ಕೈಲಾಸಂ ಎಲ್ಲರೊಡನೆ ತಾವೂ ನಕ್ಕರು.

ಎಷ್ಟೋ ಸಲ ನಾಲ್ಕಾಣೆ ಟಿಕೆಟ್ ತೆಗೆದುಕೊಂಡು ಹಳ್ಳಿಯವರೊಡನೆ ಕೂತು ನಾಟಕದ ಮೋಜನ್ನು ಅನುಭವಿಸುತ್ತಿದ್ದರು. ಅವರ ವ್ಯಕ್ತಿತ್ವದ ನೆಲೆ ಹಿಡಿಯಲು ದುಸ್ಸಾಧ್ಯವಾಗಿತ್ತು. ಅವರು ವಿಚಿತ್ರ ವ್ಯಕ್ತಿಯೆಂದು ಆಗಾಗ ತೋರುತ್ತಿತ್ತು.

ಪ್ರ. ನೀವು ಕೈಲಾಸಂರವರು ಅಭಿನಯಿಸಿದ್ದನ್ನು, ನಿರ್ದೇಶಿಸಿದ್ದನ್ನು ನೋಡಿದ್ದೀರಾ? ಅವರ ನಟನಾ ಕುಶಲತೆಯ ಬಗ್ಗೆ ನಿಮಗೇನು ಅಭಿಪ್ರಾಯವಿದೆ?

ಉ. ನಾನು ಅವರ ಅಭಿನಯವನ್ನು ನೋಡಿದ್ದೇನೆ. ಅದೇಕೋ ಅವರು ರಂಗಸ್ಥಳದಲ್ಲಿ ಧೈರ್ಯಹೀನರಾಗುತ್ತಿದ್ದರು. ಹೀಗೆ ಅವರು ನಿಸ್ತೇಜಗೊಂಡಾಗ ನಟನೆ ಆಕರ್ಷಕವಿರುತ್ತಿಲಿಲ್ಲ. ಇದಕ್ಕೆ ಕಾರಣ ಅವರ ಸಹನಟರು ಉತ್ತಮ ಸಹಕಾರ ಕೊಟ್ಟು ನಾಟಕಕ್ಕೆ ಹೊಸಕಳೆ ತರಲು ಸಮರ್ಥರಿರುತ್ತಿರಲಿಲ್ಲ. ಅವರು ಉತ್ತಮ ನಿರ್ದೇಶಕರಿದ್ದರು. ಒಬ್ಬೊಬ್ಬ ನಟನನ್ನೂ ಅತ್ಯುತ್ತಮ ಅಭಿನಯ ತೋರಲು ತಯಾರು ಮಾಡುವ ಯತ್ನ ಮಾಡುತ್ತಿದ್ದರು. ಅವರ ನಿರ್ದೇಶನವನ್ನು ಪಾಲಿಸದಿದ್ದರೆ ಉದ್ರೇಕಗೊಳ್ಳುತ್ತಿದ್ದರು. ರಂಗಸ್ಥಳದಲ್ಲಿ ಕೆಲವೊಮ್ಮೆ ಉದ್ರೇಕಗೊಳ್ಳುತ್ತಿದ್ದುದೇ ಅವರ ನಿಸ್ತೇಜಕ್ಕೆ ಕಾರಣವಾಗುತ್ತಿತ್ತು.

ಆದರೆ ಅವರು ಏಕಪಾತ್ರಾಭಿನಯ ಮಾಡಿದಾಗ ಬಹಳ ಉತ್ತಮವಾಗಿ ನಟಿಸುತ್ತಿದ್ದರು. ಅವರು ಕಿಪ್ಲಿಂಗ್‌ರವರ "ಇಫ್" (If) ಪದ್ಯ ಹಾಡುವಾಗ ತಲ್ಲೀನರಾಗುತ್ತಿದ್ದರು. ಈ ಪದ್ಯ ಅವರಲ್ಲಿ ಹೊಸ ಚೈತನ್ಯವನ್ನು ತುಂಬುತ್ತಿತ್ತು.

ಪ್ರ. 'ಕೈ'ರವರ ನಾಟಕಗಳು ಯಾವುದಾದರೂ ಘಟನೆಯಿಂದ ಸ್ಫುಟಗೊಂಡು, ಸ್ಫೂರ್ತಿ ಪಡೆಯುತ್ತಿದ್ದವೋ ಹೇಗೆ? ತಿಳಿಸುವಿರಾ?

ಉ. ನಾನು ಹೇಳಲಾರೆ, ಅವರು ಮಹಾ ಭಾರತ, ರಾಮಾಯಣಾದಿಗಳನ್ನು ಓದಿದ್ದರು. ಪಾಶ್ಚಾತ್ಯರ ಸಾಮಾಜಿಕ ನಾಟಕಗಳ ಮೊರಗನ್ನು ಕಂಡಿದ್ದರು. ನಮ್ಮ ಸಮಾಜದ ದುರವಸ್ಥೆಯನ್ನು ನೋಡಿದ್ದರು. ಅವರ ನಾಟಕಗಳು ಎಲ್ಲಿಂದ ರೂಪು ಗೊಳ್ಳುತ್ತಿದ್ದವೋ ಹೇಳಲು ಸಾಧ್ಯವಿಲ್ಲ. ಆದರೆ ಅವರು 'ಭಾಸ'ನ ಆರಾಧಕರು. ಪೌರಾಣಿಕ ವಸ್ತು ನಾಟಕಗಳಲ್ಲಿ ಭಾಸನ ರೀತಿ ಬಳಸಿದಂತೆ ತೋರಿದರೂ ಪ್ರತಿ ಘಟನೆಗೆ ಅವರದೇ ರೂಪ, ಪ್ರತಿ ಮಾತಿಗೆ ಅವರದೇ ವ್ಯಾಖ್ಯೆ ರಚಿತವಾಗುತ್ತಿದ್ದವು.

ಪ್ರ. ಅವರ 'ಕರ್ಣ' ನಾಟಕ ಓದಿದ್ದನ್ನು ಕೇಳಿದ್ದೀರಾ ?

[ಈ ಪ್ರಶ್ನೆಯನ್ನು ಕೇಳಿದಾಗ ಶ್ರೀ ಅಯ್ಯರ್‌ರವರು ಕೆಲ ನಿಮಿಷಗಳ ಕಾಲ ಕಣ್ಮುಚ್ಚಿ ಭಾವಪರವಶರಾಗಿ ಸ್ಮೃತಿ ಪಟಲವನ್ನು ತಿರುವಲಾರಂಭಿಸಿದರು. ನಂತರ ಇದ್ದಕ್ಕಿದ್ದಂತೆಯೆ........]

ಉ. ಅಂದು ಕ್ರಿಸ್‌ಮಸ್ ಹಬ್ಬ. ಬೆಂಗಳೂರಿನ ಬಿ. ಆರ್. ವಿ. ಥಿಯೇಟರಿನಲ್ಲಿ 'ಷೇಕ್ಸ್‌ಪಿಯರ್' ನಾಟಕ ಒಂದು ನಡೆದಿತ್ತು. ನಾಟಕ ಮುಗಿದಾಗ ರಾತ್ರಿ ಒಂದು ಗಂಟೆಯಾಗಿತ್ತು. ಕ್ರಿಸ್‌ಮಸ್ ಚಳಿ. ಕೈಲಾಸಂ ಒಂದು ಉತ್ತಮ ಉಣ್ಣೆಯ ಓವರ್ ಕೋಟ್ ಹಾಕಿದ್ದರು. ನಾನು ಅಂದು ಸಿಲ್ಕ್ ಜುಬ್ಬಾ ಹಾಕಿ, ಪಂಚೆ ಉಟ್ಟಿದ್ದೆ. ಆ ಚಳಿ ತಡೆಯಲಾರದೆ ನನ್ನ ಮೈ ನಡಗುತ್ತಿತ್ತು. ಆ ಚಳಿ ತಡೆಯಲು ನನಗೆ ದುಸ್ಸಾಧ್ಯವೇ ಆಗಿತ್ತು. ಆದರೆ 'ಕೈ' ರವರು ಏನೋ ತನ್ಮಯತೆಯಲ್ಲಿದ್ದರು. ಸ್ವಲ್ಪ ದೂರ ಹೋದ ನಂತರ 'ಕರ್ಣ' ನಾಟಕವನ್ನು ಹೇಳಲಾರಂಭಿಸಿದರು. ಆ ನಾಟಕದ ಪಾತ್ರಗಳ ಸಂಭಾಷಣೆಗಳು ಒಂದೊಂದೇ ರೂಪುಗೊಂಡು ಪ್ರವಾಹದಂತೆ ಹರಿಯಲಾರಂಭಿಸಿದವು. ಅವರ ತನ್ಮಯತೆ, ನಾಟಕವನ್ನು ಹೇಳುವಾಗ ಭಾವಪರವಶತೆ, ಮಹಾಭಾರತದ ವ್ಯಾಖ್ಯೆಗೆ ಹೊಸ ವ್ಯಾಖ್ಯೆ ಧರಿಸಿ ಚಿತ್ರಿತವಾಗುತ್ತಿದ್ದ ಪಾತ್ರಗಳ ವೈವಿಧ್ಯತೆ ಕೇಳಿದಂತೆ ನನ್ನ ಮೈ ಮುಳ್ಳೇರಿತು, ಚಳಿ ಮಾಯವಾಗಿತ್ತು, ದೇಹದಲ್ಲಿ ರಕ್ತ ಕುದ್ದು ಬಿಸಿಯಾಗಿತ್ತು, ನನ್ನನ್ನು ನಾನೇ ಮರೆತಿದ್ದೆ. ಕರ್ಣಮಯವಾಗಿತ್ತು ನನ್ನ ಬುದ್ಧಿ-ಭಾವ-ಮನಸ್ಸು. ಅಂದು ನನ್ನ ದೇಹದಲ್ಲಿ ಒಂದು ಹೊಸ ತೇಜ-ಹೊಸ ಶಕ್ತಿ-ಹೊಸ ಬೆಳಕು ಹರಿದಂತಾಯಿತು.

[ಶ್ರೀ ಅಯ್ಯರ್‌ರವರು ತಮ್ಮ ಈ ಪರವಶತೆಯನ್ನು ಭಾವಪೂರ್ಣ, ಭಾವಪರವಶತೆಯಿಂದ ಹೇಳಿದಾಗ ನಾನೂ ಭಾವಪರವಶನೇ ಆದೆ. ಶ್ರೀ ಅಯ್ಯರರವರು 'ಕರ್ಣ' ನಾಟಕವನ್ನು ಕೇಳಿ ಪಡೆದ ಭಾವಚೇತನ, ನಮ್ಮ ಅನು

ಭವಕ್ಕೂ ಬಂತು. ಮುಂದಿನ ಪ್ರಶ್ನೆ ಕೇಳಲು ನಾನೂ ಚೇತರಿಸಿಕೊಳ್ಳಬೇಕಾಯಿತು.]

ಪ್ರ. ಅವರು 'ಪರ್ಪಸ್' ನಾಟಕ ಬರೆಸಿದಾಗ ಒಂದು ಸಮಸ್ಯೆ ಉದ್ಭವವಾಯಿತೆಂದು ದಂತ ಕಥೆ ಇದೆ. ದ್ರೋಣಾಚಾರ್ಯರನ್ನು ಭೀಷ್ಮಾಚಾರ್ಯರು ಭೆಟ್ಟಿಯಾದಾಗ ಯಾರು ಯಾರನ್ನು ಪ್ರಥಮವಾಗಿ ನಮಿಸಬೇಕೆಂಬುದೇ ಆ ಸಮಸ್ಯೆಯೆಂದು. ಇದರ ಬಗ್ಗೆ ಬೆಳಕು ಚೆಲ್ಲುವಿರಾ ?

ಉ. ಹೌದು. ಅವರಿಗೆ ಈ ಸಮಸ್ಯೆ ಹುಟ್ಟಿತ್ತು ಭೀಷ್ಮಾಚಾರ್ಯರೋ ಅನಭಿಷಿಕ್ತ ರಾಜರು. ದ್ರೋಣಾಚಾರ್ಯರೋ ಗುರುವರ್ಯರು–ಬ್ರಾಹ್ಮಣೋತ್ತಮರು. ಆದ್ದರಿಂದ ಸಮಸ್ಯೆ. ಈ ಸಮಸ್ಯೆಗೆ ದಿ. ತಾರಾನಾಥರು ಪರಿಹಾರವನ್ನು ಒದಗಿಸಿದರು. ತಾರಾನಾಥರ ಮೇಲೆ ಕೈಲಾಸಂರವರಿಗೆ ಅತ್ಯಂತ ಗೌರವ–ಭಕ್ತಿ. ಅವರನ್ನು ಕೈಲಾಸಂ ಗುರುಸ್ಥಾನದಲ್ಲಿರಿಸಿದ್ದರು. ತಾರಾನಾಥರ ಸಲಹೆಯಂತೆ ಬ್ರಾಹ್ಮಣನಿಗೆ ಪ್ರಥಮ ಗೌರವ ಸಲ್ಲಬೇಕೆಂದು ನಿರ್ಣಯಿಸಿದರು. ಭೀಷ್ಮಾಚಾರ್ಯರು "Prostrations Acharya" ಎಂದು ಗೌರವಿಸಿದಾಗ ದ್ರೋಣಾಚಾರ್ಯರು "Greetings Gangeya" ಎಂದು ಸ್ವಾಗತಿಸುತ್ತಾರೆ.

ಪ್ರ. ಕೈಲಾಸಂರವರು ಹಾಸ್ಯಪ್ರಿಯರು; ಅವರು, ಹಾಸ್ಯಕ್ಕಾಗಿ ಇತರರನ್ನು ಅವಮಾನಿಸಿದ ಪ್ರಸಂಗಳಾವುದಾದರೂ ಇವೆಯೋ ?

ಉ. ಅವರು ಯಾರನ್ನೂ ಅವಮಾನಗೊಳಿಸುತ್ತಿರಲಿಲ್ಲ. ಆದರೆ ಅವರನ್ನು ಅವಮಾನಗೊಳಿಸಲು ಹೋದರೆ, ಅವಮಾನಗೊಳಿಸಲೆತ್ನಿಸಿದವರನ್ನು ಹಾಸ್ಯದಿಂದಲೇ ಹೆಣ ಹಾಕುತ್ತಿದ್ದರು.

ಪ್ರ. ಸಮಾಜದ ನ್ಯೂನತೆಗಳ ಬಗ್ಗೆ ಕೈಲಾಸಂರವರ ಪ್ರತಿಕೆಯ ಏನಾಗಿತ್ತು?

ಉ. ಸಮಾಜದ ನ್ಯೂನತೆಗಳನ್ನು ನೋಡಿ ಅವರು ತಾತ್ಸಾರ ಪಡುತ್ತಿರಲಿಲ್ಲ; ದಯೆ-ಕರುಣೆಗಳನ್ನು ತಾಳಿದ್ದರು. ತಮ್ಮ ವಿಚಾರಗಳನ್ನು ಬಲಾತ್ಕಾರದಿಂದ ಯಾರಮೇಲೂ ಹೇರಬೇಕೆಂದು ಬಯಸುತ್ತಿರಲಿಲ್ಲ. ಆದರೆ ನ್ಯೂನತೆಗಳನ್ನು ಎತ್ತಿ ತೋರಬೇಕೆಂಬುದನ್ನು ಮಾತ್ರ ಬಯಸಿದ್ದರು.

ಪ್ರ: ಕೈಲಾಸಂರವರು ನಾಟಕಕಾರರಾಗಿ ಯಶಸ್ಸನ್ನು ಹೊಂದುವ ಗುಟ್ಟೇನಾಗಿತ್ತೋ ಹೇಳುವಿರಾ ?

ಉ: ತರುಣರ ಪೀಳಿಗೆ ಕೈಲಾಸಂರವರ ನಾಟಕಗಳನ್ನು ಸ್ವಾಗತಿಸಿತು. ವಿಚಾರವಂತರು ಪ್ರಶಂಸಿಸಿದರು. ಕೆಲವು ಪಂಡಿತರಿಗೆ ಅವರ ಶೈಲಿ ಸಾಹಿತ್ಯ ರೀತಿ ವಿಚಾರಗಳು ಹಿಡಿಸಲಿಲ್ಲವಾದರೂ ಅವರು ತಮ್ಮ ಕಾರ್ಯದಲ್ಲಿ ಮುಂದು

ಬರೆದರು. ಆದರೆ ಅವರ ಯಶಸ್ಸಿಗೆ ಬೇರಾವುದಾದರೂ ಕಾರಣ ಇತ್ತೋ ಏನೋ ನನಗೆ ಗೊತ್ತಿಲ್ಲ. ಸ್ನೇಹಿತರ ಬೆಂಬಲ, ಪ್ರೋತ್ಸಾಹವೂ ಅವರಿಗೆ ಇತ್ತು. ಆದರೆ ಅವರ ನಾಟಕಗಳ ಅಂತಃಸತ್ವ, ಗುರಿ ಅನೇಕರಿಗೆ ತಿಳಿಯ ಲಿಲ್ಲ. ಅವುಗಳಲ್ಲಿಯ ವಿಡಂಬನೆಯನ್ನು ಕಂಡು ನಕ್ಕರು. ಅದರ ಹಿನ್ನೆಲೆಯ ನೋವು–ಕರುಣೆಗಳನ್ನು ಅರಿಯಲಿಲ್ಲ. ಅವರ ಆ ತುಂತುರು ನಗೆಯು ಕಣ್ಣೀರಿನ ಸಮುದ್ರದೆಡೆಗೆ ಸಾಗುವ ಹಾದಿ ಎಂದು ಎಷ್ಟು ಜನರಿಗೆ ತಿಳಿದಿತ್ತು ?

ಪ್ರ: ಅವರ ನಾಟಕಗಳ ಬಗ್ಗೆ ಅವರು ಏನು ಆಶೆ ತಾಳಿದ್ದರು ?

ಉ: ಅವರ ನಾಟಕಗಳು ರಂಗ ಸ್ಥಳಕ್ಕೆ ಬರಬೇಕು. ನಮ್ಮ ಜನ ಅವನ್ನು ನೋಡಬೇಕು, ಎಂಬುದೇ ಅವರ ಆಶೆ ಯಾಗಿತ್ತು.

ಆದರೆ ಕೈಲಾಸಂರವರಲ್ಲಿ ತಾವು ಶ್ರೇಷ್ಠರು, ಇತರರು ನಿಕೃಷ್ಟ ರೆಂತಾದ ಭಾವನೆಗಳನ್ನು ಎಂದೂ ನಾವು ಕಂಡಿಲ್ಲ. ಅಂತಹ ನಿಗರ್ವಿ, ಸರಳ ಸ್ವಭಾವಿ; ನಮ್ರ ವ್ಯಕ್ತಿ ಲಭಿಸುವುದು ವಿರಳ. ಅವರು ನಿರರ್ಗಳವಾಗಿ, ಅವಿಶ್ರಾಂತರಾಗಿ ಮಾತನಾಡುತ್ತಿದ್ದರು. ಅವರ ತುಟಿಗಳ ಮೇಲೆ ನೊಣ ಕೂಡಲು ಅವಕಾಶ ಹೇಗೆ ದೊರೆತೀತು ? ( We couldn't see flies on his lips).

ಪ್ರ: ಅವರು ಸ್ನೇಹಿತರ ಬಗ್ಗೆ ಏನು ಭಾವನೆ ತಾಳಿದ್ದರು ?

ಉ: ಅವರಿಗೆ ಸ್ನೇಹಿತರೇ ಪ್ರಾಣ. ಅವರು ಗೆಳೆತನಕ್ಕೆ ಅತಿ ಹೆಚ್ಚಿನ ಮೌಲ್ಯ ಕೊಟ್ಟಿದ್ದರು. ಕೆಲವರೊಡನೆ ಅವರು ಅತಿ ಸಮೀಪವರ್ತಿಗಳಾಗಿದ್ದರೇನೋ ನಿಜ. ಆದರೆ ಅವರಿಗೆ ಸ್ನೇಹಿತರು ಮಾತ್ರ ಸದಾ ಬೇಕಿದ್ದರು.

ಪ್ರ; ಅವರಿಗೆ ಶತ್ರುಗಳೆಂದು ಯಾರಾದರೂ ಇದ್ದರೆ ?

[ಈ ಪ್ರಶ್ನೆ ಶ್ರೀ ಅಯ್ಯರ್‌ರವರನ್ನು ಬೆರಗುಗೊಳಿಸಿದಂತೆ ತೋರಿತು. ತಕ್ಷಣ ನಿಶ್ಶಬ್ದ ಅಲ್ಲಿಯ ವಾತಾವರಣ ವನ್ನು ಆವರಿಸಿತು. ಅವರು ಚಿಂತಾ ಗ್ರಸ್ತರಾದರು...........]

ಉ. 'ಸಮೋಽಹಂ ಸರ್ವ ಭೂತೇಷು' ಎಂಬುದು ಕೈಲಾಸಂರವರ ತತ್ವ. "Neither friends nor foes can hurt you, if all men count with you but none too much"— "ಗೆಳೆಯರೇ ಆಗಲಿ, ಶತ್ರುಗಳೇ ಆಗಲಿ, ಎಲ್ಲರನ್ನೂ ಸಮನಾಗಿ ನೋಡಿಕೊಂಡು ಯಾರನ್ನೂ ಅತಿಯಾಗಿಸಿಕೊಳ್ಳದಿದ್ದರೆ ಯಾರೂ ನಿನ್ನನ್ನು ನೋಯಿಸಲಾರರು"— ಈ ಗುರಿಯಿಂದ ಅವರು ಸಾಗಿದ್ದರು.

ಪ್ರ. ಅವರು ಉತ್ತಮ ಆಟಗಾರರೆಂದು ಕೇಳಿದ್ದೇವೆ. ನೀವು ಅವರು ಆಟ ಆಡಿದ್ದನ್ನು ನೋಡಿದ್ದೀರಾ ?

ಉ. ಅವರು ಫುಟ್‌ಬಾಲ್ ಆಟದಲ್ಲಿ ಗೋಲ್ ಕೀಪರ್ ಆಗಿದ್ದುದನ್ನು ನಾನು ನೋಡಿದ್ದೇನೆ. ಬಹಳ ಉತ್ತಮ 'ಗೋಲೀ' ಎಂದು ಅವರನ್ನು ಪರಿಗಣಿಸಬಹುದಂತಹ ಆಟ ಅವರು ಆಡಿದ್ದರು.

ಅವರು ಉತ್ತಮ ಕ್ರೀಡಾಪಟುಗಳು. 'ಹಾಕೀ' ಕೂಡಾ ಆಡುತ್ತಿದ್ದರು. ಅವರು 'ಬಿಲಿಯರ್ಡ್ಸ್' ಕೂಡಾ ಚೆನ್ನಾಗಿ ಆಡುತ್ತಿದ್ದರು. ಅವರಿಗೆ ಉತ್ತಮ ದೇಹಕಟ್ಟು ಇತ್ತು.

ಪ್ರ. ಕೈಲಾಸಂ ಈಗಿನ ಕಾಲದಲ್ಲಿ ಬದುಕಿದ್ದರೆ ?

ಉ. ಈ ಪ್ರಶ್ನೆಗೆ ಉತ್ತರ ನೀಡುವುದು ಕಷ್ಟ. ಅವರು ಉತ್ತಮ ಸಮಾಜದ ನಿರ್ಮಾಣಕ್ಕಾಗಿ ಬದಲಾವಣೆಯನ್ನು ಆಹ್ವಾನಿಸುತ್ತಿದ್ದರು. ದುಃಖ-ನೋವು-ತೊಂದರೆ ಹೆಚ್ಚುತ್ತಾ ಹೋದಂತೆ ಇವೆಲ್ಲವೂ ಬದಲಾವಣೆಗೆ ಹಾದಿ ಮಾಡುತ್ತಿವೆಯೋ ಏನೋ ಎಂದು ಭಾಸವಾಗುತ್ತದೆ. ಆದರೆ ಕೈಲಾಸಂರವರಿಗೆ ಭವಿಷ್ಯತ್ತಿನ ಪ್ರಜ್ಞೆ ಇತ್ತು. ಕೆಟ್ಟ ಕಾಲ ಬರುವುದೆಂದು ಅವರು ನಿರೀಕ್ಷಿಸಿದ್ದರು.

[ಕೈಲಾಸಂರವರ ವ್ಯಕ್ತಿ-ದರ್ಶನದ ಬಗ್ಗೆ ಹೊಸ ಬೆಳಕನ್ನು ಚೆಲ್ಲಿದ ಶ್ರೀ ಅಯ್ಯರ್‌ರವರಿಗೆ ಅತ್ಯಂತ ಕೃತಜ್ಞತೆಗಳನ್ನು ನನ್ನ ಹೃದಯಾಂತರಾಳದಲ್ಲೇ ಅರ್ಪಿಸಿದೆ. ಆದರೆ ಕೈಲಾಸಂರವರ ಪ್ರಭಾವ ಶ್ರೀ ಅಯ್ಯರ್‌ರವರ ಮೇಲೆ ಹೇಗಾಗಿದೆ, ಎಷ್ಟರ ಮಟ್ಟಿಗೆ ಆಗಿದೆ ಎಂದು ತಿಳಿದುಕೊಳ್ಳದೆ ಈ ಸಂದರ್ಶನಕ್ಕೆ ಸಂಪೂರ್ಣತೆಯ ಮೆರಗು ಬರಲಾರದೆಂದು ಭಾವಿಸಿ 'ಕೈಲಾಸಂರವರ ಪ್ರಭಾವ ನಿಮ್ಮ ಮೇಲೆ ಹೇಗಾಗಿದೆ ಎಂದು ದಯವಿಟ್ಟು ತಿಳಿಸುವಿರಾ?' ಎಂದು ಪ್ರಶ್ನಿಸಿದೆ. ಉತ್ತರ ಸಿದ್ಧವಾಗಿಯೇ ಇತ್ತೋ ಏನೋ ಎಂಬಂತೆ 'ನಾನು ಏನನ್ನಾದರೂ ಕಲಿತಿದ್ದರೆ, ಏನನ್ನಾದರೂ ಬರೆದಿದ್ದರೆ, ಅವೆಲ್ಲವೂ ನನಗೆ ಕೈಲಾಸಂರವರಿಂದ ಆದ ಸಾಂಗತ್ಯದ ಅನುಭವದಿಂದ. ಅದು ನನ್ನ ಸ್ವಯಂಜ್ಞಾನದಿಂದಲ್ಲ. ಸತ್ಯ ಸ್ಥಿತಿಯನ್ನು ಹೇಳಬೇಕೆಂದರೆ ನನ್ನ ಶಿಕ್ಷಣ ವಿದ್ಯಾಭ್ಯಾಸ, ಜ್ಞಾನ ಎಲ್ಲವೂ ಜ್ಞಾನವಂತರ-ಪ್ರತಿಭಾವಂತರ ಸಾಂಗತ್ಯವೇ. ಕೈಲಾಸಂರವರೊಡನೆ ಸಾಂಗತ್ಯ ಫಲದೊಂದಿಗೆ ಶ್ರೀಯುತರಾದ ವಿ. ಸೀತಾರಾಮಯ್ಯನವರು ಹಾಗೂ ಜಿ. ಪಿ. ರಾಜರತ್ನಂ ಇವರುಗಳು ಪ್ರತ್ಯಕ್ಷವಾಗಿಯೂ ಹಿರಿಯರಾದ ಶ್ರೀ ಮಾಸ್ತಿ, ಶ್ರೀ ಡಿ. ವಿ. ಜಿ., ಶ್ರೀ ಕು. ವೆಂ. ಪು. ಶ್ರೀ ಬೇಂದ್ರೆ ಮುಂತಾದವರುಗಳು ಪರೋಕ್ಷವಾಗಿಯೂ ಪ್ರಭಾವವನ್ನು ಬೀರಿದ್ದಾರೆ. ಇವರೆಲ್ಲರ ಸಾಂಗತ್ಯವೇ ನನ್ನ ಜ್ಞಾನಭಾಂಡಾರ.'

ಶ್ರೀ ಅಯ್ಯರ್‌ರವರಲ್ಲಿ ಕೈಲಾಸಂ ರವರಲ್ಲಿಯ ನಮ್ರತೆ, ಗುರುಭಕ್ತಿ ಪಾಕ ವಾಗಿ ಇಳಿದಿದೆ ಎಂದು ಭಾಸವಾಯಿತು. ಕೈಲಾಸಂರವರ ಬಗ್ಗೆ ಹೇಳುವಾಗ ಶ್ರೀ ಅಯ್ಯರ್‌ರವರಲ್ಲಿ ಕಂಡ ಅಭಿಮಾನ, ಗೌರವ, ಭಕ್ತಿ, ವಿಶ್ವಾಸ ಪ್ರಶಂಸ ನೀಯವಿದ್ದಂತೆ ಶ್ರೀ ಅಯ್ಯರ್‌ರವರ ನಿಷ್ಪಕ್ಷಪಾತ ದೃಷ್ಟಿ ಮೆಚ್ಚತಕ್ಕದ್ದಿತ್ತು. ಕೈಲಾಸಂರವರಲ್ಲಿದ್ದ ದೋಷಗಳನ್ನು, ಕೊರತೆಗಳನ್ನು ಸೂಚಿಸುವಲ್ಲಿ ತೆರೆದ ಮನಸ್ಸನ್ನು ತೋರಿದ ಶ್ರೀ ಅಯ್ಯರ್ ರವರ ವಿಶಾಲ ಮನೋವೃತ್ತಿಯನ್ನು, ಸರಳತೆಯನ್ನು ಅನುಭವಿಸಿ ಚೇತನ ಗೊಂಡ ನಾನು ಅವರಿಗೆ ಕೃತಜ್ಞತಾ ಪೂರ್ವಕ ವಂದನೆಗಳನ್ನು ಅರ್ಪಿಸಿದೆ.



---

## ಹೆಣ ಏಳೋದಿನ್ನೂ ತಡ ?

ದುರ್ದೈವೀ ಮಾಸ್ತರರೊಬ್ಬರು ಭಾವಿಯಲ್ಲಿ ಬಿದ್ದು ಆತ್ಮಹತ್ಯೆ ಮಾಡಿಕೊಂಡರು. ಆ ಭಾವಿ ಬಹಳ ಆಳವಾದದ್ದು. ಯಾವ ಈಜುಗಾರನಿಗೂ ಅದರಲ್ಲಿ ಧುಮುಕಿ ಹೆಣ ತೆಗೆಯುವ ಧೈರ್ಯ ವಿರಲಿಲ್ಲ. ಅದರಷ್ಟಕ್ಕೇ ತೇಲಲಿ ಎಂದು ಬಿಟ್ಟು ಬಿಡಲಾಗಿತ್ತು. ಈ ಹೆಣದ ಬಗ್ಗೆ ನಡೆದ ಸಂಭಾಷಣೆ ಬಹಳ ಮೋಜಾಗಿತ್ತು.

ರಾಮು: ನಾನು ಈಗಾಗಲೇ ನಾಲ್ಕು ತಾಸುಗಳಿಂದ ಇಲ್ಲೇ ಇದ್ದೇನೆ. ಇನ್ನೇನು ಬರುವ ಹೊತ್ತಾಯ್ತು.

ಶಿವ: ಮೂರು ದಿನದಿಂದ ದಿನಕ್ಕೆ ಮೂರು ಸಲ ನಾನು ಬಂದು ಹೋಗ್ತಾ ಇದ್ದೇನೆ. ಇನ್ನೇನು ಅರ್ಧ ತಾಸಿನಲ್ಲಿ ಬಂದು ಬಿಡುತ್ತೆ ನೋಡು ಬೇಕಾದ್ರೇ.

ಕಲ್ಲ: ಇವತ್ತೇನು ಬರೋ ಲಕ್ಷಣ ಕಾಣೋದಿಲ್ಲ. ಇನ್ನೂ ೧೨ ತಾಸಾದ್ರೂ ಬೇಕು.

[ರೈಲ್ವೆ ಅಪಘಾತ ಆಗಿದ್ದರೆ ರೈಲು ನಾಲ್ಕು ತಾಸು ತಡ, ಆರು ತಾಸು ತಡ ಮುಂತಾಗಿ ಹೇಳಿಕೊಳ್ಳೋದು ಕೇಳಿದ್ದೇವೆ. ಹೆಣ ಮೇಲ್ಬರೋ ಬಗ್ಗೇನೂ ಇಷ್ಟೇ ಕಾತುರದಿಂದ ಕಾಯೋ ಜನಾನೂ ಇದ್ದಾರೆ........ಆದರೆ ಇವರು ಯಾರೂ ಹೆಣ ಬೀಳ್ಬೇಕಾದ್ರೆ ಅವನ್ನ ಹಿಡಿಯೋಕಾಗ್ಲಿ, ಬಿದ್ದ ತಕ್ಷಣ ತೆಗೆದು ಹಾಕೊಕಾಗ್ಲಿ ಆತುರ ಪಟ್ಟವರ ಬಗ್ಗೆ ಯಾವ ಸುದ್ದಿ ಇಲ್ಲೀವರೆಗೆ ಬಂದಿಲ್ಲ.]



ಮಾಧವಿ

# ಆಘಾತ



ದಿನೇಶ ಶ್ರೀಮಂತ ಮನೆತನದ ಹುಡುಗ. ತುಂಬ ತುಂಟ. ಮಕ್ಕಳೊಡನೆ ಬೆರೆತು, ಕುಣಿದು, ದಣಿವುದರಲ್ಲಿ ಅವನಿಗೆ ಆಸಕ್ತಿ. ಈ ಪುಟ್ಟ ಮಗು ಶ್ರೀಮಂತರ ಡಾಂಭಿಕತೆಯ ಸೋಂಕಿನಿಂದ ದೂರಿದ್ದ; ಅವನು ಮುಗ್ಧತೆಯ ಮೂರ್ತಿಯಾಗಿದ್ದ.

× × ×

'ಏ! ಕಮಲಿ........ ಇಲ್ಲಿ........ಹೀಗೆ ............' ಪಿಸು ಧನಿಯ ಸನ್ನೆಯ ಗುಸು ಗುಸು ಮಾತು. ಕಮಲೆಯ ಸಹಾಯದಿಂದ ದಿನೇಶ ಅಲ್ಲಿಯ ಸ್ಟೂಲನ್ನು ತೆಗೆದು ಕಪಾಟಿನ ಮುಂದಿಟ್ಟು, ಸದ್ದಿಲ್ಲದೆ ಅದರಿಂದ ಉಂಡಿ ಹೊಡೆಯುವ ಪ್ರಯತ್ನ ಇದಾಗಿತ್ತು.

ಉಂಡಿ ತೆಗೆದು ಕಮಲೆಗೆ ಒಂದು ಕೊಟ್ಟು, ತಾನೊಂದು ಕಿಸೆಗೆ ಸೇರಿಸಿ, ಇಳಿಯಬೇಕೆಂಬ ಆತುರದಲ್ಲಿ ಆ ಸ್ಟೂಲು 'ಕಿರ್' ಧನಿ ಮಾಡಿತು. ಕಮಲೆಗೆ ಎದೆ ಧಸ್ ಎಂದಿತು. ಓಡುವ ಸನ್ನಾಹ ಮಾಡುವುದರಲ್ಲೇ ದಿನೇಶ, 'ಶ್!' ಎಂದು ಸುಮ್ಮನಿರಲು ಸನ್ನೆ ಮಾಡಿದ. ಹೊರಗೆ

ಶ್ರೀಮತಿ ವಿಜಯಾ ಜೇವೂರ್

[ಬಡತನ, ಶ್ರೀಮಂತಿಕೆಗಳು ಜೀವನದ ಎರಡು ಮುಖಗಳಿದ್ದಂತೆ ಸುಗುಣ, ದುರ್ಗುಣ ಗಳು ವ್ಯಕ್ತಿತ್ವದ ಪದರುಗಳು. ಶೋಭನಾ ಶ್ರೀಮಂತಿಕೆಯ ಹೆಮ್ಮೆ, ದೊಡ್ಡಸ್ತಿಕೆಯ ಸೊಕ್ಕುಗಳ ಜಾಲದಲ್ಲಿ ತನ್ನ ಮಾನವತ್ವದ ಪರಿವೆಯನ್ನೇ ಕಳೆದುಕೊಂಡಿದ್ದರೆ, ಸುನಂದ ಬಡತನದ ಬವಣೆಯಲ್ಲಿ ಮಮತೆಯ ಮೂರ್ತಿಯಾಗಿ ಬಾಳುತ್ತಾಳೆ. ಶೋಭನಾಳ ಸೊಕ್ಕಿನ ವಿಷಜ್ವಾಲೆ ತನ್ನ ಒಬ್ಬನೇ ಮಗನನ್ನೂ ಆಹುತಿ ತೆಗೆದುಕೊಳ್ಳುತ್ತದೆ .... .... ಅಗ್ನಿ ಸುಡ ಲುಪಕ್ರಮಿಸಿದರೆ ಅದು ಯಾವುದನ್ನು ಬಿಟ್ಟೀತು. ಸಂ.]

ಕೆಲಸದಲ್ಲಿದ್ದ ದಿನೇಶನ ತಾಯಿ ಶೋಭನಾ "ಏನದು ಗದ್ದಲಾ?" ಎಂದು ಗರ್ಜಿಸಿದಳು. ಜಾಣ್ಮೆಯಿಂದ ದಿನೇಶ "ಮಿಯಾವ್,.... ........ಮಿಯಾವ್" ಎಂದು ಉತ್ತರಿಸಿದ್ದ. ಸದ್ದು ಮಾಡದೆ ಅಡಿಗೆಯ ಮನೆಯಿಂದ ಹೊರಬಿದ್ದರು ಕಮಲು, ದಿನೇಶರು. ಹಿತ್ತಲ ಬಾಗಿಲಿಂದ ಹೊರಬೀಳಬೇಕೆಂದು ಗೇಟು ಮುಟ್ಟುವಾಗ ಶೋಭನಾ ದೂರ ದಿಂದ ದಿನೇಶನನ್ನು ನೋಡಿ ಕೂಗಿದಳು. ತಪ್ಪಿಸಲಾರದೇ ದಿನೇಶ ಆಕೆಯ ಬಳಿ ಬಂದ, ಉಂಡಿಯನ್ನು ಗಬಗಬ ನುಂಗಿ.

"ನಿನಗೆ ಬಿಸ್ಕೆಟ್ ತೆಗೆದಿಟ್ಟೆದೀನೋ, ದೀನೂ! ಎಲ್ಲೂ ಹೋಗಬೇಡಾ ಕೊಡ್ತೀನಿ".

"ಅಮ್ಮಾ! ನನಗೊಂದು, ಕಮಲೂ ಗೊಂದು".

"ಕಮಲೂ!? ಆಕಿ ಮಾತ್ ತೆಗೀಬೇಡ ಅಂತಾ ಹೇಳಿಲ್ಲಾ ನಾನು. ಓಹೋ! ಅಲ್ಲಿ ನಿಂತಿರೋದು ಆಕೀನೇ ಏನು?...." ಎಂದವಳೇ ಕಮಲೂ ನಿಂತಲ್ಲಿಗೆ ಧಾವಿಸಿ,– "ಇಲ್ಲಿಗೆ ಬರ್ಬ್ಯಾಡಾ ಅಂತ ಹೇಳಿಲ್ವೇನೆ ನಿನ್ಗೆ? ನಾಚಿಕೆಗೇಡಿ! ಇನ್ನೊಂದ್ಸಲ ದೀನೂನ್ ಜೋಡಿ ಇರು, ನಿನ್ನ ಚರ್ಮಾನೇ ಸುಲೀತೇನೆ" ಎಂದು ಅರಚಿದಳು.

ಪುಟ್ಟ ಕಮಲು ನೊಂದು, ಅಳಲು ಆರಂಭಿಸಿದಳು. ದೀನೂನ ಕಡೆ ನೋಡುತ್ತಾ, ಎದುರು ಮಾತಾಡದೇ ಅಲ್ಲಿಂದ ಹೊರಟೇ ಬಿಟ್ಟಳು.

ಶೋಭನಾಳಿಗೆ ಸ್ವಲ್ಪ ಸಮಾಧಾನ ವಾಯಿತು. "ಬಾರೋ ದೀನೂ! ಬಿಸ್ಕೆಟ್ ಕೊಡ್ತೀನಿ" ಎಂದು ಪ್ರೀತಿಯಿಂದ ಕರೆ ದಳು, ಮಗನನ್ನು.

"ಹೋಗೇ! ನಿನ್ ಬಿಸ್ಕೇಟ್ ನನ್ಗೇನೂ ಬೇಡ" ಎಂದು ದಿನೇಶ ಕಮಲೂನ ಬೆನ್ನು ಬಿದ್ದು ಓಡಿದ. ಅವನಿಗೆ ಕಮಲೂಳಿಗಾದ ನೋವು ತಡೆಯಲಾಗಲಿಲ್ಲ.

ಅಳುತ್ತಾ ಕಮಲೂ ಅವರ ಮನೆ ಸೇರಿ ದ್ದಳು. ದಿನೇಶ ಅಲ್ಲಿಗೆ ಹೋದವನೇ—

"ಅಳಬೇಡ ಕಮಲೂ! ಅಮ್ಮಾ ಬಹಳ ಕೆಟ್ಟವಳು. ನಿನ್ನ ಬಿಟ್ಟು ನಾನು ಬಿಸ್ಕೇಟ್ ತಿಂತೀನಾ?" ಎಂದ.

"ದೀನೂ! ನಿಮ್ಮಮ್ಮನಿಗೆ ನನ್ನ ಕಂಡ್ರೆ ಆಗೋದಿಲ್ಲ. ನೀನು ಯಾಕೆ ಬರ್ತೀಯಾ?" ಎಂದಳು.

"ಊ! ನೀನು ತುಂಬಾ ಒಳ್ಳೆಯವಳು, ಕಮಲೂ! ಅಮ್ಮನ ಮಾತು ಬಿಡು.... ಅಳಬೇಡ ನನ್ಹತ್ರ ಎರಡು ಚಾಕಲೇಟು ಇದೆ. ಕೊಡ್ತೀನಿ."—

ಇಬ್ಬರೂ ಒಂದೊಂದು ಚಾಕಲೇಟು ತಿನ್ನುತ್ತ ಸಮಾಧಾನ ಹೊಂದಿದರು.

× × ×

ಕಮಲೂ, ದೀನೂ ಆಟದಲ್ಲಿ ತಲ್ಲೀನ ರಾಗಿದ್ದರು. ಸುನಂದಮ್ಮ ಕಮಲೂನ ಕರೆದು ಊಟಕ್ಕೆ ಎಬ್ಬಿಸಿದಳು. ಆಗ ಕಮಲೂ,

"ಅಮ್ಮಾ, ದೀನೂಗೂ ಒಂದು ರೊಟ್ಟಿ ಕೊಡಮ್ಮಾ" ಎಂದಳು.

"ಬೇಡೇ ಮಗು. ಅವರಮ್ಮ ಉರಿದು ಬೀಳ್ತಾಳೆ. ಅವರ್ಮನೆಯಲ್ಲಿ ರೊಟ್ಟಿ ತಿಂದು ರೂಢಿಯಿಲ್ಲ, ಅವರು ಬ್ರೆಡ್ಡು,ಅನ್ನ-ಹಣ್ಣು, ತುಪ್ಪ ತಿನ್ನೋವ್ರು. ಬೇಡಾ, ಮಗು!"— ಸುನಂದಳ ಎಚ್ಚರಿಕೆ.

ಕಮಲೂ ಬಲವಂತ ಮಾಡಲು ಪ್ರಯತ್ನ ಮಾಡಿ ವಿಫಲಳಾಗಿ ಊಟಕ್ಕೆ ಕೂತಳು.

ಅಲ್ಲಿ ಇಲ್ಲಿ ಹರಿದು ಹೊಲಿಗೆ ಹಾಕಿದ ಸೀರೆ, ಓರಣವಾಗಿ ಬಾಚಿದ ತಲೆ, ಯಾವ ಆಡಂಬರವೂ ಇಲ್ಲದೆ ಹಣೆಯನ್ನು ಶೋಭಿಸುವ ಸೌಭಾಗ್ಯದ ಲಕ್ಷಣದ ಕುಂಕುಮ; ೫ ಮಕ್ಕಳ ತಾಯಿಯಾದರೂ ಮಾಸದ ಆರೋಗ್ಯ; ಕಣ್ಣಲ್ಲಿ ತುಳುಕುವ ಮಮತೆ, ಆಕರ್ಷಕ ವ್ಯಕ್ತಿತ್ವ ಸುನಂದಳದಾಗಿತ್ತು.

ದೀನೂ ಕಮಲು ಬರುತ್ತಾಳೆಂದು ಸ್ವಲ್ಪ ಹೊತ್ತು ಹಾದಿ ನೋಡಿದವನೇ 'ಕಮಲೂ, ಕಮಲೂ' ಎನ್ನುತ್ತಾ ಅಡಿಗೆಯ ಮನೆಯೊಳಕ್ಕೇ ನುಗ್ಗಿದ ದಿನೇಶ.

"ಅಲೇ! ಊಟಕ್ಕೆ ಕೂತಿಯಾ?........ ಚಿಕ್ಕಮ್ಮಾ, ಚಿಕ್ಕಮ್ಮಾ,! ನನ್ಗೆ ಒಂದು ರೊಟ್ಟಿ ಕೊಡು ಚಿಕ್ಕಮ್ಮಾ!" ಎಂದು ಬೇಡಿದ. ಅವನಿಗೆ ಹಸಿವಾಗಿತ್ತು.

ಸುನಂದಳಿಗೆ ದಿನೇಶನ ಮಮತೆಯ ಅರಿವಾದರೂ ಶೋಭನಾಳ ಭೀತಿ ಅವಳಿಗಿತ್ತು.

"ಇಲ್ಲ, ದೀನು! ನೀನು ರೊಟ್ಟಿ ತಿನ್ನಬಾರದು, ನಿಮ್ಮಮ್ಮ ಬೈತಾಳೆ" ಎಂದಳು. ದೀನೂ ಹಠ ಹಿಡಿದ–

"ತುಂಬಾ ಹಸಿವೆ ಚಿಕ್ಕಮ್ಮ, ನನ್ಗೆ ರೊಟ್ಟಿ ಕೊಡು; ಅಮ್ಮನಿಗೆ ಹೇಳೋದಿಲ್ಲ" ಎಂದು ಅಂಗಲಾಚಿದ.

ಸುನಂದ ಸುಮ್ಮನೆ ಕುಳಿತಿರಲು, ಕಮಲಾ "ಅಮ್ಮಾ, ಕೊಡಮ್ಮ, ಅವನ್ಗೂ ಒಂದು ರೊಟ್ಟಿ" ಎಂದಳು.

"ಚಿಕ್ಕಮ್ಮಾ! ನೀನು ಕೊಡ್ಲಿಲ್ಲ ಅಂದ್ರೆ ನೋಡು, ನಾನು ಇಲ್ಲಿಂದ ಹೋಗೇಬಿಡ್ತೀನೆ! ನಿನ್ಹತ್ರ ಮಾತೇ ಆಡೋದಿಲ್ಲ" ಇದು ದೀನೂನ ಕೊನೆಯ ಅಸ್ತ್ರವಾಗಿತ್ತು.

ಸುನಂದಳ ತಾಯಿಯ ಹೃದಯ ಮರುಗಿತು, ಕರಗಿತು. "ಬಾ, ಕೊಡ್ತೀನಿ ಬಾ!" ಎಂದು ಅವನನ್ನು ತನ್ನ ಪಕ್ಕದಲ್ಲಿ ಕೂಡಿಸಿಕೊಂಡು ರೊಟ್ಟಿ, ಪಲ್ಲೆ ಕೊಟ್ಟಳು.

ದಿನೇಶ ತನ್ನ ಹಾಲುಗಲ್ಲ ಉಬ್ಬಿಸುತ್ತಾ "ನೀನು............ನೀನು............ತುಂಬಾ ಕೆಟ್ಟೋಳು ಚಿಕ್ಕಮ್ಮ..............ಎಲ್ಲಿ, ನಿಂಗೊಂದು ಮುತ್ತು ಕೊಡ್ತೀನಿ ನೋಡೋಣ" ಎಂದು ಅವಳ ಕೆನ್ನೆಗೆ ಮುತ್ತು ಕೊಟ್ಟ.

ದಿನೇಶನ ಅಪಾರ ಪ್ರೀತಿ ಸುನಂದ ಳನ್ನು ಮುಗ್ಧಳನ್ನಾಗಿ ಮಾಡಿತು. ಆಕೆಯ ಕಣ್ಣುಗಳಿಂದ ಎರಡು ಹನಿ ಆನಂದ ಭಾಷ್ಪ ಮಿಂಚಿ ಹೊರಹೊಮ್ಮಿತು.

× × ×

ದಿನೇಶ, ಕಮಲೂ ಕಕ್ಕಕ್ಕನ ಮಕ್ಕಳು. ಗೋಪಾಲ, ಸುಂದರ ಮಲ ಅಣ್ಣ-ತಮ್ಮಂದಿರು. ಗೋಪಾಲ ಶ್ಯಾಮರಾಯನ ಮೊದಲನೆಯ ಹೆಂಡತಿಯ ಮಗ. ಸುಂದರ ಎರಡನೆಂಪು ಹೆಂಡತಿಯ ಮಗ. ಗೋಪಾಲ ಕುಹಕ. ತಂದೆ ಸಾಯುವವರೆಗೆ ಸುಂದರನೊಂದಿಗೆ ಹೊಂದಿಕೊಂಡಿದ್ದು, ಅವರ ಮರಣಾನಂತರ ಸುಂದರನಿಗೆ ಮೋಸ ಮಾಡಿ ತಂದೆಯ ಬಹುಪಾಲು ಆಸ್ತಿಯನ್ನು ಕಬಳಿಸಿ ಬಿಟ್ಟಿದ್ದ. ಸುಂದರನ ಪಾಲಿಗೆ ಕೇವಲ ಒಂದು ಸಣ್ಣ ಮನೆ ಮಾತ್ರ ಬಂದಿತ್ತು. ಭೋಳೆ ಶಂಕರ ಸ್ವಭಾವದ ಸುಂದರ ವ್ಯವಹಾರ ಚತುರ ಕುಹಕ ಗೋಪಾಲನ ಬಲೆಯಲ್ಲಿ ಬಿದ್ದು ಬಡವನಾದ. ಗೋಪಾಲ ತನ್ನ ಮೋಸ, ಚಾಣಾಕ್ಷತನಗಳ ಬಲದಿಂದ ಶ್ರೀಮಂತನಾಗಿ ಮೆರೆಯತೊಡಗಿದ. ಶೋಭನಾ ಗೋಪಾಲನ ಅರ್ಧಾಂಗಿ. ಗೋಪಾಲನಲ್ಲಿಯ ಕುಹಕತನವನ್ನು ಆಕೆಗೆ ಹೋಲಿಸಿದರೆ ಇರವಿ-ಆನೆಗಳಷ್ಟು ಅಂತರ ಕಂಡು ಬರುತ್ತಿತ್ತು. ಗೋಪಾಲ, ಸುಂದರರ ವೈಮನಸ್ಯಕ್ಕೆ ಆಕೆಯೇ ಕಾರಣೀಭೂತಳಾಗಿದ್ದಳು. ಸ್ವಾರ್ಥದ ಮೂರ್ತಿಮಂತ ಸ್ವರೂಪಳಾದ ಶೋಭನಾಳಿಗೆ ಶ್ರೀಮಂತಿಕೆಯೊಡನೆ ಹಣದ ಮದ, ದೊಡ್ಡಸ್ತಿಕೆಯ ಸೊಕ್ಕು ನಾಳ ನಾಳದಲ್ಲಿ ಹರಿಯತೊಡಗಿತ್ತು. ಸುಂದರನ ಅರ್ಧಾಂಗಿ ಸುನಂದ, ಬಡತನದ ಅಂಧಕಾರದಲ್ಲಿಯೇ ಆನಂದದ ಬೆಳಕನ್ನು ಕಾಣುವ ಹೃದಯ ವೈಶಾಲ್ಯತೆ, ಬುದ್ಧಿಯ ಪರಿಪಕ್ವತೆ ಆಕೆಯಲ್ಲಿತ್ತು. ಸುನಂದಳ ನೆರಳನ್ನು ಕಂಡರೂ ಉರಿದು ಬೀಳುವಂತಹ ವೈಷಮ್ಯ ಶೋಭನಾಳಲ್ಲಿ ಬೆಳೆದು ಮರವಾಗಿತ್ತು; ಅದು ಬೇರೂರಿ ನರ, ನರಗಳಲ್ಲಿ ಹಬ್ಬಿಕೊಂಡಿತ್ತು.

ದಿನೇಶನಿಗೆ ಕಮಲಾಳ ಜೊತೆಯಲ್ಲಿ ಆಡಬೇಡ, ಆಕೆಯೊಡನೆ ಸೇರಬೇಡ ಎಂದು ಹೇಳಿಯೇ ಹೇಳುತ್ತಿದ್ದಳು, ಶೋಭನಾ. ಅನೇಕ ತರಹದ ಬಂಧನಗಳನ್ನು ಹಾಕಲು ಪ್ರಯತ್ನ ಮಾಡಿಯೂ ಆಯಿತು. ಆದರೆ ಯಾವ ಬಗೆಯೂ ಯಶಸ್ವಿಯಾಗಿರಲಿಲ್ಲ. ಆಕೆಯ ಶ್ರೀಮಂತಿಕೆಯ, ಡಾಂಭಿಕತೆಯ ಹಿಡಿತಕ್ಕೆ ದಿನೇಶ ಹೇಗೋ ಸಿಕ್ಕಲಿಲ್ಲ. ಅವನಿಗೆ ಕಮಲೂ, ಸುನಂದ ಇವರೆಂದರೆ ಪ್ರಾಣ. ಕಮಲಾಳೊಡನೆ ಆಟ, ಸುನಂದಾಳೊಡನೆ ಚೆಲ್ಲಾಟ. 'ಚಿಕ್ಕಮ್ಮಾ, ನನಗೆ

ಅದು ಇದು' ಎಂದು ಕಾಡಿಸಿ, ಪೀಡಿಸಿ ಪಡೆಯುತ್ತಿದ್ದ. ಕಮಲಾ, ಚಿಕ್ಕಮ್ಮ ಇವರ ದರ್ಶನ ಇಲ್ಲದೆ ದಿನೇಶನಿಗೆ ದಿನ ಹೋಗದಷ್ಟು ನಿಕಟವಾಯಿತು ಈ ಬಂಧನ; ಶೋಭನಾಳದು ಕೃತಕ ಮಾಯಾ ಜಾಲವಾದರೆ ಸುನಂದಳದು ನೈಜ ಪ್ರೀತಿಯ ಬಂಧನವಾಗಿತ್ತು.

× × ×

ಒಂದು ದಿನ ದಿನೇಶ, ಕಮಲೂ ಚೆಂಡಾಟ ಆಡುತ್ತಿದ್ದರು. ಮನೆಯ ವರ್ರಾಂಡದಲ್ಲಿ ಆಟ ರಭಸದಿಂದ ಸಾಗಿದಾಗ ಕಮಲೂ ಚೆಂಡನ್ನು ದಿನೇಶನೆಡೆಗೆ ಜೋರಾಗಿ ಒಗೆದಳು. ಅದು ದೀನೂನನ್ನು ತಾಕುವುದರ ಬದಲಾಗಿ ಅಲ್ಲಿಯೇ ಇದ್ದ ಒಂದು ಹೂವಿನ ಹೂಜಿಗೆ ತಾಕಿತು. ಆ ಹೂಜಿ ತಕ್ಷಣ ಕೆಳಗೆ ಬಿದ್ದು ಚೂರು ಚೂರಾಯಿತು.

ಹೂಜಿ ಬಿದ್ದ ಸದ್ದು ಕೇಳಿದ ಶೋಭನಾ ಓಡಿ ಬಂದು ಪೆಚ್ಚು ಮೋರೆಯ ಕಮಲುವನ್ನು ನೋಡಿ, ಆಕೆಯ ಹೆಳಲು ಹಿಡಿದು ಜಗ್ಗುತ್ತಾ ಸುನಂದಳ ಮನೆಗೆ ಎಳೆದೊಯ್ದಳು. ಕಮಲೂ ನೋವಿಗೆ ಕಿರುಚಲು ಪ್ರಾರಂಭಿಸಿದ್ದಳು. ದಿನೂ "ಅಮ್ಮಾ ಬೇಡಾ, ಆಕೀನ್ಯಾಕೆ ಎಳ್ಕೊಂಡ್ಹೋಗ್ತೀ" ಅಂತ ಕೂಗಿದರೂ ಕೇಳದೇ ಸುನಂದಳ ಮನೆ ಮುಂದೆ ನಿಂತು "ನೋಡೇ, ಸುನಂದೀ! ಬಹಳ ಸಂಭಾವಿತಳೂ ಅಂತ ಊರು ತುಂಬ ಹೇಳ್ಕೋತಿಯಲ್ಲಾ ಇದೇ ನಾ ನೀನ್ಮಾಡ್ತೋ್ಸೇ ಕೆಲ್ಸಾ. ನಮ್ಮ ಮನೆಯಲ್ಲಿರೋ ಚೆಂದಾಗಿರೊ ಸಾಮಾನೆಲ್ಲಾ ಈ ಕೀಗ್ಡೇಳಿ ಒಡೆದು ಹಾಕಿಸ್ತೀಯಾ? ಯಾಕೇ ಈ ಹೊಟ್ಟೆ ಕಿಚ್ಚು. ನಾನು ಬದುಕಿದ್ರೇ ನಿನ್ಗೆ ಹೊಟ್ಟೆ ಉರಿ ಅಲ್ವೇನೇ? ಬರ್ಲಿ, ನಮ್ಮನೇ ಅವ್ರು ಬರ್ಲಿ ಪೋಲೀಸ್ ಕಂಪ್ಲೆಂಟ್ ಕೊಡ್ಸಿ ನಿಮ್ಮ ಆಟಾನೆಲ್ಲಾ ಬಯ್ಲಿಗೆಳೀತೀನಿ............ ನಿಮ್ಮ ಮನೆ ಹಾಳಾಗ............ ನನ್ನ ಮಗೂನೂ ನನ್ನ ಕಂಡ್ರೆ ಆಗ್ದೇ ಇರೋ ಹಾಗೆ ಮಾಟ ಮಾಡ್ಸಿದೀಯಲ್ಲೇ........ ನೀನು ತಾಯಿನೋ ರಾಕ್ಷಸೀನೋ?...." ಶೋಭನಾಳ ಆರೋಪಗಳ ಸುರಿಮಳೆ ಕೇಳಲಾರದೇ ಹೋದಳು ಸುನಂದ. ಆಕೆಯ ಮೈಗೆ ಬೆಂಕಿ ಹಚ್ಚಿದ ಹಾಗಾಯಿತು. ಶೋಭನಾಳ ಕೈಯಿಂದ ಕಮಲಾಳನ್ನು ಎಳೆದುಕೊಂಡು, "ಮಾಡ್ತೀಯಾ........ ಇಂಥ ಹೊಲ್ಸು ಕೆಲ್ಸ ಮಾಡ್ತೀಯಾ.... ಅಲ್ಲಿ ಹೋಗ್ಬೇಡಾ ಅಂದ್ರೆ ಹೋಗ್ತಿಯಾ?" ಎಂದು ಬಡಿಯಲು ಪ್ರಾರಂಭಿಸಿದಳು.

ದಿನೇಶ ಸ್ವಲ್ಪ ಹೊತ್ತು ದಿಕ್ಕು ತೋರದೇ ನಿಂತಿದ್ದವನು ತಕ್ಷಣ ಕಮಲೂಳನ್ನು ಬಿಗಿಯಾಗಿ ಅಪ್ಪಿಕೊಂಡು "ಬಿಡು ಚಿಕ್ಕಮ್ಮಾ; ಹೂಜಿ ಹೊಡೆದಿದ್ದು ಕಮಲೂ ಅಲ್ಲ, ನಾನು....ಅಮ್ಮಾ ಸುಳ್ಳೇಳ್ತಾಳೆ.... ಬಿಡು ಚಿಕ್ಕಮ್ಮ" ಎಂದು ಬೋರಿಟ್ಟ. ಸುನಂದ ಕಮಲಾಗೆ ಹೊಡೆದ ಏಟುಗಳೆರಡು ದಿನೂಗೆ ಬಿದ್ದವು. ಕೈತಪ್ಪಿ ದಿನೂಗೆ

ಬಿದ್ದ ಏಟು ಸುನಂದಳನ್ನು ಹಿಂದೆ ಸರಿಸಿತು. ಆಕೆ ಮನೆಯೊಳಕ್ಕೆ ಕಮಲುಳನ್ನು ಎಳೆದುಕೊಂಡು ಹೊರಟು ಹೋದಳು. ಶೋಭನಾ ದಿನೂನ ಕೈ ಹಿಡಿದು ಎಳೆದುಕೊಂಡು "ಬಾರೋ ಮಳ್ಳೀ, ಅವರ ಬೆನ್ನು ಬಿದ್ದರೇ ನಿನ್ನ ಜೀವಾನೇ ತೊಗೋತಾರೆ, ನಡೀ ಮನೀಗೆ...." ಎಂದು. ಅಳುತ್ತಾ "ಕಮಲೂ....ಚಿಕ್ಕಮ್ಮ...." ಎಂದು ಅರಚುತ್ತಿದ್ದ ದಿನೇಶನನ್ನು ಎತ್ತಿಕೊಂಡು, ಸುನಂದಳನ್ನು ಬಾಯಿಗೆ ಬಂದ ಹಾಗೆ ಬೈಯುತ್ತಾ ಮನೆ ಸೇರಿದಳು, ಶೋಭನಾ.

× × ×

ಗೋಪಾಲ ಹೊಲದ ಕೆಲಸದ ಮೇಲ್ವಿಚಾರಣೆಗಾಗಿ ಹಳ್ಳಿಗೆ ಹೋಗಿದ್ದ. ಮನೆಯಲ್ಲಿ ತಾನೇ ತಾನಾಗಿ ಮೆರೆಯುತ್ತ ಶೋಭನಾ ದಿನೇಶನಿಗೆ ಕಟ್ಟಪ್ಪಣೆ ಹಾಕಲು ಪ್ರಾರಂಭಿಸಿದಳು.

"ನೋಡೋ ದೀನೂ ! ಅವರು ಬಹಳ ಕೆಟ್ಟವರು. ಅವರ ಮನೆಗೆ ಹೋಗಬೇಡಾ, ಆ ಕಮಲೀ ನೋಡು, ಹೂಜಿ ಒಡೆದು ಬಿಟ್ಲು"....

"ಅಲ್ಲೇ! ಅವರು ಒಳ್ಳೆಯವರು. ಹೂಜಿ ಒಡೆದಿದ್ದು ನಾನೇ" ಎಂದ ದಿನೇಶ.

"ನಾನ್ಹೇಳಿದ್ಮಾತು ಕೇಳು, ಇಲ್ಲಾಂದ್ರೇ ನೋಡು, ನಿನ್ಗೆ ಬಿಸ್ಕೆಟ್ಟಿಲ್ಲಾ ಏನೂ ಇಲ್ಲಾ."

"ಹೋಗು, ಹೋಗು. ನೀನು ಬಿಸ್ಕೆಟ್ ಕೊಡ್ದಿದ್ರೇ ಚಿಕ್ಕಮ್ಮ ನಗ್ಗೆ ರುಚಿ ರೊಟ್ಟಿ ಕೊಡ್ತಾಳೆ."

ಶೋಭನಾಳ ಹೊಟ್ಟೆಯಲ್ಲಿ ಬೆಂಕಿ ಬಿದ್ದ ಹಾಗಾಯಿತು, ಅರಚಿದಳು.

"ಲೇ, ದೀನೂ, ಒಳ್ಳೇ ಮಾತ್ನಲ್ಲಿ ನೀನು ಹಾದೀಗೆ ಬರೋ ಹಾಗೆ ಕಾಣೋದಿಲ್ಲ........ ನೋಡೋ........ ನೀನು ಅವರ್ಮನೇಗೆ ಹೋದ್ರೆ ಕಾಲೇ ಮುರೀತೀನಿ.... ಬೇಡಾ ಅಂದ್ರೆ ಎದುರಾಡ್ತೀಯ .... ಆಕೆ ರೊಟ್ಟಿ ತಿಂದೇ ನೀನು ಮೊಂಡಾಗಿದ್ದೀಯ."

"ಕಾಲ್ಮುರಿದ್ರೇ ಕುಂಟುಕೋತಾ ಹೋಗ್ತೀನಿ."

ಸಿಟ್ಟು ನೆತ್ತಿಗೇರಿತು. ಅಲ್ಲಿಯೇ ಬಿದ್ದಿದ್ದ ಬೆತ್ತ ತೆಗೆದುಕೊಂಡು ದಿನೇಶನನ್ನು ಬಾರಿಸಲು ಪ್ರಾರಂಭಿಸಿದಳು. ತಾನು ಮಾಡುತ್ತಿದ್ದ ಕೆಲಸದ ಅರಿವು ಆಕೆಗೆ ಇಲ್ಲದಾಯಿತು. ಸುನಂದಾಳ ಮೇಲಿನ ದ್ವೇಷದ ಅಂಧಕಾರದಲ್ಲಿ ಎಳೆಗೂಸು ದಿನೂನ ಹೊಡೆಯಹತ್ತಿದ್ದಳು. ದಿನೂ ಅಬ್ಬರಿಸಿದ. ಅವನಿಗೆ ನೋವು ತಡೆಯಲಾರದೆ ಅರಚಿದ. ಆದರೂ ಹೊಡೆತ ನಿಲ್ಲಲಿಲ್ಲ. ತಪ್ಪಿ ಒಂದು ಪೆಟ್ಟು ಜೋರಾಗಿ ತಲೆಗೆ ಬಿತ್ತು. ದೀನೂ 'ಆ !' ಎಂದು ಕೂಗುತ್ತಾ ಎಚ್ಚರತಪ್ಪಿ ಬಿದ್ದುಬಿಟ್ಟ. ಹಣೆಯ ಬಳಿ ಪೆಟ್ಟು ಬಿದ್ದಿದ್ದು, ರಕ್ತ ಸೋರಲಾರಂಭಿಸಿತ್ತು.

ಮಗು ಮೂರ್ಛೆಬಿದ್ದಾಗ ಶೋಭನಾಳಿಗೆ

ಎಚ್ಚರವಾಯಿತು; ತನ್ನ ಮೂರ್ಖ ತನದ ಬಗ್ಗೆ ಆಕೆಗೆ ದಿಕ್ಕು ತೋರದಾಯಿತು. ಸುಧಾರಿಸಿಕೊಂಡವಳೇ ಹೋಗಿ ನೀರು ತಂದು ದಿನೇಶನ ಮುಖಕ್ಕೆ ಸಿಂಪಡಿಸಿದಳು. ಮೂರ್ಛೆ ತಿಳಿಯಲಿಲ್ಲ. ಶೋಭನಾಳಿಗೆ ಗಾಬರಿಯಾಯಿತು. ಡಾಕ್ಟರರನ್ನು ಕರೆಯಬೇಕೆಂದೆನಿಸಿತು........ ಆದರೆ ........ ಕಳುಹಿಸುವುದ್ಯಾರನ್ನು? ಮನೆಯಿಂದ ತಪ್ಪಿಸಿ ಓಡಿ ಬಂದಿದ್ದ ಪುಟ್ಟ ಕಮಲೆ, ಬಾಗಿಲ ಸಂದಿಯಿಂದ ದಿನೇಶನನ್ನು ಹೊಡೆಯುವುದನ್ನು ನೋಡುತ್ತಿದ್ದಳು. ಅವನು ಕೆಳ ಬಿದ್ದದ್ದನ್ನು ನೋಡಿ, ಓಡಿಹೋಗಿ ಸುನಂದಾಳಿಗೆ ಹೇಳಿದಳು. ........ ಸುನಂದಾಳಿಗೆ ಉಭಯ ಸಂಕಟ. ದಿನೇಶನ ಮೇಲೆ ಆಕೆಗೆ ಜೀವ; ಶೋಭನಾ ಜಗಳಕ್ಕೆ ಬಂದರೆ.... ಆಕೆಯ ಹೊಲಸು ಮಾತು ಕೇಳುವವರಾರು?.... ತಾಕಲಾಟ............ಕೊನೆಗೂ ಧೈರ್ಯ ಮಾಡಿಯೇ ಬಿಟ್ಟಳು. ಕಮಲೆಯನ್ನು ಕರೆದುಕೊಂಡು ಹತ್ತಿರದಲ್ಲಿದ್ದ ಡಾಕ್ಟರರನ್ನು ಕರೆದುಕೊಂಡು ಬಂದೇ ಬಿಟ್ಟಳು.

ಶೋಭನಾ, ಮಾಡುವುದೇನು........ ಮೂರ್ಛಿತ ಮಗುವನ್ನು ಒಂಟಿಯಾಗಿ ಬಿಟ್ಟು ಹೋಗುವುದಾದರೂ ಹೇಗೆ ಎಂದು ಚಿಂತಿಸುತ್ತಿದ್ದಂತೆಯೇ ಬಾಗಿಲ 'ಕಟ್, ಕಟ್' ಶಬ್ದ ಕೇಳಿತು. ಎದ್ದು ಬಾಗಿಲ ತೆಗೆದಾಗ ಡಾಕ್ಟರು, ಸುನಂದಾ, ಕಮಲಾ ಬಾಗಿಲಲ್ಲಿ. ಕಮಲೂ ಓಡಿ ಹೋಗಿ ದಿನೇ



ಶನ ಮೇಲೆ ಬಿದ್ದು ಅಳತೊಡಗಿದಳು. ಸುನಂದಾ ಬಾಗಿಲಲ್ಲೇ ನಿಂತು ದೀನ ನಯನಗಳಿಂದ ಪುಟ್ಟ ಬಾಲಕನನ್ನು ವೀಕ್ಷಿಸಿದಳು. ಒಳಗೆ ಬರುವ ಧೈರ್ಯ ಆಕೆಗೆ ಆಗಲಿಲ್ಲ. ಶೋಭನಾ ಆಕೆಯನ್ನು ಕರೆಯಲೂ ಇಲ್ಲ. ಅಷ್ಟರಲ್ಲೇ ಡಾಕ್ಟರು, ಮಗುವನ್ನು ಪರೀಕ್ಷಿಸಿದರು. ಮೊದಲು ತಲೆಯ ಪೆಟ್ಟಿಗೆ ಬ್ಯಾಂಡೇಜ್ ಹಾಕಿದರು. ರಕ್ತ ಸುರಿಯುತ್ತಲೇ ಇತ್ತು. ಅಲ್ಲಿಯ ರಕ್ತನಾಳಕ್ಕೆ ಪೆಟ್ಟು ತಾಕಿತ್ತು. ತಕ್ಷಣ ದವಾಖಾನೆಗೇ ಸಾಗಿಸಲು ಹೇಳಿದ ಡಾಕ್ಟರು, ತಮ್ಮ ಕಾರನ್ನು ತಂದು ಮಗುವನ್ನು, ಶೋಭನಾಳನ್ನು ಕೂಡಿಸಿಕೊಂಡು ಒಯ್ಯಲು ಸಿದ್ಧರಾದರು. ಕಮಲೂ ಕಾರಿನ ಬಳಿ ಓಡಿದವಳೇ— "ನಾನು ಬರ್ತೀನಿ; ಡಾಕ್ಟರೇ ! ನನ್ನ ಕರ್ಕೊಂಡು ಹೋಗ್ರಿ" ಎಂದು ಅಂಗಲಾಚಿದಳು.

"ಯಾತಕ್ಕೇ ? ನೀನು ನಿಮ್ಮಮ್ಮ ಕೂಡಿ ನನ್ನ ಮಗನ ಜೀವಾ ತೆಗೆಯೋಕೆ ನಿಂತೀರಿ ಅಂತ ಕಾಣುತ್ತೆ ? ಹೋಗೇ ಮಳ್ಳಿ" ಎಂದು ಅಬ್ಬರಿಸಿದಳು.

ಈ ಮಾತು ಸುನಂದ ಕೇಳುತ್ತಿದ್ದಂತೆ ಕಣ್ಣಿನಲ್ಲಿ ನೀರು ತೊಟಕುತ್ತಿತ್ತು. ಕಮಲಾಳನ್ನು ಅಪ್ಪಿಕೊಂಡು ನಿಂತಳು. ಕಾರ್ ಆಸ್ಪತ್ರೆಯ ಕಡೆ ಧಾವಿಸಿತು.

× × × ×

ಕಮಲಾಳಿಗೆ ಆಸ್ಪತ್ರೆಯ ಕಡೆಯೇ ಧ್ಯಾನ. ಅವಳಿಗೆ ದಿನೂನದೇ ಯೋಚನೆ. ದಿಕ್ಕು ತೋರದಂತೆ ಬೆಪ್ಪಳಾಗಿ ಸುಂದು ಬಡಿದಂತೆ ಕುಳಿತಿದ್ದಳು, ಕಮಲೂ.

ಸುನಂದಳಿಗೆ ಒಂದು ಬಗೆಯ ಪೇಚಾಟ. ಶೋಭನಾಳ ವಿಷಪ್ರವೃತ್ತಿ ಆಕೆಯನ್ನು ದೂರ ಸರಿಯುವಂತೆ ಮಾಡಿದರೂ, ದೀನೂನ ಮುಗ್ಧತೆ ಅವಳನ್ನು ಸೆಳೆಯುತ್ತಿತ್ತು. ಏನೂ ತೋರದಂತಾದಳು ಸುನಂದ. ದಿನೂನ ಸ್ಥಿತಿಯ ಬಗ್ಗೆ ಅರಿಯುವ ಆತುರದಿಂದಲೇ ನಿರೀಕ್ಷಣೆಯಲ್ಲಿ ಮಗ್ನಳಾದಳು.

ರಾತ್ರಿ ಹೊತ್ತಾದರೂ ಶೋಭನಾ ಮನೆಗೆ ಬರಲಿಲ್ಲ. ಸುನಂದಳಿಗೆ ಹೆದರಿಕೆಯಾಯಿತು. ತನ್ನ ಗಂಡ ಬಂದೊಡನೆಯೇ ಅವರನ್ನು ಆಸ್ಪತ್ರೆಗೆ ಕಳುಹಿಸಲು ನಿರ್ಧರಿಸಿದ್ದಳು. ಆಗಾಗ ಕಮಲೂ ಬಂದು, "ಅಮ್ಮಾ ! ದೀನೂ ಯಾಕಮ್ಮಾ ಇನ್ನೂ ಬರ್ಲಿಲ್ಲ" ಎಂದು ಮತ್ತೆ ಮತ್ತೆ ಕೇಳುತ್ತಿದ್ದುದು ಆಕೆಯನ್ನು ಶೂಲದಲ್ಲಿ ಕೊರೆದಂತೆ ಆಗುತ್ತಿತ್ತು.

× × × ×

ದಿನೇಶನನ್ನು ಆಪರೇಷನ್ ಥಿಯೇಟರಿಗೆ ಒಯ್ಯಲಾಯಿತು. ಆಸ್ಪತ್ರೆಯ ತಜ್ಞರು ರಕ್ತಸ್ರಾವ ತಡೆಯಲು ಅಲ್ಲಿ ಹೊಲಿಗೆ ಹಾಕುವ ನಿರ್ಧಾರ ಕೈಕೊಂಡಿದ್ದರು ದೀನೂನಿಗೆ ಇನ್ನೂ ಪ್ರಜ್ಞೆ ಬಂದಿರಲಿಲ್ಲ. ಕೆಲ ಸಮಯದ ನಂತರ ಹೊಲಿಗೆ ಹಾಕಿದ್ದಾಯಿತು. ರೋಗಿಯ ಸ್ಥಿತಿ ಬಹಳ ಚಿಂತಾಜನಕವಾಗಿದ್ದುದರಿಂದ ರಕ್ತ ಕೊಡಿ

ಸಬೇಕೆಂಬ ಸೂಚನೆ ಬಂತು. ಡಾಕ್ಟರರು ತಮ್ಮ ಎಲ್ಲ ಶಕ್ತಿ–ಸಾಮರ್ಥ್ಯಗಳಿಂದ ಮಗುವಿಗೆ ಚಿಕಿತ್ಸೆ ಮಾಡತೊಡಗಿದರು ರಾತ್ರಿ ೧೦ ಗಂಟೆಯಾಯಿತು. ಸ್ವಲ್ಪ ದೀನೂನಿಗೆ ಎಚ್ಚರ ಬಂತು. ಕಣ್ಣು ಬಿಡುವ ಯತ್ನ .... ಬಿಡಲಾರದ ಸ್ಥಿತಿ .... ಮಾತನಾಡಬೇಕೆಂಬ ಪ್ರಯತ್ನ .... ತುಟಿಯಿಂದ ಮಾತು ಬಾರದು .... ತುಟಿ ಆಡಿಸುವ ಯತ್ನ ನೋಡಿದ ನರ್ಸು ಗ್ಲುಕೋಸ್ ಹಾಕತೊಡಗಿದಳು. ಅಷ್ಟು ಹೊತ್ತಿಗೆ ಸುಂದರ, ಸುನಂದ, ಕಮಲೂ ಆಸ್ಪತ್ರೆಗೆ ಬಂದರು. ಅವರನ್ನು ಕಂಡವಳೇ ಹಾಸಿಗೆಯ ಮೇಲೆ ಕುಳಿತು ಹಂಬಲಿಸುತ್ತಿದ್ದ ಶೋಭನಾ, ಸಿಡುಕು ಮುಖ ತೋರಿಸುತ್ತಾ .... "ಏತಕ್ಕೆ ಬಂದ್ರೀ .... ಇಲ್ಲೀಗೂ ....ಯಮಲೋಕಕ್ಕೆ ಹೋದ್ರೂ ಬಿಡೋಹಾಗೆ ಕಾಣೋದಿಲ್ಲ ನೀವು" ಎಂದು ಸಿಡುಕಿದಳು. ಅಷ್ಟರಲ್ಲೇ ಕಮಲೂ ಓಡಿ ಬಂದು, ದೀನೂನ ಹಾಸಿಗೆಯ ಮೇಲೆ ಹತ್ತಿ, ಅವನ ಕಾಲಡಿ ಬಿದ್ದು "ದೀನೂ, ದೀನೂ" ಎಂದು ಅಳತೊಡಗಿದಳು.

ದೀನೂ ಮಾತಾಡುವಂತೆ ಕಂಡಿತು.... ನಿಶ್ಶಬ್ದ...."ಕ....ಮ....ಲಾ.... ಚಿ.... ಕ್ಕ....ಮ್ಮಾ" ಎನ್ನುತ್ತಿದ್ದಂತೆಯೇ ಗೊಳೋ ಎಂದು ಎಲ್ಲರೂ ಅಳುವ ಧ್ವನಿ ಆಸ್ಪತ್ರೆಯ ವಾರ್ಡುಗಳು ಪ್ರತಿಧ್ವನಿಸಿತು. ಶೋಭನಾಳ ಅಳು ಗಗನ ಮುಟ್ಟಿತು.





ಪ್ರತಿಯೊಬ್ಬ ರೈತನೂ ಇದರ ಬಗ್ಗೆ ಎಚ್ಚರವಹಿಸಬೇಕು !



# "ಒಕ್ಕಲಿಗನ ಪುಪ್ಪುಸ" ರೋಗ

–ಇದು ದೀರ್ಘ ಕಾಲದ ಗೂರಲು ರೋಗದಂತೆ ತೋರಿದರೂ, ಒಕ್ಕಲಿಗನನ್ನು ದೈಹಿಕವಾಗಿ ನಿರರ್ಥಕನಾಗಿಸಬಲ್ಲದು. ಇದಕ್ಕೆ ಇಲ್ಲಿಯವರೆಗೆ ನಿರ್ದಿಷ್ಟ ವೈದ್ಯೋಪಚಾರ ಇಲ್ಲ.

ಭಾರತವು ರೈತರ ರಾಷ್ಟ್ರ ಎಂದು ಪ್ರಖ್ಯಾತಿಯಾಗಿದ್ದರೂ ರೈತರ ಕಲ್ಯಾಣ ಅವರ ಆರೋಗ್ಯದ ದೃಷ್ಟಿಯಿಂದ ಎಷ್ಟರ ಮಟ್ಟಿಗೆ ಸಾಧಿಸಲಾಗಿದೆಯೋ ಹೇಳಲಾಗದು. ನಮ್ಮ ಜನಸಂಖ್ಯೆಯಲ್ಲಿ ಸುಮಾರು ೮೩.೭% ಗ್ರಾಮೀಣ ವಾಸಿಗಳು. ಇವರಲ್ಲಿ ಸುಮಾರು ೯೦.೦೦% ರೈತರು ಅಥವಾ ಒಕ್ಕಲುತನದ ಒಂದಿಲ್ಲೊಂದು ಬಗೆಯ ಕಾರ್ಯದಲ್ಲಿ ತೊಡಗಿದವರು. ಹೀಗಿರುವಾಗ ರಾಷ್ಟ್ರದ ಸಾರ್ವಜನಿಕ ಆರೋಗ್ಯ ಬಹುಮಟ್ಟಿಗೆ ಗ್ರಾಮೀಣ ವಾಸಿಗಳ ಆರೋಗ್ಯದ ಮೇಲೆ ಆಧಾರ ಪಟ್ಟಿದೆ. ನಮ್ಮ ರೈತ ಆರೋಗ್ಯವಾಗಿದ್ದು ಹೆಚ್ಚು ಹೆಚ್ಚಾಗಿ ಬೆಳೆದರೇ ರಾಷ್ಟ್ರಕ್ಕೆ ಸಮಸ್ಯೆಗಳ ಸಮಸ್ಯೆ ಏಕಾದೀತು ?

ರೈತರಲ್ಲಿ ಅನೇಕರಿಗೆ ಗೂರಲು ರೋಗ ಒಂದಿಲ್ಲೊಂದು ಬಗೆಯಲ್ಲಿ ಇರಬಹುದು. ಕೆಲಸ ಮಾಡುವಾಗ ದಮ್ಮು ಹತ್ತಿ, ನಿಶ್ಶಕ್ತಿಹೊಂದಿ, ನಿರುತ್ಸಾಹನಾಗಿ ಕೆಲಸವನ್ನು ತ್ಯಜಿಸಬೇಕಾಗುವ ಸ್ಥಿತಿಯೂ ಬಂದದ್ದು ಅನೇಕ ರೈತರಿಗೆ ಅನುಭವವಾಗಿರಬಹುದು. ಆದರೆ ಹೀಗಾದಾಗ, ಇದು ಹೆಚ್ಚಿಗೆ ದುಡಿದುವದರ ಪರಿಣಾಮವಾಗಿ ಆದ ಆಯಾಸ ಎಂಬ ಭಾವನೆಯೇ ಬಹಳ ಜನರಲ್ಲಿ ಮೂಡುತ್ತದೆ. ದವಾಖಾನೆಗಳಿಲ್ಲದ ಗ್ರಾಮುಗಳಲ್ಲಿ ಈ ಸಣ್ಣಪುಟ್ಟ ಎಂದೆನಿಸುವ ನೋವಿಗೆ– ಬೇನೆಗೆ ಉಪಚಾರ ಪಡೆಯುವುದೆಂತು ? ಆದರೆ, ನಮ್ಮವರಲ್ಲಿ ಅನೇಕರಿಗೆ ಗೊತ್ತಿರಲಿಕ್ಕಿಲ್ಲ; ಇತ್ತೀಚೆಗೆ "ಒಕ್ಕಲಿಗನ ಪುಪ್ಪುಸರೋಗ" ಎಂಬ ಹೊಸ ರೋಗವನ್ನು ಗುರ್ತಿಸಲಾಗಿದೆ. ಇದರ ಬಗ್ಗೆ ರೈತರ ನಾಡಾದ ಭಾರತ ಇಲ್ಲಿಯ ವರೆಗೆ ಹೆಚ್ಚಿನ ಆಸ್ಥೆ

ತೋರಿದಂತೆ ಕಾಣುವುದಿಲ್ಲ. ಆದರೆ ಇಂಗ್ಲಂಡಿನಲ್ಲಿ ಈ ರೋಗದ ಪ್ರಥಮ ಚಿಹ್ನೆಗಳನ್ನು ಮೂವತ್ತೈದು ವರುಷಗಳ ಹಿಂದೆಯೇ ಗುರ್ತಿಸಿವರು. ಹೀಗೆ ಗುರ್ತಿಸುವ ಮುನ್ನ ವೈದ್ಯರು ಇದನ್ನು 'ಗೂರಲು' ಎಂದೇ ನಿದಾನ ಮಾಡುತ್ತಿದ್ದರು. 'ಒಕ್ಕಲಿಗನ ಪುಪ್ಪುಸ ರೋಗ' ದೀರ್ಘಕಾಲ ಗೂರಲು ರೋಗದಂತೆ ಕಂಡರೂ ಅದರ ಅಪಾಯದ ಬಗ್ಗೆ ರೋಗಿಗೆ ಅರಿವಾಗುವುದಿಲ್ಲ. 'ಒಕ್ಕಲಿಗನ ಪುಪ್ಪುಸ ರೋಗ' ರೋಗಿಯನ್ನು ದೈಹಿಕವಾಗಿ ನಿರರ್ಥಕವಾಗಿಸಿ, ಅವನ ಜೀವನೋಪಾಯಕ್ಕೆ ಕೊಡಲಿ ಪೆಟ್ಟು ಹಾಕುತ್ತದೆಂದರೇ ಆಶ್ಚರ್ಯವಲ್ಲ. ಈ ರೋಗ ಇಷ್ಟು ಭಯಾನಕ. ಇದು ತೀಕ್ಷ್ಣವಾಗಿಯೂ ಇರಬಹುದು; ದೀರ್ಘ ಕಾಲದ್ದಾದರೂ ಆಗಬಹುದು.

### ರೋಗದ ಲಕ್ಷಣಗಳು

ಧನದ ಕೊಟ್ಟಿಗೆಗಳಲ್ಲಿ ಒಣ ಹುಲ್ಲಿನಿಂದ ದನಗಳನ್ನು ಮೇಯಿಸುವಾಗ ಅದರಲ್ಲಿಯ ಧೂಳಿನೊಡನೆ ನಿಕಟ ಸಂಪರ್ಕ ಬರುವ ರೈತರಿಗೆ ಈ ರೋಗ ಬರುವ ಸಂಭವವಿದೆ. ಈ ರೋಗದ ಪ್ರಥಮ ಚಿಹ್ನೆಯೆಂದರೆ, ಇಂತಹ ವಾತಾವರಣದಲ್ಲಿ ನಿರಂತರ ಕೆಲಸ ಮಾಡುವವನು, ತನ್ನ ಕೆಲಸವಾದ ಕೆಲವು ತಾಸುಗಳಲ್ಲಿ ಉಸಿರು ಸಿಕ್ಕಿದ ಅನುಭವ ಪಡೆಯುತ್ತಾನೆ. ಇವನಿಗೆ ಒಣ ಕೆಮ್ಮು, ಜ್ವರ, ಅಶಕ್ತತೆ, ಕಂಡು ಬರುತ್ತದೆ. ಬೇಗ ಬೇಗ ಉಸಿರಾಡಿಸಬೇಕೆನ್ನಿಸುತ್ತದೆ; ಬೆರಳಿನ ತುದಿ ಹಾಗೂ ತುಟಿಗಳು ನೇರಳೆ ಬಣ್ಣ ತಾಳುತ್ತದೆ (Cynosis). ಸರಳವಾದ ಉಸಿರಾಟಕ್ಕೆ ತೊಂದರೆಯಾಗುವುದರಿಂದ ದೇಹದಿಂದ ಹೊರಬರಬೇಕಾದ ಅಂಗಾರಾಮ್ಲವಾಯು ರಕ್ತದಲ್ಲಿಯೇ ಸಂಚಯವಾಗುವುದರಿಂದ ಈ ನೇರಳ ವರ್ಣವು ಕಾಣಿಸಿಕೊಳ್ಳುತ್ತದೆ. ಈ ರೋಗಿಯನ್ನು ಪರೀಕ್ಷಿಸಿದರೆ, ಪುಪ್ಪುಸದ ಅಂಗಾಂಶದಾದ್ಯಂತ 'ಕರಕರ' ಶಬ್ದ ಕೇಳಿ ಬರುತ್ತದೆ. ಇವನಲ್ಲಿ ಜ್ವರವು ಎರಡು ಮೂರು ದಿನ ಇರುತ್ತದಲ್ಲದೆ, ಇವನಿಗೆ ದೈಹಿಕ ಶ್ರಮವಾದರೆ ಉಸಿರಾಡಲು ತೊಂದರೆಯಾಗಿ ಉಸಿರು ಸಿಕ್ಕಂತಾಗುತ್ತದೆ. ಹೀಗೆ ಒಂದು ವಾರವಾದರೂ ತೊಂದರೆ ಇರಬಹುದು. ಆದರೆ ಈ ರೈತ ತನ್ನ ದೈನಂದಿನ ಕೆಲಸಕ್ಕೆ ಮರಳಿದಾಗಲೇ ಈ ರೋಗದ ಗಂಭೀರತೆ ಅವನಿಗರಿವಾಗುತ್ತದೆ. ಈ ರೋಗ ಪೂರ್ಣ ಗುಣವಾದಂತೆ ಕಂಡರೂ ಕೆಲಸ ಮಾಡಲು ಹೋಗಿ ಒಣ ಹುಲ್ಲಿನಲ್ಲಿಯ ಧೂಳನ್ನು ಉಸಿರಾಡಿಸಿದರೆ ಸಾಕು, ಮತ್ತೆ ಈ ರೋಗಬಾಧೆ ತಟ್ಟುವುದು. ಹೀಗೆ ಪ್ರತಿ ಸಲ ಮರುಕಳಿಸಿದಾಗಲೂ ಇದರ ಗಂಭೀರತೆ – ತೀವ್ರತೆ ಹೆಚ್ಚುತ್ತಾ ಹೋಗಿ ಕೊನೆಗೆ ಇವನನ್ನು ಸಂಪೂರ್ಣವಾಗಿ ನಿರರ್ಥಕನನ್ನಾಗಿ ಮಾಡಿ, ಇವನ ಜೀವನೋಪಾಯಕ್ಕೆ ಕೊಡಲಿ ಪೆಟ್ಟು ಹಾಕುತ್ತದೆ. ಇದು ತೀಕ್ಷ್ಣ ಒಕ್ಕಲಿಗನ ಪುಪ್ಪುಸ ರೋಗದ ಲಕ್ಷಣಗಳು.

ಈ ರೋಗ ಪೀಡಿತರೆಲ್ಲರಿಗೂ ತೀಕ್ಷ್ಣ

ಬಾಯಿಲೆ ಇಲ್ಲದಿದ್ದರೂ ಉಸಿರಾಡಲು ತೊಂದರೆಯಾಗುವ ಲಕ್ಷಣ ಹಂತ-ಹಂತಗಳಲ್ಲಿ ಬೆಳೆಯುತ್ತದೆ. ಇದು ಅನೇಕ ವರ್ಷ ಧೂಳುಮಯವಾದ ಒಣ ಹುಲ್ಲಿನ ಸಂಪರ್ಕದಿಂದ ಆಗಬಹುದು. ರೋಗವು ಈ ವಿಧವಾಗಿ ತೀಕ್ಷ್ಣ ಹಂತ ಮುಟ್ಟದೆ ಹೋದಾಗ ವೈದ್ಯರು ಇದನ್ನು ದೀರ್ಘ ಕಾಲದ ಗೂರಲು ರೋಗವೆಂದು ನಿದಾನ (diagonise) ಮಾಡಬಹುದು. ಹೀಗೆ ತಪ್ಪು ನಿಧಾನವನ್ನು ತಪ್ಪಿಸಲು ರೋಗಿಯ ವೃತ್ತಿಯ ಬಗ್ಗೆ ವಿಷಯ ಸಂಗ್ರಹ ಮಾಡುವುದು ಸಹಕಾರಿಯಾಗುತ್ತದೆ. ರೋಗಿಯು ವೃತ್ತಿಯಿಂದ ರೈತನಾಗಿ, ಇವನು ಧೂಳುಮಯ ಒಣ ಹುಲ್ಲಿನ ಸಂಪರ್ಕ ಹೊಂದುತ್ತಿರುವವನಾದರೆ ಇವನಿಗೆ 'ಒಕ್ಕಲಿಗನ ಪುಪ್ಪುಸ ರೋಗ' ಲಕ್ಷಣವಿದೆ ಎಂದು ಗುರುತಿಸಬಹುದು.

**ರೋಗಕಾರಕ ಕಾರಣಗಳು:**

ರೈತರು ಸಾಮಾನ್ಯವಾಗಿ ಸುಗ್ಗಿಯಾದಾಗ ಹುಲ್ಲನ್ನು ಒಣಗಿಸಿ, ಅದರ ಕಟ್ಟುಗಳನ್ನು ಕಟ್ಟಿ, ಅವುಗಳನ್ನು ಬಣವಿ ಹಾಕುವರು. ಈ ಒಣ ಹುಲ್ಲನ್ನೇ ಮಳೆಗಾಲ, ಚಳಿಗಾಲಗಳಲ್ಲಿ ತಮ್ಮ ದನಗಳ ಮೇವಾಗಿ ಉಪಯೋಗಿಸುತ್ತಾರೆ. ರೈತರಿಗೆ ಒಣಹುಲ್ಲಿನ ನಿಕಟ ಸಂಪರ್ಕ ತಪ್ಪಿದ್ದಲ್ಲ. ಆದರೆ, ಸುಗ್ಗಿ ಕಾಲದಲ್ಲಿ ಹುಲ್ಲನ್ನು ಒಣಗಿಸಿದಾಗ ಅದು ಸಂಪೂರ್ಣ ಒಣಗದಿದ್ದರೆ ಆಗ ಅದಕ್ಕೆ ಬೂಜು ಹಿಡಿಯುತ್ತದೆ. ಈ ಬೂಜು ಹಿಡಿದ ಹುಲ್ಲನ್ನೇ ಕಟ್ಟಿ, ಬಣವಿ ಹಾಕಿದಾಗ, ಈ ಬೂಜು ಹೆಚ್ಚುತ್ತಾ ಹೋಗಿ ಹುಲ್ಲಿನ ಮೇಲೆ ಬಿಳಿಯ ಧೂಳಿನ ಮೇಘಗಳೇ ಸಂಗ್ರಹವಾಗಿರುತ್ತದೆನ್ನಬಹುದು (ಒಣಗಿದ ಬೂಜು ಬಿಳಿಯ ಧೂಳಾಗಿ ಸಂಗ್ರಹವಾಗುತ್ತದೆ.) ದನಗಳಿಗೆ ಮೇವು ಹಾಕಲು ಈ ಬಣವಿಯಿಂದ ಹುಲ್ಲನ್ನು ಕಿತ್ತಾಗ ಅದರಿಂದ ಬೂಜ ಯುಕ್ತ ಬಿಳಿಧೂಳು ಸುತ್ತೆಲ್ಲ ತುಂಬಿಕೊಳ್ಳುತ್ತದೆ. ಈ ಧೂಳನ್ನು ಉಸಿರಾಡಿಸದೆ ವಿಧಿಯಿರುವದಿಲ್ಲ, ನಮ್ಮ ರೈತನಿಗೆ. ಅದೂ ಅಲ್ಲದೆ, ದನದ ಕೊಟ್ಟಿಗೆಗಳು ಗಾಳಿ-ಬೆಳಕಿಲ್ಲದ ಗವಿಗಳಂತೆ ಇರುವುದರಿಂದ ಈ ಧೂಳು ಕೊಟ್ಟಡಿಗೆಗಳನ್ನು ತುಂಬಿಕೊಂಡು ಬಿಡುತ್ತದೆ. ಈ ಧೂಳನ್ನು ರೈತ ಸಾಕಷ್ಟು ಪ್ರಮಾಣದಲ್ಲಿ ಉಸಿರಾಡುತ್ತಾನೆ. ಈ ಧೂಳಿನಲ್ಲಿರುವ ಪ್ರತಿವಿಷ ಜನಕ ವಸ್ತುಗಳು (Antigen) ದೇಹವನ್ನು ಪ್ರವೇಶಿಸಿದಾಗ, ದೇಹದಲ್ಲಿಯ ನಿರೋಧಕ ವಸ್ತು (Anti Body) ಗಳು ಅವುಗಳೊಡನೆ ಹೋರಾಟ ನಡೆಸುತ್ತವೆ. ಈ ಹೋರಾಟವೇ 'ಒಕ್ಕಲಿಗನ ಪುಪ್ಪುಸ ರೋಗಕ್ಕೆ ಕಾರಣವಾಗುತ್ತದೆ. ರೋಗಕಾರಕವು ಈ ಕ್ಲಿಷ್ಟ ಕ್ರಿಯೆಯ ಪರಿಣಾಮವಾದ್ದರಿಂದ ರೋಗದ ಲಕ್ಷಣಗಳನ್ನು ಪ್ರಾರಂಭ ದೆಸೆಯಲ್ಲಿ ಕಾಣಲು ಆಗುವುದಿಲ್ಲ. ಆದರೆ ಹೀಗೆ ದಿನೇ ದಿನೇ ಧೂಳನ್ನು ಸ್ವೀಕರಿಸುತ್ತಾ ಹೋದಲ್ಲಿ ರೈತನ ದೇಹದಲ್ಲಿ ಧೂಳಿನ ಪ್ರತಿವಿಷಜನಕ ವಸ್ತುವಿನೊಡನೆ ಹೋರಾಡಲು ಬೇಕಾದ ನಿರೋ

ಧಕ ವಸ್ತು ಹೆಚ್ಚು ಹೆಚ್ಚಾಗಿ ತಯಾರಾಗುತ್ತದೆ. ಇದರಿಂದ ಮತ್ತೆ ಒಂದಕ್ಕೊಂದರ ಹೋರಾಟ, ಹೀಗೇ ಮುಂದುವರಿದು, ಆಗಾಗ ಇಂತಹ ಸ್ಥಿತಿ ಸಂಭವಿಸಿದಾಗ ಈ ರೋಗಕ್ಕೆ ಪ್ರಾರಂಭವಾಗುತ್ತದೆ. ಈ ಕ್ರಿಯೆ–ಪ್ರಕ್ರಿಯೆಗಳು ನಿದಾನವಾದ ಹಂತಗಳಲ್ಲಿ ನಡೆಯುದರಿಂದ ಈ ರೋಗ ನಿದಾನ (diagnosis) ಮಾಡುವುದು ತೊಂದರೆಯಾಗುತ್ತದೆ.

### ರೋಗ ವಿಸ್ತರಣಾ ಕ್ಷೇತ್ರ

'ಒಕ್ಕಲಿಗನ ಪುಪ್ಪುಸ ರೋಗ' ಪ್ರಪ್ರಥಮವಾಗಿ ೧ ಶತಮಾನದ ಹಿಂದೆ ಐಸ್‌ಲ್ಯಾಂಡ್‌ದಲ್ಲಿ ಗುರ್ತಿಸಲಾಯಿತು. ಆದರೆ ಇಂಗ್ಲಂಡಿನಲ್ಲಿ ಇದು ಪ್ರಥಮ ಬಾರಿ ಗುರ್ತಿಸಿದ್ದು ೧೯೩೨ರಲ್ಲಿ –ಕಾರ್ಲ್ ಐಲ್ ಪ್ರದೇಶದಲ್ಲಿ. ಅಮೇರಿಕಾ ದೇಶದಲ್ಲೂ ಕೆಲಕಾಲದಿಂದ ಈ ರೋಗವನ್ನು ಗುರ್ತಿಸುತ್ತಾ ಬಂದಿದ್ದಾರೆ. ಈ ರೋಗದ ಬಗ್ಗೆ ತಜ್ಞರು ನಡೆಸಿದ ಸಂಶೋಧನೆಯ ಮೇರೆಗೆ, ಈ ರೋಗವು ಸುಗ್ಗಿ ಕಾಲದಲ್ಲಿ ಅತಿವೃಷ್ಟಿ ಇರುವ ಕ್ಷೇತ್ರದಲ್ಲಿ ಹೆಚ್ಚಾಗಿ ಕಂಡು ಬರುತ್ತದೆ. ಭಾರತದಲ್ಲಿ ಮಲೆನಾಡು, ಆಸ್ಸಾಂ, ಬೆಂಗಾಲ್, ಪಶ್ಚಿಮ ಕರಾವಳಿ ಮುಂತಾದ ಪ್ರದೇಶಗಳಲ್ಲಿಯ ರೈತರಿಗೆ ಈ ರೋಗ ತಾಕುವ ಸಂಭವ ಹೆಚ್ಚು.

### ರೋಗ ಪ್ರತಿಬಂಧಕ ವಿಧಾನಗಳು:

ಈ ರೋಗವು ಬಹಳ ಗಂಭೀರ ಪರಿಣಾಮಗಳನ್ನು ಹೊಂದಿರುವುದರಿಂದ ಇದರ ಪ್ರತಿಬಂಧನೆಗೆ ಪ್ರಯತ್ನಿಸುವುದು ಬಹಳ ಮುಖ್ಯ. ಈ ವಿಷಮ ರೋಗವನ್ನು ಪ್ರತಿಬಂಧಿಸಲು ಪ್ರಪ್ರಥಮವಾಗಿ ನಾವು ನಮ್ಮ ರೈತರಲ್ಲಿಯ ಅಜ್ಞಾನವನ್ನು ನಿರ್ಮೂಲನಗೊಳಿಸಬೇಕು. ಈ ರೋಗಕ್ಕೆ ಕಾರಣ, ಆದರ ಭಯಾನಕ ಪರಿಣಾಮ, ಇದರಿಂದ ರೈತನ ಕುಟುಂಬಕ್ಕೆ, ರಾಷ್ಟ್ರಕ್ಕೆ ಆಗುವ ಅಪಾರ ಹಾನಿ ಇವೆಲ್ಲವುಗಳ ಬಗ್ಗೆ ರೈತರಿಗೆ ಸಂಪೂರ್ಣ ಜ್ಞಾನ ಒದಗಿಸಬೇಕು. ಈ ಕ್ರಮವು ಅತಿ ಮಹತ್ವವಾದ, ಅತಿ ಪ್ರಮುಖವಾದದ್ದು. ಎರಡನೆಯದಾಗಿ 'ಆರೋಗ್ಯವೇ ಮಹಾಭಾಗ್ಯ' ಎಂಬ ದೃಷ್ಟಿಯಲ್ಲಿ ನಮ್ಮ ರೈತರ ವಿಶ್ವಾಸ ಮೂಡಬೇಕಾದರೆ ಅವರಿಗೆ ಬೇಕಾದ ಆರೋಗ್ಯದ ಪ್ರಥಮ ಪಾಠಗಳ ಪರಿಚಯ ಮಾಡಿ ಕೊಡಬೇಕು. ಈ ರೋಗವು ದನಗಳ ಮೇವಿನಲ್ಲಿರುವ ಪ್ರತಿ ವಿಷಜನಕ ವಸ್ತುಗಳನ್ನು ಉಸಿರಾಡುವ ಪರಿಣಾಮವಾಗಿಯೇ ಉಂಟಾಗುತ್ತಾದ್ದರಿಂದ, ಸುಗ್ಗಿ ಕಾಲದಲ್ಲಿ ಹಸಿ ಹುಲ್ಲನ್ನು ಒಣಗಿಸುವ ಬಗ್ಗೆ ನವ್ಯ ವೈಜ್ಞಾನಿಕ ವಿಧಾನಗಳನ್ನು ಅರಿತು, ಅನುಸರಿಸುವ ಪ್ರಯತ್ನ ಆಗಬೇಕು. ನಮ್ಮ ದನದ ಕೊಟ್ಟಿಗೆಗಳು ಗಾಳಿ–ಬೆಳಕು ರಹಿತ ಕತ್ತಲು ಗವಿಗಳಾಗದೇ ಹೆಚ್ಚು ಗಾಳಿ–ಬೆಳಕು–ಗಟಾರುಗಳನ್ನು ಪಡೆದ ವಿಸ್ತಾರ ಕೊಟ್ಟಿಗೆಗಳಾಗಬೇಕು. ಎಲ್ಲಾದರೂ ಅಕಸ್ಮಾತ್ತಾಗಿ ಬೂಜು ಹಿಡಿದ ಒಣಹುಲ್ಲು ಕಂಡಲ್ಲಿ

ಆದನ್ನು ಉಪಯೋಗಿಸದೆ ಸುಟ್ಟುಬಿಡುವ ಕ್ರಮ ಮುಖ್ಯ. ಈ ಬೂಜು ಹಿಡಿದ ಹುಲ್ಲೇ ಈ ಭಯಾನಕ ರೋಗದ ಮೂಲ. ಇದರೊಡನೆ ರೈತರು ದನದ ಕೊಟ್ಟಿಗೆಗಳಲ್ಲಿ ಕೆಲಸ ಮಾಡುವಾಗ ಕೆಟ್ಟ ಧೂಳು ಮೂಗಿನೊಳಗೆ ಪ್ರವೇಶಿಸದಂತೆ ಮುಖವಾಡಗಳನ್ನು ಧರಿಸಬೇಕು. ಆದಷ್ಟು ಪ್ರಮಾಣದಲ್ಲಿ ಹುಲ್ಲನ್ನು ಒಣಗಿಸಲು ವೈಜ್ಞಾನಿಕ ರೀತಿಯನ್ನು ಅನುಸರಿಸುವಲ್ಲಿ ಸಾರ್ವಜನಿಕ, ಸಹಕಾರೀ ಪ್ರಯತ್ನಗಳು ಸಹಕಾರವಾಗಬಹುದು. ಎಲ್ಲಕ್ಕಿಂತ ಮುಖ್ಯ ರೈತರ ಎಚ್ಚರ. ಈ ರೋಗ ಬಹಳ ಭಯಾನಕ ಪರಿಣಾಮಗಳನ್ನು ಹೊಂದಿರುವುದರಿಂದ ಈ ಸಮಸ್ಯೆಯನ್ನು ಧೈರ್ಯದಿಂದ ಎದುರಿಸುವ ಪ್ರಯತ್ನಗಳಾಗಬೇಕು.

**ರೋಗ ನಿವಾರಣೆ ಸಾಧ್ಯವೇ ?**

'ಒಕ್ಕಲಿಗನ ಪುಪ್ಪುಸ ರೋಗ'ದ ವೈದ್ಯೋಪಚಾರಕ್ಕೆ ಯಾವುದೂ ನಿರ್ದಿಷ್ಟ ಮದ್ದು ಇಲ್ಲಿಯ ವರೆಗೆ ಕಂಡುಹಿಡಿಯಲಾಗಿಲ್ಲ. ಆದರೆ ಇದನ್ನು ರೋಗ ಲಕ್ಷಣಗಳಿಗನುಸಾರವಾಗಿ ಉಪಚಾರ ಮಾಡುವ ಕ್ರಮ ರೂಢಿಯಲ್ಲಿದೆ. ಇದರ ನಿವಾರಣೆಗೆ ಮುಖ್ಯವಾದದ್ದು ವಿಶ್ರಾಂತಿ. ರೋಗವು ಗುಣಮುಖವಾದಂತೆ ಕ್ರಮೇಣ ಹಾಗೂ ನಿಧಾನವಾಗಿ ಕೆಲಸದಲ್ಲಿ ಈ ರೈತನು ತೊಡಗಬೇಕೇ ಹೊರತು ಒಮ್ಮೆಲೇ ಶ್ರಮ ವಹಿಸಿದರೆ ಮತ್ತೆ ರೋಗ ತೀವ್ರವಾಗಿ ಮರುಕಳಿಸುತ್ತದೆ.



## ಭಾರತದಲ್ಲಿ ಸ್ಥಿತಿ–ಗತಿ

ಈ ರೋಗಕ್ಕೆ ಪಾಶ್ಚಾತ್ಯರೇ ಖಚಿತ ನಿವಾರಣೋಪಾಯ ದೊರೆಯದೆ ಪರಿತಪಿಸುತ್ತಿರುವಾಗ ಭಾರತದಲ್ಲಿ ಸ್ಥಿತಿ-ಗತಿ ವಿವರಿಸಲು ಅವಶ್ಯವಿಲ್ಲ. ನಮ್ಮ ರೈತರಿಗೆ, ವೈದ್ಯರಿಗೆ, ತಜ್ಞರಿಗೆ ಈ ಬಗ್ಗೆ ಹೆಚ್ಚು ಹೆಚ್ಚು ತಿಳಿದಲ್ಲಿ ಉತ್ತಮ. ನಮ್ಮ ಕೇಂದ್ರ ಸರಕಾರ ಈ ರೋಗದ ಭಯಾನಕತೆಯನ್ನು ಗುರ್ತಿಸಿ ತನ್ನ ಪಂಚವಾರ್ಷಿಕ ಯೋಜನೆಗಳಲ್ಲಿ ಈ ರೋಗದ ಪ್ರತಿಬಂಧನಕ್ಕೆ ಬೇಕಾದ ಕ್ರಮ ತೆಗೆದುಕೊಂಡಲ್ಲಿ ಉತ್ತಮವಾಗುತ್ತದೆ. ಭಾರತ ರೈತರ ನಾಡೆಂದು ಹೆಮ್ಮೆಯಿಂದ ಹೇಳಿಕೊಳ್ಳುವ ನಾವು ರೈತರ ಆರೋಗ್ಯವನ್ನೇ ನಿರ್ಲಕ್ಷಿಸಿದಂತಾದೀತು? ಈ ಸಮಸ್ಯೆ ಇಂದು ನಮ್ಮ ಗಮನ ಸೆಳೆಯಬೇಕಾಗಿದೆ.

ಇದಕ್ಕೆ ಸಮಗ್ರ ತೀವ್ರ ಪರಿಹಾರ ತಕ್ಷಣ ಸಾಧ್ಯವಿಲ್ಲದಿದ್ದರೂ ಇದನ್ನು ಎದುರಿಸುವಲ್ಲಿ ರೈತರ ಅಜ್ಞಾನ ನಿವಾರಣೆ, ಒಕ್ಕಲುತನ ವಿಧಾನಗಳ ಸುಧಾರಣೆ, ವೈದ್ಯರಲ್ಲಿ ಹೆಚ್ಚು ಎಚ್ಚರ ಇವುಗಳೇ ಈ ರೋಗದ ನಿಯಂತ್ರಣೆಗೆ ಆಶಾದಾಯಕ ಕ್ರಮಗಳೆನ್ನಬಹುದು.

ರೈತರ ಜೀವನಕ್ಕೇ ಕೊಡಲಿ ಪೆಟ್ಟಾಗಬಹುದಾದ ಈ ಭಯಾನಕ ರೋಗಕ್ಕೇ ಕೊಡಲಿ ಪೆಟ್ಟು ಹಾಕಲು ರಾಷ್ಟ್ರಕ್ಕೆ ರಾಷ್ಟ್ರವೇ ತಯಾರಾಗಬೇಕು.

**ಲೇ. ಶ್ರೀ ಐ. ಜಿ. ಹುದ್ದಾರ**

# ಪಾರಿಭಾಷಿಕ ಶಬ್ದಗಳು

## ಭೌತ ವಿಜ್ಞಾನ

| ಇಂಗ್ಲೀಷು | ಹಿಂದೀ | ಕನ್ನಡ |
|---|---|---|
| Absolute Scale of Temperature | ಪರಮತಾಪ ಮಾಪಕ್ರಮ | ವಿಶುದ್ಧ ಉಷ್ಣ ಮಾಪಕ್ರಮ |
| Absolute Unit | ನಿರಪೇಕ್ಷ ಮಾತ್ರಿಕ್ | ವಿಶುದ್ಧ ಏಕಮಾನ |
| Absolute Viscocity | ಪರಮ ಶ್ಯಾನತಾ | ವಿಶುದ್ಧ ಶ್ಯಾನತ್ವ |
| Absolute Volume | ನಿರಪೇಕ್ಷ ಆಯಾತ | ವಿಶುದ್ಧ ಗಾತ್ರ |
| Absolute Weight | ನಿರಪೇಕ್ಷ ತೋಲ್ | ವಿಶುದ್ಧ ತೂಕ |
| Absorptance | ಅವಶೋಷಣಾಂಕ್ | ಹೀರುವಿಕೆಯ ಅಂಕ |
| Absorption Coefficient of | ಅವಶೋಷಣ ಗುಣಾಂಕ್ | ಹೀರುವಿಕೆಯ ಗುಣಾಂಕ |
| Absorption, lambert Law of | ಲ್ಯಾಂಬರ್ಟ್ ಕಾ ಅವಶೋಷಣ ಕಾ ನಿಯಮ | ಲ್ಯಾಂಬರ್ಟನ ಹೀರುವಿಕೆಯ ನಿಯಮ |
| Absorption Band | ಅವಶೋಷಣ ಪಟ್ಟ | ಹೀರುವಿಕೆಯ ಪಟ್ಟಿ |
| Absorption Cell | ಅವಶೋಷಕ ಪಾತ್ರಕ್ | ಹೀರುವಿಕೆಯ ಗೂಡು |
| Absorption Factor | ಅವಶೋಷಣಕ ಗುಣಕ | ಹೀರುವಿಕೆಯ ಗುಣಕ |
| Absorption of Radiation | ವಿಕಿರಣ ಕಾ ಅವಶೋಷಣ | ವಿಸರಣದ ಹೀರುವಿಕೆ |
| Absorption Spectrum | ಅವಶೋಷಣ ವರ್ಣಕ್ರಮ | ಹೀರುವಿಕೆಯ ವರ್ಣ ಪಂಕ್ತಿ |

# ನಾವು ಮತ್ತು ನಮ್ಮ ಮಕ್ಕಳು



ಶ್ರೀ ಸಿ. ಕೆ. ವಾಸುದೇವರಾವ್,
ಎಂ. ಎ., ಬಿ. ಟಿ., ಡಿ. ಎಂ. ಪಿ.

[ 'ನಾವು ಮತ್ತು ನಮ್ಮ ಮಕ್ಕಳು' ಮಾಲಿಕೆಯಲ್ಲಿ ಈಗಾಗಲೇ ಎರಡು ಲೇಖನಗಳನ್ನು ಪ್ರಕಟಿಸಿದ್ದೇವೆ. ಗರ್ಭಿಣಿಗೆ ಕೆಲ ಸಲಹೆಗಳು, ಗರ್ಭಿಣಿ ಸ್ತ್ರೀಗೆ ಮನೆಯಲ್ಲಿ ಇರಬೇಕಾದ ವಾತಾವರಣ ಮುಂತಾದ ವಿಷಯುಗಳನ್ನು ಹಿಂದಿನ ಲೇಖನಗಳಲ್ಲಿ ವಿವೇಚಿಸಲಾಗಿತ್ತು. ಪ್ರಸ್ತುತ ಲೇಖನದಲ್ಲಿ ಶಿಶು ಜನನವಾದ ನಂತರ ತಾಯಿ ತೆಗೆದುಕೊಳ್ಳಬೇಕಾದ ಕ್ರಮಗಳ ಬಗ್ಗೆ ಸೂಚಿಸಿದ್ದಾರೆ. —ಸಂ.]

## ತಾಯಿಗೆ ತನ್ನ ಶಿಶುವೇ ಸಂಪತ್ತು:

ಹೆರಿಗೆಯು ಸುಲಭವಾಗಿ ಆಯಿತೆಂದರೆ ಮನೆಮಂದಿಗೂ ಹೆರಿಗೆ ಸಮಯದಲ್ಲಿ ಸಹಾಯ ಮಾಡಿದ (ದಾದಿ) ಸೂಲಗಿತ್ತಿ ಹಾಗೂ ವೈದ್ಯರಿಗೂ ಸಂತೋಷವನ್ನುಂಟು ಮಾಡುವ ವಿಷಯ. ಹೊಸದಾಗಿ ಹುಟ್ಟಿದ ಶಿಶುವನ್ನು ತಾಯಿ ತನ್ನ ಮಡಲಲ್ಲಿಟ್ಟು ಮುದ್ದಿಸಿ ಸಂತೋಷ ಸಾಗರದಲ್ಲಿ ಮುಳುಗಿರುವಳು. ಆಕೆಗೆ ಮಗು ಒಂದು **ಹಿರಿಯ ಸಂಪತ್ತೇ ಸರಿ.** ಈ ಸಂಪತ್ತನ್ನು **ಬಹಳ ಎಚ್ಚರಿಕೆಯಿಂದ** ಕಾಪಾಡುವುದೇ ಆಕೆಯ ಒಂದು **ಹಿರಿದಾಸೆ.** ಈ ಕಾರ್ಯವನ್ನು ನಡೆಯಿಸಿಕೊಂಡು ಬರಲು ಆಕೆಗೆ ಹೆಚ್ಚಿನ ಅನುಭವ ಇಲ್ಲವೆಂದು ಚಿಂತೆ ಮಾಡುವುದು ಉಚಿತವಲ್ಲ. ಶಿಶುವಿನಲ್ಲಿ **ವಿಶ್ವಾಸ** ಮತ್ತು **ಮನೋಭಾವ**

ಆಳವಾಗಿದ್ದರೆ ಆಕೆಗೆ ಈ ಕೆಲಸವು ಸಾಂಗವಾಗಿ ಜರಗುವುದರಲ್ಲಿ ಸಂದೇಹವಿಲ್ಲ.

ತಾಯಿಯು ಪ್ರತಿಫಲಾಪೇಕ್ಷೆಯಿಲ್ಲದೆ ತನ್ನ ಶಿಶುವಿಗೆ ಮನಸಾರ ಕೊಡುವ ಬಹುಮಾನವೆಂದರೆ **ವಿಶ್ವಾಸ.** ಶಿಶುವಿಗೆ ಇದಕ್ಕಿಂತ ಹೆಚ್ಚಿನದು ಮಹತ್ವವುದು ಇಲ್ಲವೆಂದರೆ ಎಲ್ಲರೂ ಒಪ್ಪಬೇಕು. ಇಂಥ ಅಮೂಲ್ಯವಾದ ವಸ್ತುವಿನ ವಿಷಯವಾಗಿ ತಾಯಿಯು ಹೆಚ್ಚು ತಿಳುವಳಿಕೆ ಪಡೆಯುವುದು ಜನ್ಮಸಿದ್ಧವಾದ ಹಕ್ಕು. ಗುಲಾಬಿ ಹೂವಿನ ಪೂರ್ಣ ಅಂದ-ಚೆಂದಕ್ಕೆ ಸೂರ್ಯನ ಪ್ರಕಾಶವು ಹೇಗೆ ಅತ್ಯವಶ್ಯಕವೋ ಹಾಗೆಯೇ ಶಿಶುವಿನ ಅಭಿವೃದ್ಧಿಗೆ ತನ್ನ ತಾಯಿಯ ಪ್ರೀತಿಯು ಉತ್ತಮ ಮಟ್ಟದ್ದಾಗಿರಬೇಕು. ಪ್ರೀತಿ, ಪ್ರೇಮ ಹಾಗೂ ವಾತ್ಸಲ್ಯವು ಅತಿ ಮುಖ್ಯವಾದುದು. ಎರಡನೆಯದಾಗಿ ಶಿಶುವಿನ **ಅಗತ್ಯ**ಗಳೇನೆಂಬುದನ್ನು ತಿಳಿಯುವುದು **ವಿವೇಕಶಾಲಿ**ಯಾದ ತಾಯಿಯ ಲಕ್ಷಣವು.

**ಶಿಶುವು ಅಳುವುದು:**

ಶಿಶುವು ತನ್ನ ತಾಯಿಯ **ಜನನ ನಾಳ**ವೆಂಬ ಕಾಲುವೆಯ ಮೂಲಕ ಹೊರಬೀಳುವುದೆಂಬುದು ಸಾಮಾನ್ಯ ವಿಜ್ಞಾನದ ವಿಷಯ. ಹೊರಬಂದ ತಕ್ಷಣವೇ ಶಿಶುವು ಅತ್ತರೆ ಅದು ಜೀವ ಸಹಿತವಾಗಿ ಜನಿಸಿದುದಕ್ಕೆ ಒಂದು ಹೆಗ್ಗುರ್ತು.

ಶಿಶುವಿನ ಅಳುವಿನ ಬಗ್ಗೆ ಪ್ರವೀಣರು ಬೇರೆ ಬೇರೆ ರೀತಿಯಲ್ಲಿ ವ್ಯಾಖ್ಯಾನ ಮಾಡಿರುವರು.

(ಅ) ಹೆಚ್ಚು ಕಾಲ ತಾಯಿಯ ಗರ್ಭಕೋಶದಲ್ಲಿದ್ದುದರ ದೆಶೆಯಿಂದ ಶಿಶುವಿಗೆ ಅಲ್ಲಿಯ **ಸುಖೋಷ್ಣ** ವಾತಾವರಣ ರೂಢಿಯಾಗಿರುವುದು. ಗರ್ಭಕೋಶದಲ್ಲಿ ಶಾಖದ ಮಟ್ಟವು ಹೊರಗಿನ ಶಾಖದ ಮಟ್ಟಕ್ಕಿಂತ ಹೆಚ್ಚಿನದ್ದೆಂಬುದು ಶಾಸ್ತ್ರಸಮ್ಮತವಾದ ವಿಷಯ. ಈ ವ್ಯತ್ಯಾಸವು ಶಿಶುವಿಗೆ **ಅಹಿತ**ವನ್ನುಂಟುಮಾಡಿ, ಗರ್ಭಕೋಶದಲ್ಲಿದ್ದ ಸುಖೋಷ್ಣ ವಾತಾವರಣವೇ ಬೇಕೆಂದು ಬೊಬ್ಬೆ ಹಾಕುತ್ತದೆಯೆಂದು **ಭೌತವಿಜ್ಞಾನಿ**ಗಳ ಅಭಿಪ್ರಾಯ.

(ಆ) ಜನಿಸುತ್ತಲೇ **ಶ್ವಾಸೋಚ್ಛ್ವಾಸದ** ಇಕ್ಕಟ್ಟನ್ನು ಕಡಿಮೆ ಮಾಡಲು ಶಿಶುವು ಅಳಲೇಬೇಕೆಂಬುದನ್ನು ಶರೀರ ವಿಜ್ಞಾನ ಶಾಸ್ತ್ರಜ್ಞರ ಅಚಲ ಅಭಿಪ್ರಾಯ.

(ಇ) ಪಾಪ ಕಾರ್ಯ ಭೂಯಿಷ್ಟವಾದ ಈ ಭೂಮಿಯಲ್ಲಿ ಹುಟ್ಟಲು ಇಷ್ಟವಿಲ್ಲವೆಂದು ಮಗು ಅಳುತ್ತದೆ ಎಂಬುದಾಗಿ **ತತ್ವಶಾಸ್ತ್ರಜ್ಞರು** ಟೀಕೆ ಮಾಡುವರು.

(ಈ) ಅಸಹಾಯಕ ಸ್ಥಿತಿಯಲ್ಲಿ ಜನಿಸಿ ಸಹಾಯಕ್ಕಾಗಿ ಅಳುವುದೆಂದು **ಮನಶಾಸ್ತ್ರಜ್ಞರು** ಅಭಿಪ್ರಾಯ ಪಡುವರು.

ಅಳುತ್ತಲಿರುವ ಶಿಶುವನ್ನು ಬಿಸಿ ನೀರಿನಿಂದ ತೊಳೆದು, ಒರೆಸಿ, ಬೆಚ್ಚಗಿರುವ ಬಟ್ಟೆಯಿಂದ ಸುತ್ತಿ ಇಟ್ಟರೆ ಅಳುವೆಲ್ಲಾ ಒಂದು ಕ್ಷಣಕಾಲದಲ್ಲಿ ನಿಲ್ಲುವುದು ಅನುಭವಸ್ಥರಿಗೆಲ್ಲಾ ತಿಳಿದ ಅಂಶ.

**ಶಿಶುವಿನ ಆಹಾರ– ಹಾಲು ಕುಡಿಸುವ ವಿಧಾನ**

ಮೊಟ್ಟಮೊದಲು ತನ್ನ ಸ್ತನ್ಯಗಳಿಂದ ಹಾಲು ಕುಡಿಸುವುದು ತಾಯಿಗೆ ಒಂದು ಹೊಸ ಅನುಭವವೇ ಸರಿ. ಇದರ ವಿಷಯವಾಗಿ ಕಾನೂನು, ಕಾಯಿದೆಗಳೇನೂ ಇಲ್ಲ. ತಾಯಿಯು ತನ್ನ ಸ್ವಂತ ಅನುಭವದಿಂದ ಮಾಡತಕ್ಕ ಕೆಲಸವಿದು. ಆದರೆ ಅನುಭವಸ್ತರಿಂದ ಅರಿತ ಕೆಲವು ವಿಷಯಗಳನ್ನು ಇಲ್ಲಿ ಸೂಚಿಸುವೆವು.

(ಅ) ಶಿಶುವಿಗೆ ಹಾಲು ಕುಡಿಸುವ ಕಾರ್ಯವನ್ನು ಸಾವಕಾಶದಿಂದ ಮಾಡುವುದು ಉತ್ತಮ. ಗಡಿಬಿಡಿಗೆ ಅವಕಾಶ ಕೊಡದೆ ತಾಯಿಯು ತನ್ನ ಶಿಶುವನ್ನು ತನ್ನ ಬಾಹುಗಳಲ್ಲಿ ಅಪ್ಪಿಕೊಂಡು ತನ್ನ ಸ್ತನ್ಯಗಳ ತೊಟ್ಟು ಅದರ ಸಣ್ಣ ತುಟಿಗಳ ನಡುವೆ ಇಡಲು ಸಹಾಯ ಮಾಡಬೇಕು. ಶಿಶುವಿನ ತಲೆಯನ್ನು ಗಟ್ಟಿಯಾಗಿ ಒತ್ತಿ ಸ್ತನ್ಯಗಳ ತೊಟ್ಟನ್ನು ಬಾಯಲ್ಲಿ ತುರುಕಬಾರದು. ಇದು ಸರಿಯಾದ ಕ್ರಮವಲ್ಲ. ಹೀಗೆ ಮಾಡಿದರೆ ಶಿಶುವಿಗೆ ಹಿಂಸೆಯಾಗಿ ಬಿಡಿಸಿಕೊಳ್ಳಲು ಒದ್ದಾಡುವುದು. ಮೊಟ್ಟಮೊದಲು ಈ ರೀತಿಯ ಅನುಭವಕ್ಕೆ ಶಿಶುವು ತುತ್ತಾದರೆ, ನಂತರ ಹಾಲು ಉಣುವುದು, ಉಣಿಸುವುದು ಒಂದು ದೊಡ್ಡ ಸಮಸ್ಯೆಯಾಗಿಯೇ ಉಳಿಯುವುದರಲ್ಲಿ ಸಂದೇಹವಿಲ್ಲ. ಪ್ರತಿಯೊಬ್ಬ ತಾಯಿಯು ಈ ವಿಷಯಕ್ಕೆ ಹೆಚ್ಚು ಗಮನ ಕೊಡಬೇಕು.

(ಆ) ನಿಶ್ಶಬ್ದ ಜಾಗ, ಶುಚಿಯಾದ ಜಾಗ ಮತ್ತು ಬೆಚ್ಚಗಿರುವ ಜಾಗದಲ್ಲಿ ತಾನೇ ತಾನಾಗಿ ಶಿಶುವಿಗೆ ಹಾಲನ್ನುಣಿಸುವುದು ಹಿತಕರವು. ಶಿಶುವು ಹಾಲನ್ನು ಸಾಂಗವಾಗಿ ಕುಡಿದರೆ ತಾಯಿಗೆ ಹರ್ಷ ಉಂಟಾಗುವುದು. ಹಾಲು ಅಡಚಣಿಯಿಲ್ಲದೆ ಉತ್ಪನ್ನವಾಗಿ ತಾಯಿಯು ಕ್ಷೀರ ವಾಹಕಗಳ ಮೂಲಕ ಹರಿಯುವುದು. ತಾಯಿಯ ಮೊಲೆ ಹಾಲು ಕುಡಿಯುವದರಿಂದ ತಾಯಿ ಹಾಗೂ ಮಗು ಇವರುಗಳ ನಡುವೆ ಏಕತ್ವದ ಭಾವ ಉಂಟಾಗಲು ಸಹಕಾರವಾಗುತ್ತದೆ.

ಹಾಲು ಕ್ಷೀರವಾಹಕಗಳ ಮೂಲಕ ಹರಿಯಲು ಶಿಶುವು ಸ್ತನ್ಯಗಳ ತೊಟ್ಟನ್ನು ತನ್ನ ತುಟಿಗಳಿಂದ ಹೀರುವುದೇ ಕಾರಣ.

ಹಾಲು ಕೊಡಲು ಪ್ರಾರಂಭವಾದನಂತರ ಮತ್ತೊಂದು ಪ್ರಶ್ನೆ ಬಂದೊದಗುವುದು. **ಎಷ್ಟು ಸಾರಿ ಹಾಲನ್ನು ಉಣಿಸಬೇಕು** ಮತ್ತು ಎಷ್ಟು ಕಾಲ **ಉಣಿಸಬೇಕು.** ಹೆರಿಗೆಯು ದವಾಖಾನೆಯಲ್ಲಿ ಆದರೆ ದವಾಖಾನೆಯ ಕಟ್ಟಳೆಗೆ ಒಳಪಡಬೇಕು. ಕೆಲವು ದವಾಖಾನೆಯಲ್ಲಿ ಶಿಶುವು ಅತ್ತಾಗ ಹಾಲು ಉಣಿಸುವ ರೂಢಿಯನ್ನೂ, ಮತ್ತೆ ಕೆಲವು ದವಾಖಾನೆಯಲ್ಲಿ ವೇಳಾ ಪಟ್ಟಿಗೆ ಅನುಸಾರವಾಗಿ ಉಣಿಸುವ ಕ್ರಮವನ್ನು ಅನುಸರಿಸುವುದುಂಟು. ತನ್ನ ಮನೆಯಲ್ಲಿ ಹೆರಿಗೆಯಾದರೂ ಸರಿ, ದವಾಖಾನೆಯಲ್ಲಿ

ಹೆರಿಗೆಯಾಗಿ ಮನೆಗೆ ಬಂದ ಮೇಲೂ ಸರಿ, ಶಿಶುವಿಗೆ ಅಗತ್ಯವಿದ್ದಲ್ಲಿ ಹಾಲು ಉಣಿಸುವುದು ಸೂಕ್ತ ಕ್ರಮ. ಎಲ್ಲ ಮಕ್ಕಳಿಗೆ ಅಗತ್ಯಗಳು ಏಕರೀತಿ ಇರುವುದಿಲ್ಲ. ಆಗತ್ಯಗಳು ಶಿಶುವಿನ ವ್ಯಕ್ತಿ ಲಕ್ಷಣಕ್ಕೆ ಸಂಬಂಧಪಟ್ಟವು.

ಹಾಲು ಉಣಿಸುವ ವಿಷಯದಲ್ಲಿ ಕೆಲವು ಸಂಪ್ರದಾಯಸ್ಥರು ಈ ರೀತಿ ವಿವರಣೆ ಕೊಡುವರು.

ಹತ್ತು ನಿಮಿಷ ಉಣಿಸಿದ ನಂತರ ಒಂದು ಸ್ತನ್ಯದಿಂದ ಇನ್ನೊಂದು ಸ್ತನ್ಯಕ್ಕೆ ಬದಲಾಯಿಸುವುದು ಸೂಕ್ತವಾದದ್ದು. ಇಷ್ಟೇ ಕಾಲ ಉಣಿಸಬೇಕೆಂಬ ನಿಯಮವೇನಿಲ್ಲ. ಶಿಶುವು ಎಷ್ಟು ಕಾಲ ಉಣುತ್ತದೆಯೋ ಅಷ್ಟು ಹೊತ್ತು ಉಣಿಸುವುದರಿಂದ ಯಾವ ತೊಡಕೂ ಇಲ್ಲ. ಶಿಶುವು ಎಷ್ಟು ಬೇಕೋ ಅಷ್ಟು ಉಣುವುದು. ಅತಿಯಾಗಿ ಉಣಿಸಹೋದರೆ ಶಿಶುವು ಬೇಡೆನ್ನುವುದು.

ಶಿಶುವು ಮಲಗಿ ಎದ್ದ ಕೂಡಲೆ ಉಣಿಸುವುದು ಅವಶ್ಯಕ. ಎರಡು ಅಥವಾ ಮೂರು ಘಂಟೆಗೆ ಒಂದು ಸಾರಿ ಉಣಿಸುವುದು ಆರೋಗ್ಯಕರವು. ಹೊಸದಾಗಿ ಜನಿಸಿದ ಶಿಶುವಿಗೆ ಹಾಲು ಉಣುವುದು, ಮಲಗಿ ನಿದ್ರೆ ಮಾಡುವುದು ಮತ್ತು ಮಲಮೂತ್ರ ಮಾಡುವುದು ಇವು ಮೂರು ಮುಖ್ಯ ಚಟುವಟಿಕೆಗಳು. ಯಾವ ಶಿಶುವು ತ್ವರಿತವಾಗಿ ನಿದ್ರೆಯಿಂದ ಏಳುವದೋ ಅದು ಹಸಿವಿನಿಂದ ಏಳುತ್ತದೆ ಎಂಬುದು ಅನುಭವ ಸಿದ್ಧವಾದ ವಿಷಯ. ಆಗ ಅದಕ್ಕೆ ಹಾಲನ್ನು ಉಣಿಸಬೇಕು. ಹಾಲುಂಡು ಚೆನ್ನಾಗಿ ನಿದ್ರೆ ಮಾಡುತ್ತಿದ್ದರೆ ಶಿಶುವನ್ನು ಎಬ್ಬಿಸಿ ಹಾಲು ಉಣಿಸುವುದು ಒಳ್ಳೆಯ ಪದ್ಧತಿ ಎನಿಸಿಕೊಳ್ಳುವುದಿಲ್ಲ. ಉಂಡ ಹಾಲು ಶಿಶುವಿನಲ್ಲಿ ಜೀರ್ಣವಾಗಬೇಕಾದರೆ ನಿದ್ರೆ ಬಹಳ ಮುಖ್ಯ. ನಿದ್ರಿಸುತ್ತಿರುವ ಶಿಶುವನ್ನು ಎಬ್ಬಿಸಿ ಪುನಃ ಹಾಲನ್ನುಣಿಸುವುದರಿಂದ ಮೊದಲು ಉಂಡ ಹಾಲು ಜೀರ್ಣವಾಗಿ ರಕ್ತಗತವಾಗಲು ಅಡ್ಡಿ ತಂದಂತಾಗುವುದು. ಇದು ಅನಾರೋಗಕ್ಕೆ ಕಾರಣವಾಗುವುದು.



ಶಿಶುವು ತಾನಾಗಿಯೇ ನಿದ್ರೆಯಿಂದ ಎಚ್ಚರಕ್ಕೆ ಬಂದ ಮೇಲೆ ಉಣಿಸುವುದು ಗಮನಾರ್ಹವಾದ ಪದ್ಧತಿಯು. ಹಗಲು-ರಾತ್ರಿ ಎಂಬ ವ್ಯತ್ಯಾಸಕ್ಕೆ ಲಕ್ಷ್ಯ ಕೊಡದೆ ಈ ಪದ್ಧತಿಯನ್ನು ಅನುಸರಿಸುವುದು ಹಿತಕರವಾದುದು. ಶಿಶುವಿಗೆ ಹಗಲು ರಾತ್ರಿ ಎಂಬ ಭೇದ ಜ್ಞಾನವಿರುವುದಿಲ್ಲ. ಹಸಿವಾದರೆ ನಿದ್ರೆಯಿಂದ ಏಳುತ್ತದೆ. ಆಗ ಅದಕ್ಕೆ ಹಾಲನ್ನುಣಿಸಬೇಕು. ಹಾಗೆ ಹಸಿವನ್ನು ತಣಿಸದಿದ್ದರೆ ಶಿಶುವು ಹೆಚ್ಚಾಗಿ ಅಳುವುದು. ಉಸಿರುಕಟ್ಟಿ ಚೀರುವುದು. ಇದು ಶಿಶುವಿನ ದೈಹಿಕ ಮತ್ತು ಮಾನಸಿಕ ಆರೋಗ್ಯಕ್ಕೆ ಧಕ್ಕೆ ತರಬಹುದು. ಚಂಡಿತನ ಕಲಿಯಲು ಸಹಕಾರಿಯಾಗುವದು. ಹಸಿವಾದಾಗ ಹಾಲನ್ನುಣಿಸಿ ದೈಹಿಕ ಮತ್ತು ಮಾನಸಿಕ ಬಿಗಿಯನ್ನು ಕಡಿಮೆ ಮಾಡಲು ಶಿಶುವು ಅಡಚಣೆಯಿಲ್ಲದೆ ಬೆಳೆಯಲು ಸಹಾಯ ನೀಡಿದಂತಾಗುವುದು. ಮನೆಮಂದಿಯೆಲ್ಲರೂ ರಾತ್ರಿ ಕಾಲದಲ್ಲಿ ಶಾಂತ ರೀತಿಯಿಂದ ನಿದ್ರೆ ಮಾಡುತ್ತಿರುವಾಗ ಶಿಶುವು ಅತ್ತು, ಚೀರಿ ಒದರಾಡುವುದಕ್ಕೆ ಆಸ್ಪದ ಕೊಡಬಾರದು. ಶಿಶುವು ಹಾಲುಂಡು, ತೃಪ್ತಿ ಹೊಂದಿ, ಸುಖವಾಗಿ ನಿದ್ರಿಸಿದರೆ ಮನೆಮಂದಿಗೆಲ್ಲಾ ಆಹ್ಲಾದವನ್ನುಂಟು ಮಾಡುವುದು. ಒಮ್ಮೊಮ್ಮೆ ಸ್ತನ್ಯಗಳಲ್ಲಿ ಹಾಲು ಸಾಕಷ್ಟು ಉತ್ಪನ್ನವಾಗದಿರಲು ಹಾಲು ಉಣಿಸುವ ರೂಢಿಯನ್ನು ಬಂದು ಮಾಡುವುದು ಕೆಲವು ತಾಯಂದಿರಲ್ಲಿ ಕಂಡು ಬರುವುದು. ಇದು ಸರಿಯಲ್ಲ. ಶಿಶುವಿಗೆ ಹಾಲನ್ನುಣಿಸಿದ ಮೇಲೆ ತಾಯಿಯು ಒಂದು ಕಪ್ಪು ನೀರನ್ನೋ, ಷರಬತ್ತನ್ನೋ ಕುಡಿದು ಸಾಕಷ್ಟು ವಿಶ್ರಾಂತಿ ತೆಗೆದುಕೊಳ್ಳುತ್ತಾ ಬಂದರೆ ಕೆಲವು ದಿವಸಗಳಲ್ಲಿ ಆಕೆಯ ಸ್ತನ್ಯಗಳಲ್ಲಿ ಮತ್ತೆ ಹಾಲು ಉತ್ಪನ್ನವಾಗುವುದೆಂದು ಶಿಶು ಶಾಸ್ತ್ರವನ್ನರಿತ ಪ್ರವೀಣರು ಹೇಳುವರು.



# ನಸುನಗೆ

ನೇಪಾಲ ದೇಶವು ವೀರರ ನಾಡು. ಅಲ್ಲಿಯ ಗೂರ್ಖಾಗಳು ಗೋರಿಲ್ಲಾ ಯುದ್ಧ ತಂತ್ರದಲ್ಲಿ ಜಗತ್ಪ್ರಸಿದ್ಧರಾದವರು. ಇವರ ಬಗ್ಗೆ ಒಂದು ಮೋಜಿನ ಕಥೆ ಇದೆ.

ಒಮ್ಮೆ ಗೂರ್ಖಾ ದಳ ಒಂದು ಕೊಡೆ ವೈಮಾನಿಕ ದಳದೊಡನೆ ತೆರಳಿತ್ತು. ವಿಮಾನವು ೫೦೦೦ ಅಡಿ ಎತ್ತರಕ್ಕೆ ಮುಟ್ಟಿದಾಗ ಈ ದಳಪತಿ ಕೊಡೆ ವೈಮಾನಿಕರಿಗೆ ಧುಮುಕಲು ಆಜ್ಞಾಪಿಸಿದ. ಆ ಕೊಡೆ ವೈಮಾನಿಕರೊಡನೆ ಇದ್ದ ಗೂರ್ಖಾಗಳಿಗೆ ಪೇಚಾಟವಾಯಿತು. ಆಗ ಅವರು ಗೊಣಗುತ್ತ ದಳಪತಿಗೆ ದೂರು ಕೊಟ್ಟರು— "೫೦೦ ಅಡಿ ಎತ್ತರದಿಂದ ಜಿಗಿಯಲು ಆಜ್ಞಾಪಿಸಿದ್ದರೆ ನಾವು ಅಂಜುತ್ತಿರಲಿಲ್ಲ; ಆದರೆ ೫೦೦೦ ಅಡಿಯಿಂದ ಎಂಥಾ ವೀರರೂ ಧುಮುಕಲಾರರು" ಎಂದು.

ಆಗ ದಳಪತಿ ಹೇಳಿದ— "ನೀವು ೫೦೦ ಅಡಿ ಧುಮುಕಿದರೆ ಕೊಡೆಯನ್ನು ಬಿಚ್ಚಲು ಅವಕಾಶವೇ ಇರುವುದಿಲ್ಲ. ನೀವೇ ನಾಪತ್ತೆಯಾಗುವಿರಿ"—

ಆಗ ಒಬ್ಬ ಗೂರ್ಖ ಹೇಳಿದ— "ಓಹೋ! ಕೊಡೆ ಇದೆಯೋ? ನಾವು ಹಾಗೇ ಧುಮುಕವುದೆಂದು ಭಾವಿಸಿದ್ದೆವು" ಎಂದು.

× × ×

ತಾವು ವಾಸಿಸುವ ಸ್ಥಳ ಎಷ್ಟು ಶೀತಲವಾಗಿದೆ ಎಂಬುದರ ಬಗ್ಗೆ ಸಂವಾದ ನಡೆಯಿತು.

ಒಬ್ಬ: 'ನಾವು ವಾಸಿಸುವಲ್ಲಿ ಮೇಣಬತ್ತಿಯ ಬೆಳಕೇ ಮಂಜುಗಟ್ಟಿತ್ತು. ನಾವು ಅದನ್ನು ಆರಿಸಲು ಸಾಧ್ಯವಾಗಲಿಲ್ಲ.

ಇನ್ನೊಬ್ಬ: ಅಯ್ಯೋ! ಅಷ್ಟೇನೆ? ನಾವು ಇದ್ದಲ್ಲಿ ಮಾತನಾಡಿದರೆ ಪದಗಳೇ ಹೆಪ್ಪುಗಟ್ಟಿ ಹೊರಬರುತ್ತಿದ್ದುವು. ಯಾರು ಏನು ಮಾತನಾಡಿದ್ದಾರೆಂದು ತಿಳಿಯಲು ಆ ಮಂಜುಗಡ್ಡೆಗಳನ್ನೇ ಕರಗಿಸಿ ನೋಡಬೇಕಾಗಿತ್ತು.

[ ಆಸ್ಟ್ರೇಲಿಯಾದ ಹಾಸ್ಯ ಚಟಾಕಿ ]

× × ×

ಕಾರ್ಮಿಕ ಮುಖಂಡನ ಭಾಷಣ ರಭಸದಿಂದ ಸಾಗಿತ್ತು; ಆಗ ಬಂಡವಾಳಶಾಹಿಗಳ ಪ್ರೋತ್ಸಾಹಿತ ಗೂಂಡಾಗಳು ಅವನ ಮೇಲೆ ಕಲ್ಲೆಸೆದರು; ಆ ಮುಖಂಡನನ್ನು ನಿರುತ್ಸಾಹಗೊಳಿಸಿ, ಅವಮಾನ ಮಾಡ

ಬೇಕೆಂದು– ಆಗ ಕಾರ್ಮಿಕ ಮುಖಂಡ– "ಬಂಧುಗಳೇ ! ನೀವು ನಮ್ಮ ಸಂಘದ ಕಟ್ಟಡದ ಅಡಿಪಾಯಿಗೆ ಕಲ್ಲಿಲ್ಲವೆಂದು ಪರಿತಪಿಸುತ್ತಿದ್ದಿರಿ. ಇದೋ ಬಂಡವಾಳಶಾಹಿಗಳು ಕಲ್ಲು ಪೂರೈಸಿದ್ದಾರೆ. ಒಂದಾಗಿ ಮುಂದೆ ಸಾಗಿರಿ" ಎಂದು ಘೋಷಿಸಿದ.

ಕಲ್ಲು ನಿಂತಿತು, ಸಭೆಯಲ್ಲಿ ಚಪ್ಪಾಳೆ ಪ್ರತಿಧ್ವನಿಸಿತು.

× × ×

ಒಬ್ಬ: ದೇವರು ಯಾವಾಗಲೂ ಭಾರತದಲ್ಲೇ ಮತ್ತೆ ಮತ್ತೇ ಹುಟ್ಟುತಾನಲ್ಲಾ ಯಾಕೆ? ಅವನು ಪಾಶ್ಚಾತ್ಯ ದೇಶಗಳಲ್ಲಿ ಹುಟ್ಟಬಾರದೇ ?

ಇನ್ನೊಬ್ಬ: ದೇವರು ದೇವರಾಣೆ ಅಲ್ಲಿ ಹುಟ್ಟೋದಿಲ್ಲ. ಅವನೇನು ಅಷ್ಟು ಬುದ್ಧಿಗೇಡೀನೆ ? ಒಮ್ಮೆ ಜೀಸಸ್ ಕ್ರೈಸ್ತನಾಗಿ ಹುಟ್ಟಿದಾಗ ಶಿಲುಬೆಗೆ ಏರಿಸಿ, ಮೊಳೆಯಿಂದ ಹೊಡೆದು ಕೊಂದರು, ಆ ಪಾಶ್ಚಾತ್ಯರು. ಮತ್ತೆ ಏಕೆ ಹುಟ್ಟುತ್ತಾನೆ ದೇವರು ಅವರ ಮಧ್ಯೆ ?

—ಶ್ರೀ ಎಸ್. ಡಬ್ಲ್ಯು. ಜಠಾರ್

× × ×

ಇಸ್ರಾಯಿಲ್-ಆರಬ್ ಯುದ್ಧ ನಡೆದ ಸಮಯ. ಇಸ್ರಾಯಿಲ್ ಮೇಲೆ ಆರಬ್‌ರ ವಿಮಾನ ದಾಳಿಯನ್ನು ಅಂದು ನಿರೀಕ್ಷಿಸಲಾಗಿತ್ತು. ತೆಲ್‌ಅವೀವ್‌ದಲ್ಲಿ ಮುಂಜಾನೆ ೯ ಗಂಟೆಗೆ ವಿಮಾನ ದಾಳಿಯ ಮುನ್ಸೂಚನೆಯ ಭೋಂಗಾ ಆಯಿತು. ಮನೆಯಲ್ಲಿದ್ದವರೆಲ್ಲರೂ ತಮ್ಮ ತಮ್ಮ ಕಟ್ಟಡಗಳ ಮುಂದಿದ್ದ ಗುಣಿಗಳಲ್ಲಿ (Trenches) ಅಡಗಿಕೊಳ್ಳಲು ಓಡಬೇಕಾಗಿತ್ತು. ನಾಲ್ಕನೆಯ ಅಂತಸ್ಥಿನ ಮನೆಯಲ್ಲಿದ್ದ ಗಂಡ–ಹೆಂಡತಿ ಆ ಕಟ್ಟಡದ 'ಲಿಫ್ಟ' ಕಡೆ ಧಾವಿಸಲು ತಯಾರಾದರು. ಗಂಡ ಹೊರಡುವುದು ಸ್ವಲ್ಪ ತಡವಾಯಿತು. ಹೆಂಡತಿ "ಯಾಕೆ ತಡಮಾಡ್ತಿದ್ದೀರಿ ? ಬೇಗ ನಡೆಯಿರಿ" ಎಂದಳು. "ನನ್ನ ಕೃತಕದಂಥ ಕಟ್ಟು (Denture) ಎಲ್ಲೋ ಸಿಕ್ಕಲಿಲ್ಲ. ಹುಡುಕುತ್ತಿದ್ದೇನೆ" ಎಂದ ಗಂಡ. ಅದಕ್ಕೆ ಹೆಂಡತಿ– 'ಏನು ಆರಬ್ಬರು ನಮ್ಮ ಸಲುವಾಗಿ ಕೇಕು, ಪಫ್‌ಗಳನ್ನು ಒಗೆಯುತ್ತಿದ್ದಾರೆಂದು ತಿಳಿದಿದ್ದೀರೇನು ? ಅವರು ಹಾಕೋದು ಬಾಂಬುಗಳನ್ನು ನೆನಪಿಡಿ.'

× × × ×

ಇಬ್ಬರು ಡಾಕ್ಟರುಗಳ ನಡುವೆ ಸಂಭಾಷಣೆ ನಡೆದಿತ್ತು.

ಒಬ್ಬ: ಮೊನ್ನೆ ಒಬ್ಬ ರೋಗಿಗೆ ಚಿಕಿತ್ಸೆ ನಡೆಸಿದ್ದೆ. ಅವನಿಗೆ ಕ್ಷಯರೋಗವೆಂದು ಗುರ್ತಿಸಿ ಉಪಚಾರ ನಡೆಸಿದ್ದೆ. ಅವನು ಸತ್ತ ನಂತರ ಗೊತ್ತಾಯಿತು ಅವನಿಗೆ ಕ್ಯಾನ್ಸರ್ ಎಂದು.

ಇನ್ನೊಬ್ಬ: ನೋಡಿ ಡಾಕ್ಟರ್ ! ನೀವು ಬೇಕಾದ್ದು ಹೇಳಿ. ನಾನು ರೋಗನಿದಾನ ( Diagnosis ) ಬಹಳ ಸರಿಯಾಗಿ ಮಾಡುತ್ತೇನೆ. ನಾನು ಕ್ಷಯ ಎಂದು ಗುರ್ತಿಸಿದರೆ ಆ ರೋಗಿ ಕ್ಷಯದಿಂದಲೇ ಸಾಯುತ್ತಾನೆ ನೋಡಿ.



# ಸಾಕ್ಷಿ ಹೇಳೋ ಪ್ರಸಂಗ ಬಂದಾಗ........

—ಶ್ರೀಮತಿ ಭಾರತೀ ಹಾವನೂರ

[ಅತ್ತೆಗೆ ವಿರುದ್ಧ ಹೇಳೋ ಹಾಗಿಲ್ಲ. ಮಾವನ್ನ ಎದುರು ಹಾಕ್ಕೊಳ್ಳೋ ಹಾಗಿಲ್ಲ. ಸುಳ್ಳು ಹೇಳ್ಬೇಕು, ಅದು ನಿಜಾನೂ ಆಗಿಬೇಕು.... ಉಭಯ ಸಂಕಟದಿಂದ ಪಾರಾಗಬೇಕು. ಅತ್ತೆ-ಮಾವಂದಿರ ಜಗಳದಲ್ಲಿ ಸೊಸೆಯ ಸಾಕ್ಷಿಯ ಪ್ರಸಂಗ..........ಶ್ರೀಮತಿ ಹಾವನೂರ್‌ರವರು ಈ ರಸಮಯ ಪ್ರಸಂಗವನ್ನು ಬಹಳ ಸೊಗಸಾಗಿ ಚಿತ್ರಿಸಿದ್ದಾರೆ.......ಇದು, ‘ಸಂಸಾರದಲ್ಲೂ ರಾಜಕೀಯ’ ಮಾಲಿಕೆಗೊಂದು ಸೂಕ್ತ ಕಾಣಿಕೆ. ಸಂ.]

ಹಳೆಯ ಸಂಪ್ರದಾಯದ ಅತ್ತೆ ಮನೆಯಲ್ಲಿ ನವೀನ ಮನೋವೃತ್ತಿಯವರಿಗೆ ಬರುವ ಅನೇಕಾನೇಕ ಸಮಸ್ಯೆಗಳಲ್ಲಿ ತಿಂಗಳಲ್ಲಿ ಮೂರು ದಿನ ಕಳೆಯೋದೂ ಒಂದು. ಆ ಮೂರು ದಿನಗಳೂ ನಾನು ಅಟ್ಟ ಹತ್ತ್ಯೋ ಹಾಗಿರಲಿಲ್ಲ. ನಮ್ಮ ಅತ್ತೆಯವರ ಖೋಲಿಯ ಬಾಜೂ ಖೋಲಿಯಲ್ಲಿ ನನಗೆ ಜೈಲುವಾಸ. ಮುಂಜಾನೆ ಮಡಿ ಕೆಲಸ ಆಗೋತನಕ ಮಾತು ಆಡೋ ಹಾಗಿಲ್ಲ; ಗಂಡಸರ ಕಂಡು ಅಡ್ಯಾಡೋ ಹಾಂಗಿಲ್ಲ. ನನ್ನ ಯಜಮಾನರೂ ಕೂಡಾ ಹಾಗೋ ಹೀಗೋ, ಅವ್ವನ ಖೋಲೀಗೆ ಹೋಗೋ ನೆವಾ ಮಾಡ್ಕೊಂಡೋ ಏನೋ ಬಂದು ಇಣಕಿ ಹಾಕಿದಾಗ ಒಮ್ಮೆ ಕಣ್ಣಾಗ ಮಾತಾಡಿ, ತುಟ್ಯಾಗ ಏನೋ ಹೇಳಿದ ಹಾಂಗ ಮಾಡಿ ಹೋಗೋದಷ್ಟೇ ಮಾತು ಅನ್ನಿಸ್ಕೋತಿತ್ತು.

ಮೊದಲನೆಯ ಸಲ ನಾನು ಜೈಲುವಾಸ ಅನುಭವಿಸಿದ್ದಂತೂ ಬಲು ಫಜೀತಿ ಆಗಿತ್ತು. ಆ ಅವಸ್ಥೆ ದೇವರೇ ಬಲ್ಲ.

"ಭಾರತೀಬಾಯಿ! ನಮ್ಮ ಕುಲದೇವರು ಭಾಳ ಖಡಕ್ ಇದ್ದಾಳವಾ. ಮಡಿ–ಮೈಲಿಗೆ ಛಲೋ ಪಾಲಿಸಬೇಕಾಗ್ತದೆ. ಮತ್ತೆ ಖಾಲೀ ಕೂತಾಗ ಪುಸ್ತಕಾ ಅದೂ ಇದೂ ಓದಲಿಕ್ಕೆ ಇಸಗೊಂಡಿ ಗಂಡನ ಕಡೆಯಿಂದ?........ ನಿನ್ನ ಸ್ನೋ, ಪೌಡರ್‌ಗಳಿಗೆ ಈ ಮೂರೂ ದಿನ ರಜಾ ...........ಊ! ಕೈ ಹಚ್ಚಿಕೊಂಡಿದ್ದೀ, ಮಾಡೋದೇನು. ಸಂಜಿ ಕಡೆ ಹೋಗಿ ಡ್ರೆಸಿಂಗ್ ಮಾಡಿಸ್ಕೊಂಡು ಬಂದ್ಬಿಡು...." ಏನೇನೋ ಸೂಚನೆಗಳು, ಸಲಹೆಗಳು, ಮಾರ್ಗದರ್ಶಕ ಸೂತ್ರಗಳು.

ಆಗ ನಮ್ಮೂಟ ಅಂದ್ರೆ ಒಂದೇ ಹೊತ್ತಿನ ಊಟದ್ಹಾಂಗ ಇರ್ತಿತ್ತು. ಯಾಕಂದ್ರೆ ನಮ್ಮ ಯಜಮಾನ್ರು ಊಟಕ್ಕೆ ಬರೋದೇ ಮಧ್ಯಾಹ್ನ ೧ ಗಂಟೆಗೆ. ಅವರ ಊಟ ಆದಮ್ಯಾಲೆ ಎಲ್ಲರದೂ ಮುಗಿದ ಮ್ಯಾಲೆ ನಮ್ಮೂಟ. ಅದೂ ಆ ಪತ್ರಾವಳ್ಯಾಗ. ಎಲ್ಲಿ ಅದರೊಳಗಿನ ಸಿಬರು ಬರ್ತಾವೋ ಅಂತ ಹೆದರಿ ಊಟಾನೇ ಸಾಗ್ತಿದ್ದಿಲ್ಲಾ, ನಂದು. ಮುಂಜಾಲೆ ಒಂದು ಬಿಡೆಲೆ ಉಪ್ಪಿಟ್ಟು ಮತ್ತು ೧೦ ಗಂಟೆಗೆ ನಮ್ಮ ಹಿರೇ ನೆಗೆಣ್ಣಿ ಕೃಪಾದಿಂದ ಎರಡನೇ ಸರ್ತಿ ಕಾಫಿ ಮತ್ತು ಅವಲಕ್ಕಿ ಹೊಟ್ಟೀಗ್ಹೋಗಿರ್ತಿತ್ತು ಅಂತ ನನ್ನ ಹೊಟ್ಟೆ ಥಣ್ಣಗಿರ್ತಿತ್ತು.

ಅಂದು ದಶಮೀ ತಿಥೀನೋ ಏನೋ ಇತ್ತು. ಯಾರೋ ದೊಡ್ಡ ಆಚಾರ್ರು ಊಟಕ್ಕೆ ಬಂದಿದ್ರು. ಎಷ್ಟು ಹೊತ್ತಾದ್ರೂ ಊಟ ಆಗೋ ಲಕ್ಷಣ ಕಾಣ್ಲಿಲ್ಲ. ನನ್ನ ಯಜಮಾನರ ಸಿಟ್ಟು ಇಳಸಲಿಕ್ಕೆ ಹೋಗಿ ಹಚ್ಚಿಕೊಂಡಿದ್ದ ನನ್ನ ಬೆರಳು ಈಗ ತನ್ನ ಪರಾಕ್ರಮ ತೋರಿಸಲಿಕ್ಕೆ ಪ್ರಾರಂಭ ಮಾಡಿತ್ತು– ಕೀವಾಗಿ ಬೆಂಕಿ ಉರಿದ ಹಾಂಗೆ ಉರೀತಿತ್ತು. ಹೊಟ್ಟೆ ಒಳಗೂ ಉರಿ, ಮೈಮೇಲೂ ಉರಿ, ಅಂತೂ ಉರಿ

ಯನ್ನು ತಡಕೊಳ್ಳಲೇ ಬೇಕಾಯಿತು. ಮೂರುವರಿ ಆಗಿಬೇಕು. ನಮ್ಮ ಅತ್ತೆಯವರು ಅಲ್ಲೇ ಮಂಚದ ಮೇಲೆ ಮಲಕ್ಕೊಳ್ಳೋಕ್ಕಂಡಾಗ ಅಂದಿದ್ದರು. "ಭಾರತೀಬಾಯಿ, ಹಸ್ತು ಹೋಗಿದ್ದಿಯವ್ವಾ, ಪಾಪ, ಈಗ ನಿನ್ನ ನೆಗೆಣ್ಣಿ ಊಟ ಆದ ಕೂಡ್ಲೆ ಬಡಿಸ್ತಾಳೆ. ಸಾವಕಾಶ ಕೂತು ಹಾಕಿಸಿಕೋ. ಬುರುಬುರಿ, ಅಮರಿ ಯಾವೂ ಹಾಕಬ್ಯಾಡಾ ಅಂತ ಹೇಳೀನಿ. ಕೈ ಮತ್ತೆ ಹೆಚ್ಚಾದೀತು. ಗೊಜ್ಜು ಸಾರು ಮಾಡಿಸೇನಿ. ಹಾಕುಸ್ಕೊಂಡು ಊಟಾ ಮಾಡು"- ಅಂತ. ಮಠದಾಗಿನ್ಹಾಂಗ ಎಲಿ ಹಾದೀ ಕಾಯ್ತಾ ಕೂತಿದ್ದ ನನ್ಗೆ ಸ್ವಲ್ಪ ಸಮಾಧಾನ ಆತು. ಆದರೆ ಇಷ್ಟು ತಡಾ ಆಗಿದ್ರೂ ಹಬ್ಬದ ಅಡಗಿ ಊಟಾ ಮಾಡೋ ಹಾಗಿಲ್ಲಲ್ಲಾ ಅಂತ ಸಂಕಟಾ ಆಯಿತು. ಮಾತಾಡೋ ಹಾಗಿಲ್ಲ. ಅತ್ತೆಯವರು ಅಲ್ಲೇ ಮಲಗಿದ್ದರು.

ಅಂತು ನಮ್ಮ ಹಿರೇ ನೆಗೆಣ್ಣಿ ಬಡಸಲಿಕ್ಕೆ ಬಂದ್ರು, ಹೊಟ್ಟೆ ಎಷ್ಟೋ ಥಣ್ಣಗ ಆದ್ಹಾಂಗಾತು. ಆವರೆ ಗೊಡ್ಡು ಸಾರೂ ಅನ್ನ ಗಂಟಲಲ್ಲಿ ಇಳೀ ಒಲ್ದು. ನಾನು ಒದ್ದಾಡೋ ಅವಸ್ಥೆ ನೋಡ್ಲಾರ್ದೆ "ಆಯ್ಯೊ ಪಾಪಂತ" ಒಂದಿಷ್ಟು ಅಮರಿ ತಂದು ಹಾಕಿದ್ರು ನನ್ನ ನೆಗೆಣ್ಣಿ. ನಾನೂ ಭಡಭಡ ಅದನ್ನು ಮುಗಿಸ್ದೆ. ಇಷ್ಟರಲ್ಲೇ ಪುರೆ, ಕಡುಬು, ಬುರಬುರಿನೂ ಬಂದ್ವು. ಇವು ಬಡಿಸುತ್ತಾ "ಭಾರತೀಬಾಯಿ ಮೊದಲು ಕಡುಬು, ಬುರಬುರಿ ತಿಂದು ಮುಗ್ಸು. ನಿನ್ನ ಬಿಟ್ಟು ತಿನ್ನಲಾರ್ದೆ ನಾನೇ ಎರಡು ತೆಗೆದಿಟ್ಟಿದ್ದೆ. ನಿಮ್ಮತ್ತೆಯವರು ಎದ್ದು ನೋಡಿದ್ರೆ ಇಬ್ಬರದೂ ಉದ್ಧಾರ ಆದೀತು" ಅಂದ್ರು. ನಾನೂ ಆದಷ್ಟು ಗಬಾಗಬಾ ಮುಗಿಸೋಣಾ ಅಂತಾ ಕಡುಬು ಬಾಯಲ್ಲಿ ತುರುಕ್ಕೊಂಡೆ. ಬುರುಬುರಿಗೆ ಕೈ ಹಾಕೋದ್ರಲ್ಲಿ ಬಹಳ ಸಿಹಿ ಆದಂಗಿತ್ತು. ಕಡುಬೂ ಅಂತ ಸ್ವಲ್ಪ ನೀರು ಕುಡಿಯೋಕೆ ವಾಟಕಾ ಎತ್ತಿದೆ ಅದು........ ಖೋಡಿ ........ಕೈ ಜಾರ್‍ಬಿಡೋದೇ ? ವಾಟಕಾ ಉಳ್ಳಿ, ಜಗ್ಗಿ ಸಪ್ಪಳಾ ಆತು. ನಮ್ಮ ಅತ್ತೆ ಎದ್ದೇ ಬಿಟ್ರು. ಎಲೀ ಕಡೆ ನೋಡಿದವರೇ ಸೀದಾ ಅಡಿಗೆಮನೀಗೇ ಹೋದ್ರು. ಅಲ್ಲೇನಾತೋ ನನ್ಗೆ ಗೊತ್ತಾಗ್ಲಿಲ್ಲ. ............ ಸ್ವಲ್ಪ ಹೊತ್ತಿಗೆ ನನ್ನ ನೆಗೆಣ್ಣಿ ಹೊರಗ್ಬಂದ್ರು. "ಅಲ್ಲ.... ಪಾಪ ಅಂತ ಅಚ್ಚ ಮಾಡೋಕ್ಹೋದ್ರೇ ನನ್ನ ಮ್ಯಾಲೇನೇ ತಂದ್ಯಾ ? ಆ ವಾಟಕಾ ಯಾಕ್ಕೆಡುವೋಕ್ಹೋದಿ ? ........ ಹೋಗ್ಲಿ ಆ ಬುರುಬುರಿ ಆದ್ರೂ ತಿಂದ ಮ್ಯಾಲೆ ನೀರು ಕುಡಿದಿದ್ರೆ ನಿಂದೇನು ಗಂಟು ಹೋಗ್ತಿತ್ತು ?"........ ಪ್ರಶ್ನೆಗಳ ಸುರಿಮಳೆ. ನಾನು ನಿರುತ್ತರಳಾದೆ.

ನಮ್ಮ ಅತ್ತೆಯವರು ತಿರುಗಿ ಬಂದ್ರು - "ಭಾರತೀಬಾಯಿ ! ಏನೂ ಹೆದರಬ್ಯಾಡಾ. ನಾ ಇಲ್ಲೇ ಮಲಗಿರ್ತೀನಿ. ರಾತ್ರಿ ಬಚ್ಚಲಿಗೆ ಹೋಗೋದಾದ್ರೆ ಒಬ್ಬಾಕೀನೇ ಹೋಗಬ್ಯಾಡಾ ಹಿತ್ತಲಿಗೆ. ನನ್ನ

ಎಬ್ಬಸು. ಛಿಡೆ ಮಾಡ್ಕೋಬ್ಯಾಡ" ಅಂತ ಹೇಳಿ ಮಲಕ್ಕೊಂಡ್ರು.

× × ×

ಏಕಾದಶೀ ದಿನ ರಾತ್ರಿ ನಾಲ್ಕಕ್ಕೆ ಅಲಾರಾಂ ಇಟ್ಟು, ಅದರ ವರದಿ ನಮ್ಮ ಅತ್ತಿಯವರಿಗೆ ಕೊಟ್ಟು, ಗಡಿಯಾರಾನ ಅತ್ತೆಯವರ ಮಂಚದ ಹತ್ತರ ಕಿಡಿಕಿ ಯಲ್ಲಿಟ್ಟು ಮಾವನವರು ಬಾಜೂಕಿನ ನಡು ಮನ್ಯಾಗಿನ ಮಂಚದ ಮ್ಯಾಲೆ ಮಲಗಿ ಕೊಂಡ್ರು. ಮರುದಿನ ದ್ವಾದಶಿ. ಅದೂ ಸಾಧನಿ ಇತ್ತು.

ತಟ್ಟನ ಹಾಸಿಗೀ, ಚುಚ್ಚುತಾ ಇತ್ತು. ನಿದ್ದೆ ಹತ್ತದೇ ಬಹಳ ಹೊತ್ತು ಅರ್ಧಂ ಬರ್ಧ ನಿದ್ದೆಯಲ್ಲಿ ಹೊರಳಾಡುತ್ತಿದ್ದೆ... ಅರಮರದ ನಿದ್ದೆ........ ಏನೋ ರ್‍ರಂ೦೦.... ಅಂತ ಕೇಳಿಸಿದಂತಾಯಿತು. ಮತ್ತು ಟಕ್ ಅಂತ ಬಂದ ಮಾಡಿದಂತೆ ಕೇಳಿ ಸಿತು. ಇನ್ನೂ ಕತ್ತಲು ಕತ್ತಲಾಗಿತ್ತು. ನಾನು ಕಣ್ಮುಚ್ಚಿ ಸುಮ್ಮನೆ ಮಲಗಿದ್ದೆ. ಸ್ವಲ್ಪ ಹೊತ್ತು ಕಳೆದಿರಬೇಕು. ನನಗೆ ಒಮ್ಮೆಲೆ ಎಚ್ಚರ ಆಯಿತು. ನಡುಮನೆ ಯಲ್ಲಿ ನಮ್ಮತ್ತೆಯವರ ಧನಿ ಕೇಳಿಸಿತು. "ನಿಮಗೆ ಎಷ್ಟು ಹೇಳಿದರೂ ಅಷ್ಟೆ. ಐದು ಹೊಡೆದು ಹೋಗೇದ. ಇನ್ನು ನಾನು ಯಾವಾಗ ಅಡ್ಗಿಮಾಡ್ಲಿ. ನಾಲ್ಕಕ್ಕೆ ಅಲಾರಂ ಇಡ್ರಿ ಅಂತ ಹೇಳಿದ್ದು, ಇಡ ಬಾರದೇನು. ಹೇಳಿದ ಮಾತು ಕಿವಿ ಮ್ಯಾಲೆ ಹಾಕ್ಕೊಂಬೋ ಹಾಂಗೇ ಇಲ್ಲ."

ಮಾವನವರ ಪ್ರತ್ಯುತ್ತರ– "ಕಿವಿಮ್ಯಾಲಿ ಯಾಕೆ ಕಿವಿ ಒಳಗೇ ಹಾಕ್ಕೊಂಡು ನಿನ್ನ ತಲಿಗಿಂಬಿಗೇ ಇಟ್ಟು ಮಲಗಿದ್ದೆ. ಅಲಾರಂ ಆಗೇದ. ಉಪಾಸದಾಕೀ ನೀನು ಗಡದ ನಿದ್ದಿ ಹತ್ತಿತ್ತು. ಇನ್ನ ಈ ರ್‍ರಂ........ಶಬ್ದ ದಿಂದ ಭಾರತೀಬಾಯಿಗೂ ಎಚ್ಚರ, ಮನೀ ಮಂದೀಗೆಲ್ಲಾ ಎಚ್ಚರ ಆಗ್ಬಾರ್ದು ಅಂತ ನಾನೇ ಅದನ್ನ ಬಂದ ಮಾಡಿದೆ. ಇನ್ನೇನು ಅಲಾರಂ ಕೇಳಿಸಿರ್ಬೇಕು, ಐದು – ಹತ್ತು ಮಿನಿಟನಾಗ ಏಳ್ತೀ ಅಂತ ನಾನು ಮಲ ಗಿದೆ. ನಿದ್ದೇನೇ ಹತ್ತಿಬಿಡ್ತು. ಹೋಗಲೀ ಬಿಡು.... ಲಗೂ ಮೈತೊಳ್ಕೊಂಡು ಷುರು ಮಾಡು."

"ನೀವು ಅಲಾರಂ ಇಟ್ಟೇ ಇಲ್ಲ. ತಲೀ ಹತ್ರ ಅಲಾರ್‍ರಂ ಆದ್ರೆ ನನಗೆ ಎಚ್ರ ಆಗ್ದೇ ಇರ್ತದೇನು ? ನೀವು ಯಾವಾಗ್ಲೂ ಹೀಗೆ ನಿಮ್ಮ ವಿಚಾರದಾಗೇ ಇರ್ತೀರಿ. ಬರೀ ಕೀಲಿ ಕೊಟ್ಟು ಹಾಂಗೇ ಮಲಗೀರಿ ಆತು." "ನಾನು ಕೇಳಿ, ನಾನೇ ನಿಲ್ಲಿ ಸೇನಿ ಅಲಾರಂನ ........ ಬ್ಯಾರೇ ಯಾರ ಸಾಕ್ಷೀ ಬೇಕು ನಿನಗೆ ............ ಬೇಕಾದ್ರೆ ಭಾರತೀಬಾಯಿನ್ನ ಕೇಳು. ....ಆಕಿ ಎದ್ದ ಮ್ಯಾಲೇನೆ."

"ಭಾರತೀಬಾಯಿ! ಏ, ಭಾರತೀ ಬಾಯಿ" ಎಂದು ಕೂಗೇ ಬಿಟ್ರು ನಮ್ಮ ಅತ್ತಿಯವರು.

ಈ ಧನಿ ಕೇಳಿದಾಕೀನೇ ನಾನೂ ತಲಿ ತುಂಬ ಮುಸುಕು ಎಳೆದುಕೊಂಡು ಪೂರಾ

ಹೆಣದಂತೆ ಮಲಗೇ ಬಿಟ್ಟೆ. ಆದರೆ ನನ್ನ ಮುಸುಕಿನಲ್ಲೇ ನನ್ನ ಅವತಾರಾನೇ ಮುಗಿದಿತ್ತು. ಬೆವತು ಮೈತುಂಬಾ ನೀರು ನೀರಾಗಿತ್ತು ನನ್ನ ಸ್ಥಿತಿ. ಮಾವನವರೇ ಮತ್ತೆ "ಈಗ ಆಕಿನ್ನ ಯಾಕೆ ಎಬ್ಬಸತಿ, ಬಿಡು. ಮುಂಜಾನೆ ಎದ್ದವ್ಯಾಲೆ ಕೇಳಿ ಖಾತ್ರಿ ಮಾಡ್ಕೊಳ್ಳೀಯಂತೆ" ಅಂದ್ರು.

ಎಲ್ಲಾರ್ದೂ ಊಟ ಶುರು ಆದಾಗ ೧೦ ಗಂಟೆ ಆಗಿತ್ತು. ನನ್ನ ಹಿರೇ ನೆಗೆಣ್ಣಿ ಊಟ ಬಡಸ್ತಿದ್ರು. ನಮ್ಮ ಅತ್ತಿ-ಮಾವ ಇವರಲ್ಲಿ ಮತ್ತೆ ಮುಂಜಾನೆಯ ವಾದ ಶುರು ಆಗಿತ್ತು. ಇಬ್ಬರೂ ಜಿದ್ದಿಗೆ ಬಿದ್ದು ನನ್ನ ಬಳಿ ಸಾಕ್ಷೀಗೆ ಬಂದ್ರು.

"ಭಾರತೀಬಾಯಿ, ನೀನ ಹೇಳವಾ" ಅಂತ ಅತ್ತೆಯವರು ನನ್ನ ಬಳಿಗೆ ಬರುತ್ಲೇ ನನ್ನ ಗಂಟ್ಲಲ್ಲಿ ತುತ್ತೇ ಇಳೀಲಿಲ್ಲ. ಯಾರ ಪರವಾಗಿ ಸಾಕ್ಷಿ ಹೇಳ್ಳಿ ಅನ್ನೋ ಉಭಯ ಸಂಕಟ ನನ್ಗೆ ಹತ್ತಿತು. ಅತ್ತೆಯವರ ವಿರುದ್ಧ ಹೇಳೋ ಹಾಗಿಲ್ಲ. ಮಾವನವರನ್ನು ಎದುರು ಹಾಕ್ಕೊಳ್ಳೋ ಹಾಗಿಲ್ಲ. ಒಳ್ಳೆ ಇಕ್ಕಳಲ್ಲಿ ಸಿಕ್ಕಿದಂತಾಯಿತು.

ಮಾವನವರು– "ಭಾರತೀ ಬಾಯಿ! ಖರೆ ಹೇಳು. ಅಲಾರಂ ಕೇಳಿಸ್ತೋ ಇಲ್ಲೋ ನಿನ್ಗೆ" ಹೆದರೀಕೋತಾ ನಾನು "ಏನೋ ಸಪ್ಪಳ ಕೇಳಿಸಿತು" ಅಂತ ಉತ್ತರ ಕೊಟ್ಟೆ.

ತಕ್ಷಣ ನಮ್ಮ ಅತ್ತೆಯವರು "ಹೂಂ! ಸಪ್ಪಳ ಕೇಳಿಸಿರಬೇಕು. ಬೆಕ್ಕಿನ್ದೋ ಹಿತ್ತಲ್ಲಿರೋ ನಾಯಿದೋ ಸಪ್ಪಳ ಕೇಳಿರ್ಬೇಕು. ಆದರೆ ಗಡಿಯಾರದ ಅಲಾರಂದೇ" ಅಂತ ಆರ್ಭಟಿಸಿದರು.

ನಾನು ನನಗೇ ತಿಳಿಯದಂತೆ "ಹೌದು" ಅಂದೆ.

"ಕೇಳ್ರಿ, ಖಾತ್ರಿ ಮಾಡಿಕೊಳ್ರಿ" ಅಂತ ಅತ್ತೆಯವರು ಮಾವನವರನ್ನ ತಿವಿದ್ಹಾಂಗ ಮಾತಾಡಿದರು. ಆಗ ಮಾವನವರು "ಪಾಪ! ಆಕೀ ಏನ್ಮಾಡ್ಯಾಳು? ನಿನ್ನ ಬಾಯಿಗೆ ಹೆದ್ರಿ ನಿನ್ನಂತೆ ಹೌದೂಂತ ಅಂದಳು. ನನ್ನಂತೆ ಹೇಳಿದ್ರೆ ನೀ ಆಕಿನ್ನ ಸುಮ್ನೆ ಬಿಡೋ ಆಕೀನಾ, ಎಲ್ಲರ?" ಅಂತ ನಕ್ಕೋತಾ ಹೊರಗೆ ಹೋದರು.

ನನ್ನ ನೆಗೆಣ್ಣಿ ಅನ್ನ ತಂದಾಗ ಅತ್ತೆಯವರು ಹಾದಿ ಬಿಟ್ರು. ತಮ್ಮ ಕೆಲಸದ ಕಡೆ ಅವರು ಹೋದ ಮೇಲೆ ನೆಗೆಣ್ಣಿ "ಯಬಡ ಮಹಾರಾಣಿ! ಸಪ್ಪಳ ಆತು ಅಂತ ಹೇಳ್ತಾರೇನೇ? ನನಗೆ ನಿದ್ದಿ ಹತ್ತಿತ್ತು ಅಂತ ಹೇಳಬೇಕಿತ್ತು" ಅಂದ್ರು.

ಅಂತೂ ಸಂಸಾರದಲ್ಲೂ ರಾಜಕೀಯ; ಕೆಲವೊಮ್ಮೆ ಸಾಕ್ಷೀ ಹೇಳಬೇಕಾಗ್ತದೆ. ವಕೀಲರಂತೆ ಮಾತೂ ಆಡ್ಬೇಕಾಗ್ತದೆ.

# ಜಗತ್ತಿನ ಹೊಸ ವಿಸ್ಮಯ



೧೯೬೭ರ ನವ್ಹಂಬರ್ ೭, ಅಕ್ಟೋಬರ್ ಸಮಾಜವಾದೀ ಮಹಾಕ್ರಾಂತಿಯು ೫೦ನೆಯ ವಾರ್ಷಿಕೋತ್ಸವ. ಅಂದು ಸೋವಿಯತ್ ಒಕ್ಕೂಟ ಮತ್ತು ಯುರೋಪ್ ದೇಶಗಳ ಟೆಲಿವಿಷನ್ ಪ್ರೇಕ್ಷಕರು ಬೃಹತ್ ಓಸ್ಟಾಂಕಿನ್ ಸ್ಕಾಯಾದ ಟಿವಿ ಗೋಪುರದಿಂದ ಪ್ರಸಾರವಾಗುವ ಕಾರ್ಯಕ್ರಮಗಳನ್ನು ಪ್ರಥಮ ಬಾರಿಗೆ ವೀಕ್ಷಿಸಲಿದ್ದಾರೆ. ಸೋವಿಯತ್ ಅನೇಕ ಕ್ಷೇತ್ರಗಳಲ್ಲಿ ಜಗತ್ತಿನ ಇತರ ಎಲ್ಲ ರಾಷ್ಟ್ರಗಳನ್ನು ಮೀರಿಸಿದೆ. ಇಂದು ಕಟ್ಟಡ ನಿರ್ಮಾಣದಲ್ಲೂ ಎಲ್ಲರಿಗಿಂತ ಒಂದು ಹೆಜ್ಜೆ ಮುಂದಿಟ್ಟ ಹಾಗಾಯಿತು.

ಸೋವಿಯತ್ ದೇಶದ ಓಸ್ಟಾಂಕಿನ್ ಸ್ಕಾಯಾದಲ್ಲಿ ರಚಿತವಾಗಿರುವ ಈ ಬೃಹತ್ ಟಿವಿ ಗೋಪುರ ಜಗತ್ತಿನ ಒಂದು ಹೊಸ ವಿಸ್ಮಯ. ಈ ಗೋಪುರ ಜಗತ್ತಿನ ಅತ್ಯಂತ ಎತ್ತರವಾದ ಕಟ್ಟಡವಾಗಿದೆ. ಇದು ೫೩೩ ಮೀಟರ್ ಎತ್ತರವಿದೆ (೧೭೭೬ ಅಡಿ).

## ಈ ಕಟ್ಟಡದ ವಿಶೇಷಗಳು

ಈ ಯೋಜನೆಯು ರೂಪ-ರೇಷೆಯನ್ನು ಶ್ರೀ ನಿಕೊಲೋಯ್ ನಿಕಿಲೆನ್‌ರವರು ಅರ್ಪಿಸಿದಾಗ ಇದನ್ನು ಕೆಲ ತಜ್ಞರು 'ಒಂದು ಭ್ರಾಂತಿ'

**ಸೊವಿಯತ್ತಿನ ಬೃಹತ್ ಟಿವಿ ಗೋಪುರ**

ಎಂದು ಕರೆದರು. ಏಕೆಂದರೆ ಶ್ರೀ ನಿಕಿಲೆನ್‌ರವರು ಸೂಚಿಸಿದ್ದ ಅಸ್ತಿಭಾರದ ಆಳ ಮತ್ತು ಅಗಲದ ಬಗ್ಗೆ ಅನೇಕರಿಗೆ ಸಂಶಯು ಬಂದಿತ್ತು. ಅವರು ಸೂಚಿಸಿದ ಅಸ್ತಿಭಾರ ಚಿಕ್ಕದಾಗಿತ್ತು.

ಶ್ರೀ ನಿಕಿಲೆನ್‌ರವರ ಪ್ರಯೋಗ ಕಟ್ಟಡ ನಿರ್ಮಾಣ ವಿಜ್ಞಾನದಲ್ಲಿ ತೀರ ಹೊಸ ಪ್ರಯೋಗ. ಹುಲ್ಲಿನಂತೆ ತೆಳ್ಳಗಿರುವ ಕಾಂಡವನ್ನು ಹೊಂದಿರುವ ಸಸ್ಯಗಳೂ ಕೂಡ ನೆಟ್ಟಗೆ ನಿಲ್ಲಲು ಕಾರಣವೇನು ? ಈ ಸಸ್ಯಗಳು ದೃಢವಾದ ನಾರುಗಳಾಗಿ ರೂಪುಗೊಂಡಿರುವ ಅಸಂಖ್ಯಾತವಾದ ಕೋಶಗಳಿಂದ ನಿರ್ಮಿತವಾಗಿರುವಂತೆ ತೋರುತ್ತದೆ. ಸಸ್ಯಗಳು ಹೀರಿಕೊಳ್ಳುವ ನೀರು ಆದರ ಕೋಶಗಳಲ್ಲಿ ಹೋಗಿ, ತುಂಬಿಕೊಳ್ಳುತ್ತದೆ. ನಾರನ್ನು ಬಿಗಿಗೊಳಿಸುತ್ತದೆ. ಅವನ್ನು ದೃಢಗೊಳಿಸುತ್ತದೆ. ಈ ವಿಧಾನವನ್ನೇ ಶ್ರೀ ನಿಕಿಲೆನ್ ಕಟ್ಟಡ ನಿರ್ಮಾಣಕ್ಕೆ ಉಪಯೋಗಿಸಿದ್ದಾರೆ. ಸಸ್ಯದ ಕಾಂಡದಂತೆ ಅದು ಆಂತರಿಕ ಒತ್ತಡದಿಂದ ಆಸರ ಹೊಂದಿರುತ್ತದೆ. ಗೋಪುರವು ನೇರವಾಗಿ ಉನ್ನತವಾದ ಬಲಹೊಂದಿರುವ ಉಕ್ಕಿನ ಕಂಬಗಳು ಒಳಗೆ ಸುತ್ತಿಕೊಂಡು ಒತ್ತಿ ಹಿಡಿಯಲ್ಪಟ್ಟಿದೆ. ಈ ಕಂಬಿಗಳನ್ನು ಪ್ರಬಲವಾದ ಜಲಸಮ್ಮರ್ದದ ಆಸರೆಗಳಿಂದ ಬಲಗೊಳಿಸಲಾಗಿದೆ. ತತ್ಪರಿಣಾಮವಾಗಿ ಕಾಂಕ್ರೀಟನ್ನು ೧೦,೦೦೦ ಟನ್‌ಗಳಿಗೂ ಹೆಚ್ಚು ಶಕ್ತಿಯಿಂದ ಸಂಕುಚಿತಗೊಳಿಸುತ್ತದೆ. ಈ ಸಂಕುಚಿತತೆಯು ಬಿರುಕು ಬೀಳುವುದನ್ನು ತಡೆಯುತ್ತದೆ ಮತ್ತು ಗೋಪುರವನ್ನು ಸ್ಥಿತಿಸ್ಥಾಪಕತ್ವಗೊಳಿಸುತ್ತದೆ. ಇದಲ್ಲದೆ ಬಿರುಗಾಳಿ, ಶಾಖ ಮತ್ತು ಇತರ ಒತ್ತಡಗಳನ್ನು ತಡೆದುಕೊಳ್ಳುವಂಥ ಸಾಮರ್ಥ್ಯವನ್ನು ನೀಡುತ್ತದೆ.

ಈ ಗೋಪುರಕ್ಕೆ ಎರಡು ಅಸ್ತಿಭಾರಗಳಿವೆ. ಮೇಲೆ ವಿವರಿಸಿದ್ದು ಗೋಪುರದ ಇಡೀ ಭಾರವನ್ನು ಹೊತ್ತಿರುವುದು. ಆದರೆ ಎರಡನೆಯದು ಗೋಪುರದ ತಳದಿಂದ ೭೩ ಮೀಟರ್‌ಗಳ 'ಸಿಲಿಂಡರ್' ಕೆಳಗೆ ನಿರ್ಮಿಸಲಾಗಿದೆ. ಈ ಸಿಲಿಂಡರ್ ಅದರ ಮೇಲಿರುವ ಹದಿನೈದು ಅಂತಸ್ತುಗಳಿಗೆ ಆಸರೆಯನ್ನು ನೀಡುತ್ತದೆ.

ಇದರ ನಿರ್ಮಾಣಕ್ಕೆ ವಿಶೇಷ ಬಗೆಯ ಕಾಂಕ್ರೀಟನ್ನು ಉಪಯೋಗಿಸಲಾಗಿದೆ. ಮತ್ತೊಂದು ವಿಶೇಷ ಚಳಿಗಾಲದಲ್ಲಿ ಸೊನ್ನೆಗಿಂತಲೂ ಕಡಿಮೆ ಡಿಗ್ರಿ ಉಷ್ಣವಿದ್ದಾಗ ಕಾಂಕ್ರೀಟ್ ಹಾಕಿದ್ದಾರೆ. ಜಗತ್ತಿನ ಅಪರೂಪವಾದ ೩೦೦ ಟನ್ ಸ್ವಯಂಚಾಲಿತ ಘಟಕವನ್ನು ಈ ಕಾಂಕ್ರೀಟ್ ಕಟ್ಟಡದ ನಿರ್ಮಾಣಕ್ಕೆ ಬಳಸಿದ್ದು ಒಂದು ಹೊಸ ವಿಧಾನ.

ಈ ಕಟ್ಟಡವನ್ನು ಬಹು ಶೀಘ್ರಗತಿಯಲ್ಲಿ ನಿರ್ಮಿಸಲಾಯಿತು. ಈ ಬಗೆಯ ಕಟ್ಟಡಗಳನ್ನು ದಿನಕ್ಕೆ ೫೦ ಸೆಂಟಿಮೀಟರ್‌ದಂತೆ ಕಟ್ಟಲಾಗುತ್ತದೆ. ಆದರೆ ಈ ಕಟ್ಟಡಕ್ಕೆ ವಿಶೇಷ ಕಾಂಕ್ರೀಟ್ ಬಳಸುವುದಲ್ಲದೆ ದಿನಕ್ಕೆ ೭೨ ಸೆಂಟಿಮೀಟರ್‌ದಂತೆ ಕಟ್ಟಲಾಗಿದ್ದು ಒಂದು ವಿಸ್ಮಯ.

ಓಸ್ತಾಂಕಿನ್‌ಸ್ಕಾಯ ಟೆಲಿವಿಷನ್ ಕೇಂದ್ರ ಸೋವಿಯತ್ ಟೆಲಿವಿಷನ್ ಇತಿಹಾಸದಲ್ಲೂ ಹೊಸ ಅಧ್ಯಾಯ ತೆರೆಯುತ್ತದೆ. ಮಾಸ್ಕೋದಲ್ಲಿಯ ಈಗಿರುವ ಟೆಲಿವಿಷನ್ ಕೇಂದ್ರವು ೫೦ ಕಿಲೋ ಮೀಟರ್‌ಗಳ ವ್ಯಾಪ್ತಿ ಹೊಂದಿದೆ. ಈ ಹೊಸ ಟೆಲಿವಿಷನ್ ಕೇಂದ್ರವು ೧೫೦ ರಿಂದ ೧೭೦ ಕಿ. ಮೀಟರ್ ಪ್ರಸಾರ ವ್ಯಾಪ್ತಿಹೊಂದಿ ೨೦೦ ಮಿಲಿಯ ಟೆಲಿವಿಷನ್ ಪ್ರೇಕ್ಷಕರನ್ನು ವರ್ಣರಂಜಿತ ಪ್ರಸಾರಗಳಿಂದ ಮನ ತಣಿಸುತ್ತದೆ. 'ಜಗತ್ತಿನ ಹೊಸ ವಿಸ್ಮಯ' ಈ ಓಸ್ತಾಂಕಿನ್‌ಸ್ಕಾಯಾದ ಟೆಲಿ ಗೋಪುರ.

('ಸೋವಿಯತ್ ದೇಶ'ದಿಂದ ಆಧಾರಿತ).



"ಸೋಮಾರಿ ಕೈಗಳಿಗೆ
ಬರೀ ಹೊಟ್ಟೆ ಇರುತ್ತದೆ" —ಕಿಂಗ್

ಆರಾಮು ಕುರ್ಚಿಯಲ್ಲಿ ಆಕಳಿಸುತ್ತಿದ್ದಾಗ ಸೋಮಾರಿ ಬುದ್ಧಿಗೆ ಸೋಮಾರಿತನದ ನೆನಪು ಬಂತು; ಸೋಮಾರಿಗಳ ಸೋಮಾರಿತನದ ಎಚ್ಚರ ಮನಃಪಟಲದ ಮೇಲೆ ಮಸುಕು ಮಸುಕಾಗಿ ಮೂಡಿ ಮಾಯವಾಯಿತು. ಅದು ಅರನಿದ್ರೆ, ಅರ ಎಚ್ಚರದ ಅರಮರ್ಧ ಸ್ಥಿತಿ.

ಈ ದುಸ್ಥಿತಿಯಿಂದ ಎಚ್ಚರಗೊಂಡಾಗ ಸೋಮಾರಿತನದ ಮುದ್ರೆ ಮನಸ್ಸಿನಲ್ಲೇನೋ ಮೂಡಿತ್ತು. ಅದನ್ನೇ ಕೆದಕಲು ಪ್ರಾರಂಭಿಸಿದೆ. ಚಂಚಲತೆಯ ಗುದ್ದಲಿಯಿಂದ.

ತ್ರಿಭಾಷಾ ಸೂತ್ರದ ತಾಕಲಾಟದ ಗೋಳು ನೆನಪಿಗೆ ಬಂತು. ರೋಮನ್ ಲಿಪಿ ಬಳಕೆಯ ಸ್ಫುಟವಾಯಿತು. ಸೋಮಾರಿಗಳ ಗತಿ ರೋಮನ್ ಲಿಪಿಯಲ್ಲಿ ಏನಾದೀತು ಎಂದು ಯೋಚಿಸಿದೆ. SOMARYGALA........ ಎಂದು ಬರೆದೆ; SO MARY GALA ಆಹಾ! SOMARY GALA.... ಸೋಮಾರಿ GALA; ಬಹಳ ಮೋಜೆನಿಸಿತು. ಸೋಮಾರಿ ಹಬ್ಬ; ಸೋಮಾರಿಗಳ ಉತ್ಸವ! ಹೀಗಾದರೆ ಮಾರಿಗೆ ಉತ್ಸಾಹ–ಹಬ್ಬ ಎಂದುಕೊಂಡೆ. ರೋಮನ್ ಲಿಪಿ ಬಳಕೆಯ ಇನ್ನೂ ಕೆಲ ಮೋಜುಗಳು ನೆನಪಿಗೆ ಬಂದವು. "ಅನಂತ"ನ ಗತಿ "AN ANT" ಆಗಿ ಹೋಗುತ್ತದಲ್ಲಾ, "ಗಾಢಾಂಧಕಾರ" ಹೋಗಿ "GOD A ANDHAKARA" ಅಥವಾ "GOD A ಅಂಧಕಾರ" ಆಗಿ ಹೋದರೆ ಗತಿ ಏನು ಎಂದೇನೇನೊ ಯೋಚನೆಗಳು ಬಂದು ಹೋದವು. ಆದರೆ "SO MARY", "SO MARRY" "ಸೋ–ಮಾರಿ" "ಸೋಮಾರಿ" ಇವು ನಾಲ್ಕು ನನ್ನ ಬುದ್ಧಿಯ ವೇದಿಕೆಯ ಮೇಲೆ ಸಾಮೂಹಿಕ ನೃತ್ಯ ಪ್ರಾರಂಭ ಮಾಡಿದವು. ಸೋ–ಮಾರಿ ?!! ಮಾರಿಗೆ

ಎಲ್ಲರೂ ಸೋ ಎನ್ನಲು ಪ್ರಾರಂಭಿಸಿದರೆ ಉಳಿಯುವದಾದರೂ ಏನು? ನಾಶ, ಧ್ವಂಸ, ವಿಧ್ವಂಸ. "So ಮಾರಿ will prevail if there is a ಸೋಮಾರಿ" "ಸೋಮಾರಿ ಇದ್ದರೆ ಮಾರಿ ಪ್ರಬಲಗೊಳ್ಳುತ್ತಾಳೆ"....ಬಹಳ ನಿಗೂಢ ವಿಚಾರ. ಇದನ್ನೇ ದೀರ್ಘವಾಗಿ ವಿವೇಚಿಸತೊಡಗಿದೆ.

"ಮಾರಿ" ಎಂದಾಗ ಹಿಂದಿಯ ಮಾರ್ರೇ ನೆನಪು ಬಂತು. ಯಾರನ್ನು "ಮಾರ್ರೇ"? ಹೊಡೆಯಬೇಕಾದದ್ದು ಯಾರನ್ನು? ಸೋಮಾರಿತನವನ್ನು ಎಂದು ಪ್ರತಿಭಾವಂತರು ಹೇಳುತ್ತಾರೆ, ನಿಜ. ಆದರೆ ಸೋಮಾರಿಗಳು ಆದನ್ನು ಒಪ್ಪುತ್ತಾರೆಯೇ? ಸೋಮಾರಿತನವನ್ನೇ ಹೊಡೆದು ಹಾಕಿದರೆ ಸೋಮಾರಿಗಳೆಲ್ಲಿಂದ ಉಳಿಯಬೇಕು [ A species will be lost ! ] ಒಂದು ಜಾತಿಯೇ ಇಲ್ಲದಂತೆ ನಾಶವಾಗುತ್ತದೆಯಲ್ಲ. ಕೆಲ ಜಾತಿ ಸಿಂಹಗಳು, ಹುಲಿಗಳು, ಆನೆಗಳು ಇಲ್ಲವಾಗಿವೆಯಂತೆ ಹಾಗೆಯೇ ಆದರೆ ಸೋಮಾರಿ ಜಾತಿ? 'ಸೋಮಾರಿ ಕೋಮಾರ್ರೇ' (ಸೋಮಾರಿಯನ್ನು ಹೊಡಿಯೋ) "ಸೋ ಮ್ಯಾರಿ ಎ ಸೋಮಾರಿ' [ಸೋಮಾರಿಯನ್ನು ಮದುವೆಯಾಗೋ]; ಸೋಮಾರಿ ಪದಜಾಲ ಬಹಳ ವಿಚಿತ್ರವಾಗಿದೆ.

'ಸೋಮಾರಿ'ಯ ಅರ್ಥ ಆಲಸಿ, ದಡ್ಡ ಜಡ ಪ್ರವೃತ್ತಿಯುವ ಎಂದೆಲ್ಲಾ ಇದೆ. ಆದರೆ 'ಸೋಮಾರಿ' ಸಂಧಿ ವಿಭಜನೆ ಮಾಡಿದರೆ ಸೋಮ + ಅರಿ = ಸೋಮಾರಿ. 'ಸೋಮ' ಒಂದು ಬಗೆಯ ಮದ್ಯ. ಇದು ಆರ್ಯರ ಕಾಲದಲ್ಲಿ ಅಮೃತಕ್ಕೆ ಸಮವಾಗಿ ಭಾವಿಸಲ್ಪಟ್ಟಿದ್ದರೂ ಇದು ಅಪಾನವೇ. 'ಅರಿ' ಎಂದರೆ ತಿಳಿ ಎಂದು ಒಂದು ಅರ್ಥವಾದರೆ 'ತುಂಡು ಮಾಡು', 'ಶತ್ರು' ಎಂಬ ಅರ್ಥಗಳೂ ಇದಕ್ಕಿದೆ............ ಹೀಗೆಂದಾಗ 'ಸೋಮ' ರಸ (ಮದ್ಯ) ಶತ್ರು ಎಂದು ಅರ್ಥ ಮಾಡಿಕೊಳ್ಳಬೇಕೋ? 'ಸೋಮ' ರಸವನ್ನು ತಿಳಿಯಬೇಕು.....



# ಸೋಮಾರಿ ರಾಜ್ಯ

ಆದನ್ನು ತಿಳಿಯಾಗಿ ಕುಡಿಯಬೇಕು ಎಂದು ಅರ್ಥ ಮಾಡಿಕೊಳ್ಳಬೇಕೋ ಅಥವಾ 'ಸೋಮ' ರಸದ ರುಚಿ 'ಅರಿ' ತವ 'ಸೋಮಾರಿ' ಎಂದು ಅರ್ಥ ಮಾಡಿಕೊಳ್ಳ ಬೇಕೋ ?

ಸೋಮಾರಿ ಎಲ್ಲರಂತೆ ಮಾನವನಲ್ಲವೇ? ಏಕೆ ಪ್ರಾಣಿಗಳಲ್ಲಿ ಸೋಮಾರಿ ಜಾತಿ ಇಲ್ಲವೇ ? ಸಸ್ಯಗಳಲ್ಲಿ ಸೋಮಾರಿ ಸಸ್ಯ ಗಳಿಲ್ಲವೇ ? ಅದೇಕೆ ಸಸ್ಯಗಳೆಲ್ಲವೂ ನೈಜ ವಾಗಿ ಜಡಗಳೇ. ಆದಕ್ಕೆ ಅವೆಲ್ಲ ಸೋಮಾರಿಗಳೇ; ಇದೂ ಒಂದು ಉಲ್ಲೇಖ. ಆದರೆ ಪ್ರಾಣಿಗಳಿಗೆ ಓಡಾಡಲು ಬಂದರೂ ಅವು ಕೆಲವೊಮ್ಮೆ, ಕೆಲ ಕೆಲವು ಜಡ ವಾಗುತ್ತವೆ, ಸೋಮಾರಿಗಳಾಗುತ್ತವೆ. ಆದರೆ 'ಸೋಮಾರಿ ಕೈಗಳಿಗೆ ಬರೀ ಹೊಟ್ಟೆ ಇರುತ್ತದೆ', (Idle hands have an empty Belly) ಎಂದಿದ್ದಾನೆ ಕಿಂಗ್. ಇದು ಬಹಳ ಅರ್ಥಗರ್ಭಿತ ವಾಗಿದೆ. "ಕೈ" ಗಳು ದುಡಿದರೆ "ಬಾಯಿ" ಉಣ್ಣಬೇಕು. ಆಗ 'ಹೊಟ್ಟೆ' ತುಂಬು ತ್ತದೆ. "ಕೈ" ಗಳೇ ಗಳಗಳಾದರೆ ಆ "ಹೊಟ್ಟೆ" ಬರೀದಾಗದೆ ಮತ್ತೇನಾದೀತು? ದುಡಿದವನ ಹೊಟ್ಟೆ ತುಂಬುತ್ತದೆ. ದುಡಿಯದವನು ಪಸ್ತು ಬೀಳುತ್ತಾನೆ. ಕೌಪರ್ ಬಹಳ ಮಾರ್ಮಿಕವಾಗಿ "ಗಡಿ ಯಾರದಂತೆ ಸೋಮಾರಿಗೆ ಎರಡು ಕೈಗಳು ಬೇಕು. ಅವುಗಳು ನಡೆದರೆಷ್ಟು ನಿಷ್ಪ್ರಯೋಜಕವೋ ನಿಂತರೂ ಅಷ್ಟೇ." ("An Idler is a watch that wants both hands,. As useless when it goes as when it stands" ಎಂದಿದ್ದಾನೆ.

ಸೋಮಾರಿಗೆ ಗಡಿಯಾರ ನಡೆದರೆಷ್ಟು, ನಿಂತರೆಷ್ಟು ? ಅವನಿಗೆ ರಾತ್ರಿಯೇನು, ಹಗಲೇನು ? ಅವನು ಕಾಲನ ಪರಿಮಿತಿಗೆ ಸಿಕ್ಕವನಲ್ಲ- ಕಾಲಾತೀತ. ಅವನು ಸಮಾನ ಧರ್ಮಿ, ಹಗಲು-ರಾತ್ರಿಗಳನ್ನು ಎಣಿಕೆಗೆ ತೆಗೆದುಕೊಳ್ಳದೆ ಜಡದೇಹಿ ಯಾದವ. ಅವನಿಗೆ ರಾತ್ರಿ - ಹಗಲು ಎಲ್ಲವೂ ಒಂದೇ. ರವಿ ಚಂದ್ರರ ಗತಿಗೆ ಅವನು ದೂರ.

ಇಷ್ಟಾದರೇ ಅವನ ವ್ಯವಹಾರವಾದರೂ ಏನು ? ಈ ಸಮಸ್ಯೆಗೆ ಲಿಟ್ಟನ್ ಸಮಾ ಧಾನವನ್ನು ಒದಗಿಸುತ್ತಾನೆ. "ಪ್ರೇಮ ಸೋಮಾರಿಗಳ ವ್ಯವಹಾರ". (Love is the business of the idle). ಎಂತಹ ಮಹತ್ತರ ಕಾರ್ಯ ! ಆದ್ದ ರಿಂದಲೇ ಇರಬೇಕು, ಅನೇಕರು ಸೋಮಾರಿ ಗಳಾಗಲು ಬಯಸುತ್ತಾರೆ. ಅದನ್ನು ಪ್ರೀತಿಸುತ್ತಾರೆ ಕೂಡಾ (many love to be idle). ಆಗ "ಪ್ರೇಮದ ಸಲು ವಾಗಿ ಪ್ರೇಮಿಸು. ಸೋಮಾರಿಯಾಗಲು ಪ್ರೇಮಿಸು." ಮುಂತಾದ ಅವಸ್ಥೆಗಳೂ ಉದ್ಭವವಾಗುತ್ತವೆ. ಹೀಗಾಗಿಯೇ ಇರಬೇಕು ( To be idle is the ideal of many). ಸೋಮಾರಿ

ಯಾಗುವದೇ ಅನೇಕರ ಆದರ್ಶ ಆಗಿ ಹೋಗಿದೆ, ಸೋಮಾರಿತನವೇ ಆದರ್ಶ ವಾದ. ಸೋಮಾರಿಯೇ ಆದರ್ಶ. (To love is divine). ಪ್ರೇಮಿಸು ವದು ದೈವೀ ಪ್ರವೃತ್ತಿ ಎಂದಂತೆ (To be idle is divine because love is the business of the idle). ಸೋಮಾರಿತನವೂ ದೈವೀ ಪ್ರವೃತ್ತಿ. ಏಕೆಂದರೆ ಪ್ರೇಮವು ಸೋಮಾ ರಿಗಳ ವ್ಯವಹಾರ ಎಂಬ ಭಾವನೆಯು ಪ್ರಜೆಗಳಲ್ಲಿ ತುಂಬಿಕೊಂಡಿದೆ. ಅಂತೂ 'ಸರ್ವಂ ಶಿವಮಯಂ ಜಗತ್' ಹೋಗಿ "ಸರ್ವ ಸೋಮಾರಿಮಯಂ ಜಗತ್" ಆಗಿ ಹೋಗಿದೆ.

ಇದು ಪ್ರಜಾಪ್ರಭುತ್ವ "ಯಥಾ ರಾಜಾ ತಥಾ ಪ್ರಜಾ" ಎಂದು ಹಳೆಯ ಕಾಲದಲ್ಲಿ ರಾಜರ ರಾಜ್ಯ ಪದ್ಧತಿ ಇದ್ದಾಗ ಹೇಳ ಲಾಗುತ್ತಿತ್ತು. ಆದರೆ ಪ್ರಜಾ ರಾಜ್ಯದಲ್ಲಿ "ಯಥಾ ಪ್ರಜಾಃ ತಥಾ ರಾಜ್ಯ" ಎಂದಾ ಗಿದೆ. ಆದ್ದರಿಂದ ಸೋಮಾರಿ ಪ್ರಜೆಗಳ ಸೋಮಾರಿ ರಾಜ್ಯ ನಮ್ಮ ಈ ಪ್ರಜಾ ರಾಜ್ಯ.... ಪ್ರಜಾ ರಾಜ್ಯದ ವ್ಯಾಖ್ಯೆಯ ಮೇರೆಗೆ ("Democracy is the Government of the people by the people and for the people"). ಪ್ರಜಾ ರಾಜ್ಯವು ಪ್ರಜೆ ಗಳಿಗಾಗಿ, ಪ್ರಜೆಗಳಿಂದ ನಡೆಸಲ್ಪಡುವ ಪ್ರಜೆಗಳ ಸರ್ಕಾರ. ಇದು ಈಗ (Government of the lazy for the lazy and by the lazy) "ಸೋಮಾರಿಗಳಿಗಾಗಿ ಸೋಮಾರಿಗಳಿಂದ ನಡೆಸಲ್ಪಡುವ ಸೋಮಾರಿಗಳ ಸರ್ಕಾರ" ಆಗಿ ಹೋಗಿದೆ.

ಅಲ್ಲಲ್ಲಿ ಆಗಾಗ ನಡೆದ ಕೆಲ ಘಟನೆಗಳು ವಿಚಾರಾರ್ಹ. ಒಂದು ಸರ್ಕಾರಿ ಕಟ್ಟಡಕ್ಕೆ ರಾತ್ರಿ ಬೆಂಕಿ ಹತ್ತಿತ್ತಂತೆ. ಆ ಬೆಂಕಿ ಹತ್ತಿದ ನಾಲ್ಕೈದು ತಾಸುಗಳಲ್ಲೇ ಅಲ್ಲಿಯ ಪೇದೆ ಈ ಸುದ್ದಿಯನ್ನು ಕಚೇರಿಯ ಅಧಿ ಕಾರಿಗೆ ಫೋನಿನ ಮೇಲೆ ತಿಳಿಸಿದನಂತೆ. ಕನಸಿನ ಸಾಮ್ರಾಜ್ಯದಲ್ಲಿದ್ದ ಆ ಅಧಿಕಾರಿ ತನಗಾದ ನಿದ್ರಾಭಂಗಕ್ಕೆ ಸಿಟ್ಟಿಗೆದ್ದು 'ಸುಟ್ಟು ಹೋದ್ರೆ ಆ ಜಿಲ್ಲಾ ಅಧಿಕಾರಿಗೆ ಹೇಳು ನನ್ಗೇನು ಹೇಳ್ತೀ' ಅಂದನಂತೆ. ಆ ಪೇದೆ ಎಲ್ಲಾ ಕಟ್ಟಡ ಸುಟ್ಟು ಹೋಗೋ ತನಕ ನಿದ್ದೆ ಹೋಗಿ, ಎದ್ದು ಸುಟ್ಟದೆ ಎಂದು ಖಾತ್ರಿ ಮಾಡಿಕೊಂಡು ನಂತರ ಜಿಲ್ಲಾಧಿಕಾರಿಗೆ ಫೋನಿನ ಮೇಲೆ ತಿಳಿಸಿದ ನಂತೆ "ಕಚೇರಿ ಕಟ್ಟಡ ಪೂರ್ಣ ಸುಟ್ಟು ಹೋಯಿತು" ಎಂದು.

ಒಂದು ಸಲ ಅತಿ ದೊಡ್ಡ ಸೋಮಾರಿಗೆ ಒಂದು ರಾಷ್ಟ್ರ ಪ್ರಶಸ್ತಿ ಕೊಡಬೇಕೆಂದು ನಿರ್ಧರಿಸಲಾಯಿತಂತೆ. "ಮಹಾ ಸೋ ಮಾರಿ" ಪ್ರಶಸ್ತಿಗೆ ಒಂದು ಸ್ಪರ್ಧೆ ಏರ್ಪಡಿಸ ಲಾಯಿತು. ಸ್ಪರ್ಧೆಗೂ ಹೆಸರುಗಳನ್ನು ಕೊಡದಷ್ಟು ಮಹಾ ಮಹಾ ಸೋಮಾರಿ ಗಳು ಇರಲಿಲ್ಲವೆಂದಲ್ಲ. ಆದರೆ ಈ ಪ್ರಶಸ್ತಿ ಸ್ಪರ್ಧೆಗೆ ಬಂದವರಿಗೆ ಮಾತ್ರ ತೆರವಾಗಿತ್ತು.

ಸ್ಪರ್ಧೆಗೆ ಬಂದ ಎಲ್ಲರನ್ನೂ ಒಂದು ದೊಡ್ಡ ಖೋಲಿಯಲ್ಲಿ ಇಡಲಾಯಿತು. ಅಲ್ಲಿ ಬೇಕಾದದ್ದು ಅವರಿಗೆ ಪೂರೈಸಲಾಯಿತು. ಕೆಲವರು ಹಾಸಿಗೆಯಲ್ಲೇ ಇದ್ದು ಸೇವಕರನ್ನು ಕರೆದು ತಮಗೆ ಬೇಕಾದುದನ್ನು ಬೇಡಿ ಪಡೆದರು. ಕೆಲವರು ಊಟ, ತಿಂಡಿ ಪಾನಗಳನ್ನು ಅವರ ಬಳಿಗೆ ತೆಗೆದುಕೊಂಡು ಹೋಗಿ ಕೊಡುವ ವರೆಗೆ ಮಲಗಿಯೇ ಇದ್ದರು; ಕೆಲವರು ತಿನ್ನಿಸಲು ಹೇಳಿದರು. ಕೆಲವರು ಅದನ್ನೂ ಹೇಳಲಿಲ್ಲ. ಸೇವಕರು ತಿನ್ನಿಸಿದಾಗ ತಿಂದರು. ಹೀಗೆ ನಾನಾವಿಧದ ನಾನಾ ಹಂತಗಳ– ಮಟ್ಟಗಳ ಸೋಮಾರಿಗಳು ಇಲ್ಲಿ ಆಗಮಿಸಿದರು. ಇದು ಒಂದು ಮೋಜಿನ ಜಾತ್ರೆಯೇ ಆಗಿತ್ತು. ಅದು ಸರಿಯೋ ತಪ್ಪೋ ನ್ಯಾಯ ನಿರ್ಣಯಕರು ಮಾತ್ರ ಪ್ರತಿಭಾನ್ವಿತರೂ, ಚುರುಕಿನ ಪ್ರವೃತ್ತಿಯವರೇ ಆಗಿದ್ದರು. [ಕೆಲವರು ಇದಕ್ಕೆ ತಕರಾರು ತೆಗೆದರು. “ಮಹಾ ಸೋಮಾರಿ ಯಾರೆಂದು ನಿರ್ಧರಿಸುವ ಅಧಿಕಾರ ಮಹಾ ಮಹಾ ಸೋಮಾರಿಗೆ ಮಾತ್ರ ಇದೆ” ಎಂದು. ಆದರೆ ಮಹಾ ಮಹಾ ಸೋಮಾರಿಯನ್ನು ನ್ಯಾಯ ನಿರ್ಣಾಯಕನಾಗಿ ಕರೆತರುವುದಾದರೂ ಹೇಗೆ? ಕೊನೆಗೆ ಇದು ಅಪ್ರಯೋಗಿಕ ಸಲಹೆ ಎಂದು ತಳ್ಳಿಹಾಕಲಾಯಿತು.] ನ್ಯಾಯ ನಿರ್ಣಾಯಕರು ಜಾಗರೂಕತೆಯಿಂದ ಸೋಮಾರಿಗಳ ಒಂದೊಂದು ಜಡ ಕೃತಿಯನ್ನು ಗಮನಿಸಿ ಆ ಸೋಮಾರಿಗಳೊಬ್ಬೊಬ್ಬರಿಗೆ ಎಷ್ಟೆಷ್ಟು ಗುಣಗಳು ಕೊಡಬೇಕೆಂದು ನಿರ್ಧರಿಸುತ್ತಿದ್ದರು. ರಾತ್ರಿ ೧೧ ಗಂಟೆಯಾಯಿತು ನ್ಯಾಯನಿರ್ಣಾಯಕರು ಆ ಸೋಮಾರಿಗಳಿದ್ದ ಖೋಲಿಗೆ ಬೆಂಕಿ ಹಚ್ಚಿ ಬಿಟ್ಟರು. ಆ ಕಟ್ಟಡವು ಬೆಂಕಿ ಹತ್ತಿ ಉರಿಯಲು ಪ್ರಾರಂಭಿಸಿತು. ಅದರಲ್ಲಿದ್ದ ಕೆಲವರು “ಓ ಬೆಂಕಿ, ಓ ಬೆಂಕಿ.... ಸತ್ತೆವೋ....ಸತ್ತೆವ” ಎಂದು ಕೂಗುತ್ತಾ ಓಡಿಹೋದರು. ಕೆಲವರು ಎಚ್ಚರ ಆದರೂ “ಓ! ಬೆಂಕಿ ಇನ್ನೂ ನಮ್ಮ ತನಕ ಬಂದಿಲ್ವಲ್ಲಾ, ಬಿಡ್ಲಿ.” ಎಂದು ಮಲಗಿಯೇ ಇದ್ದರು. ಕೆಲವರು ನಿದ್ರಾವಸ್ಥೆಯಲ್ಲಿಯೇ ಇದ್ದರು. ನ್ಯಾಯ ನಿರ್ಣಾಯಕರು ಈ ಸೋಮಾರಿಗಳ ಜೀವಕ್ಕೆ ಧಕ್ಕೆಯಾಗಬಹುದೆನಿಸಿದಾಗ ಹೋಗಿ ಅವರಿಗೆ ಬೆಂಕಿ ಹತ್ತಿರುವ ಬಗ್ಗೆ ಎಚ್ಚರಿಸಿದ್ದರು. ಅಗ್ನಿಯ ಝಳ ಹಾಗೂ ಅದರ ಅಪಾಯ ಹೆಚ್ಚಾಗುತ್ತ ಹೋದಂತೆ ಒಬ್ಬೊಬ್ಬರಾಗಿ ಕಾಲ್ಕಿತ್ತಲು ಪ್ರಾರಂಭಿಸಿದ್ದರು. ಆದರೆ ಕೊನೆಯ ಹಂತದವರು “ಓ! ಇನ್ನೂ ಗೋಡೆಗೆ ಹತ್ತಿದೆಯೋ? ಅದು ಇನ್ನೂ ಉರಿದು ಜಂತೀಗೆ ಹತ್ತಿ ಆ ಮೇಲೆ ನಮ್ಮ ಆಚೆ ಈಚೆ ಇದ್ದವರನ್ನು ಸುಟ್ಟು ನಮ್ಮ ತನಕ ಬರಬೇಕು” ಎಂದೇ ಮಲಗಿದ್ದರು. ಅಗ್ನಿ ಭಯ ಅತಿ ಅಪಾಯಕಾರಿ ಯಾದಾಗಲೂ ಅಲ್ಲಿಂದ ಹೋಗದಿದ್ದ ಕೆಲವೇ ಧೀಮಂತರಿಗೆ “ಮಹಾ ಸೋಮಾರಿ ಪ್ರಶಸ್ತಿ” ನೀಡಲಾಯಿತು. ಈ ಪ್ರಶಸ್ತಿಯ ಪ್ರಥಮ ಸ್ಪರ್ಧೆ ಆದ ಮೇಲೆ ರಾಷ್ಟ್ರದ ಪ್ರಜೆಗಳೆಲ್ಲರೂ ಮುಂಬರುವ ಸ್ಪರ್ಧೆಗೆ ತಯಾರೀ ನಡೆಸಲು ಪ್ರಾರಂಭ ಮಾಡಿದರು. ರಾಷ್ಟ್ರಕ್ಕೆ

ರಾಷ್ಟ್ರವೇ ಈ ಸ್ಪರ್ಧಾ ಸನ್ನದ್ಧತೆಗೆ ನಿಂತು ಬಿಟ್ಟಿತು. ರಾಷ್ಟ್ರವು ಪಾರ್ಕಿನ್‌ಸನ್ ಕಾಯ್ದೆ Parkinson's laws ] ಗಳನ್ವಯ ನಡೆಯಲಾರಂಭಿಸಿತು. [ಪಾರ್ಕಿನ್‌ಸನ್ ರವರ ಕಾಯ್ದೆಯ ಮೇರೆಗೆ ಹೆಚ್ಚು ಜನ ಒಂದೇ ಕೆಲಸದಲ್ಲಿ ತೊಡಗಿದರೆ ಉತ್ಪಾದನೆ ಕಡಿಮೆಯಾಗುತ್ತದೆ. 'ಹೆಚ್ಚು ಜನ ಕಡಿಮೆ ಕೆಲಸ' ಇದು ಅವರ ಸೂತ್ರ] ಅಂತೆಯೇ ರಾಷ್ಟ್ರದಲ್ಲೆಲ್ಲ 'ಹೆಚ್ಚು ಸೋಮಾರಿತನ ಹೆಚ್ಚು ಉತ್ಪಾದನೆ' ಎಂಬ ತತ್ವ ರೂಢಿಯಲ್ಲಿ ಬಂದು ಜನಪ್ರಿಯವಾಗತೊಡಗಿತ್ತು.

ರಾಷ್ಟ್ರದ ಈ ಸ್ಥಿತಿಯನ್ನು ಕಂಡ ಕೆಲ ಪ್ರತಿಭಾನ್ವಿತರು ಒಂದು ಸಭೆ ಕೂಡಿ ವಿಚಾರ-ವಿನಿಮಯ ಮಾಡಿದರು. ಇವರ ಸಮಸ್ಯೆ ಸೋಮಾರಿಗಳನ್ನು, ಸೋಮಾರಿತನವನ್ನು ನಿರ್ಮೂಲನ ಮಾಡುವದು ಹೇಗೆ ಎಂದು [ಇವರು ಸೋಮಾರಿಗಳಾಗಿರಲಿಲ್ಲ]. ಬಹಳ ದಿನಗಳ ಚರ್ಚೆಯ ನಂತರ ಸಭೆಯಲ್ಲಿ ಒಂದು ಮಹತ್ವ ಪೂರ್ಣ ನಿರ್ಣಯ ಕೈಗೊಳ್ಳಲಾಯಿತು. "ರಾಷ್ಟ್ರದ ಎಲ್ಲ ಸೋಮಾರಿಗಳನ್ನು ಸುಟ್ಟು ಬೂದಿ ಮಾಡಿ ಈ Bone Ash ಅನ್ನು ಗೊಬ್ಬರವಾಗಿ ಬಳಿಸಿ ಆಹಾರ ಧಾನ್ಯಗಳ ಉತ್ಪಾದನೆಗೆ ತೊಡಗಿದರೆ ರಾಷ್ಟ್ರದ ಎಲ್ಲ ಸಮಸ್ಯೆಗಳೂ ಬಗೆಹರಿಯುತ್ತವೆ. ಜನಸಂಖ್ಯಾ ನಿಯಂತ್ರಣ, ಹೆಚ್ಚು ಆಹಾರೋತ್ಪಾದನೆ ಈ ಎರಡೂ ಸಮಸ್ಯೆಗಳನ್ನು ಒಂದೇ ಏಟಿಗೆ ಪರಿಹರಿಸಬಹುದು. ಸೋಮಾರಿಗಳು—ಸೋಮಾರಿತನವೂ ಈ ನೆವದಲ್ಲಿ ನಿರ್ಮೂಲವಾಗುತ್ತವೆ" ಇದೇ ಆ ನಿರ್ಣಯವಾಗಿತ್ತು. ದುರ್ದೈವದಿಂದ ಈ ನಿರ್ಣಯ ಸಂಪೂರ್ಣ ಜಾರಿಗೆ ಬಂತು. "ಸೋಮಾರಿ ಎಲುಬಿನ ಬೂದಿ" ಹೇರಳವಾಗಿ ತಯಾರಾಯಿತು. ರಾಷ್ಟ್ರದಲ್ಲಿ ಸೋಮಾರಿಗಳಲ್ಲದವರೆಲ್ಲರೂ ಉಳಿದುಕೊಂಡರು. ಎಲ್ಲರೂ ಕಾರ್ಯಪ್ರವೃತ್ತರಾದರು. ಮಾದರಿಗೂ ಒಬ್ಬ ಸೋಮಾರಿ ದೊರೆಯದಂತಾಯಿತು. ಪ್ರಗತಿ ಉಜ್ವಲವಾಗಿ ಸಾಗತೊಡಗಿತು. "ಸೋಮಾರಿ ಎಲುಬಿನ ಬೂದಿ" ಎಲ್ಲಾ ಭೂಮಿಗಳಲ್ಲೂ ಚೆಲ್ಲಲಾಯಿತು. [ಇದಾಗುವುದಕ್ಕೆ ಅನೇಕ ವರ್ಷಗಳ ಹಿಂದೆ ರಾಷ್ಟ್ರ ನಿರ್ಮಾಪಕ ನೆಹ್ರೂರವರ ಬೂದಿಯನ್ನು ಎಲ್ಲೆಡೆ ಚೆಲ್ಲಿದ್ದರು. ಇದು ಈಗ ಕೈಕೊಂಡ ಬೃಹತ್ ಯೋಜನೆಯ ನಾಂದಿ ಮಾತ್ರ ಆಗಿತ್ತು] ಅಂತೂ ಬಹಳಷ್ಟು ಪ್ರಮಾಣದಲ್ಲಿ ಈ ಹೊಸ ಗೊಬ್ಬರ ಉಪಯೋಗಿಸಲಾಯಿತು. ಆರೆ ತಿಂಗಳಲ್ಲಿ ಬೆಳೆ ಯಾವಾಗಲೂ ಬರುತ್ತಿದ್ದುದಕ್ಕಿಂತ ನೂರು ಪಟ್ಟಾಯಿತು. ಚುರುಕರಿಗೆ ಸಂತೋಷವೇ ಸಂತೋಷ. ರಾಷ್ಟ್ರಕ್ಕೆ ಬೇಕಾದಷ್ಟು ಧಾನ್ಯವನ್ನು ಪರದೇಶಗಳಗೂ ರಫ್ತು ಮಾಡಲಾಯಿತು. ವಿದೇಶ ವಿನಿಮಯ ಸಾಕಷ್ಟು ಲಭಿಸಿತು. ಔದ್ಯೋಗೀಕರಣಕ್ಕೆ ಬೇಕಾದ ಎಲ್ಲ ತರದ ಯಂತ್ರಗಳೂ ಬಂದವು, ಸ್ಥಾಪಿಸಲ್ಪಟ್ಟವು........ ಎಲ್ಲಾ ಸುಗಮವಾಗಿ ನಡೆಯತೊಡಗಿತು.

ಹೊಸ ಧಾನ್ಯದ ಬಳಕೆ ಪ್ರಾರಂಭವಾಯಿತು. ಮಾನವರ ಎಲುಬಿನ ಬೂದಿ

ಯಿಂದ ತಯಾರಾದ ಧಾನ್ಯ– ರುಚಿಯಿಲ್ಲದೆ ಉಂಟೇ? ರುಚಿ ರುಚಿಯಾಗಿದ್ದ ಈ ಪದಾರ್ಥಗಳನ್ನು ಹೆಚ್ಚು ಹೆಚ್ಚಾಗಿ ತಿನ್ನಲಾರಂಭವಾಯಿತು. ಎಲ್ಲರೂ ಉಬ್ಬಿ–ಕೊಬ್ಬಿ ಭೀಮಸೇನರಂತಾದರು. ಊಟ ಹೆಚ್ಚು ದುಡಿತ ಕಡಿಮೆಯಾದರೆ ನಿದ್ದೆ ಬರದೆ ಏನು ಮಾಡೀತು? ಎಲ್ಲರೂ ಚೆನ್ನಾಗಿ ನಿದ್ದೆ ಮಾಡತೊಡಗಿದರು. ಆದರೆ ........ಕೆಲ ದಿನಗಳು ಸಾಗಿದಂತೆ ಭೀಮಸೇನರು ಕುಂಭಕರ್ಣರಾಗಲು ಪ್ರಾರಂಭವಾಯಿತು. ಚೆನ್ನಾಗಿ ತಿನ್ನುವದು ಮಲಗುವದು............ ಕೆಲವೇ ತಿಂಗಳಲ್ಲಿ ರಾಷ್ಟ್ರಕ್ಕೆ ರಾಷ್ಟ್ರವೇ ಕುಂಭಕರ್ಣನ ಒಕ್ಕಲಿನಿಂದ ತುಂಬಿತು.

ಸುದೈವದಿಂದ ಕೆಲವರಿಗೆ ಈ ಹೊಸ ಧಾನ್ಯ ಆರೋಗ್ಯ ಕೆಡಿಸಿ ಬಿಟ್ಟಿತು. ಹೊಟ್ಟೆ ಝಾಡಿಸಲು ಪ್ರಾರಂಭಿಸಿತು. ಏಕೋ ತಮ್ಮ ದೇಹಕ್ಕೆ ಈ ಹೊಸ ಧಾನ್ಯ ಅಪಾಯಕಾರಿ ಎಂದು ಹಣ್ಣು–ಹಂಪಲು ತಿಂದು ಬದುಕತೊಡಗಿದರು. ಅವರಲ್ಲಿ ಕೆಲವರು ರಾಷ್ಟ್ರಕ್ಕೆ ಮತ್ತೆ ಬಡಿದ "ಮೂದೇವಿ"ಯ ಕಾರಣವನ್ನು ಕಂಡು ಹಿಡಿಯಬೇಕೆಂದು ಸಂಶೋಧನೆ ನಡೆಸಿದರು........ ಬಹಳ ದಿನಗಳ ಸಂಶೋಧನೆ ನಡೆಯಿತು. ಕೊನೆಗೊಮ್ಮೆ ಈ ಸಂಶೋಧಕರು ಒಮ್ಮತಕ್ಕೆ ಬಂದರು. ಸೋಮಾರಿ ಎಲುವಿನ ಬೂದಿಯ ಬಳಕೆಯಿಂದ ಬಂದ ಧಾನ್ಯಗಳನ್ನು ತಿಂದುದರ ಫಲವಾಗಿ ರಾಷ್ಟ್ರಕ್ಕೆ ರಾಷ್ಟ್ರವೇ ಸೋಮಾರಿಗಳ ಬೀಡಾಯಿತೆಂದು. (ಅಷ್ಟರಲ್ಲೇ ಪರದೇಶಗಳಿಂದಲೂ ದೂರುಗಳು ಬಂದಿದ್ದವು. ಈ ಧಾನ್ಯ ಉಂಡವರು ಜಡಪ್ರವೃತ್ತಿಯವರಾಗಿ ಪರಿವರ್ತಿತರಾಗಿದ್ದಾರೆಂದು.)

## ಚೈತನ್ಯ ಪ್ರಜ್ಞೆ

ಈ ಸಲ ತಜ್ಞರ ಸಭೆ ಕೂಡಿದಾಗ ಕಳೆದ ಸಲ ಮಾಡಿದ ತಪ್ಪು ಮಾಡಲಿಲ್ಲ. ಅವರಿಗೆ ಸೋಮಾರಿತನ ಹೇಗೆ ನಿಜವಾಗಿಯೂ ಮರಿಯಾಗಿತ್ತೆಂಬುದರ ಅನುಭವ ಬಂದಿತ್ತು. 'ಸೋಮಾರಿ'ಗೆ 'ಕಾಮಗಾರಿ'ಯೇ ಸರಿಯಾದ 'ಮಾರಿ'! ಎಂದು ನಿರ್ಧಾರ ಕೈಕೊಂಡರು. ಪ್ರಾಣ ಭಯ ಯಾರಿಗೆ ತಾನೇ ಇರುವದಿಲ್ಲ? ಸೋಮಾರಿಗಳೂ ಸೋಮಾರಿತನವನ್ನು ಬೆಳೆಸಿಕೊಳ್ಳುವದು ಜೀವಕ್ಕೆ ಸುಖ ಕೊಡಲು ಅಲ್ಲವೇ? "ದುಡಿಯದೇ ಬಾಳಲು ಬಯಸಿದವನಿಗೆ ಫಾಸಿ ಶಿಕ್ಷೆ" ಎಂಬ ಕಾಯ್ದೆ ಅನಿವಾರ್ಯವಾಗಿ ರೂಪಗೊಂಡಿತು. "ಕಾಮಗಾರಿ" ಮಾರಿ ಎಲ್ಲೆಲ್ಲೂ ತಾಂಡವವಾಡಿ ಸೋಮಾರಿಯನ್ನು ಸಂಪೂರ್ಣ ನಿರ್ನಾಮ ಮಾಡಿ ಬಿಟ್ಟಳು; "ಸೋಮಾರಿ ರಾಜ್ಯ" ಹೋಗಿ "ಕಾಮಗಾರಿ ರಾಜ್ಯ" ವಾಗಿ ಹೋಯಿತು.



—ಕುವಲಯ



# ವಿದ್ಯಾರ್ಥಿ ಗಲಭೆ

ಒಂದು ಸಂದರ್ಶನ:
**ಶ್ರೀ ಎಸ್. ಎಸ್. ಒಡೆಯರ್**
(ತಾತ್ಕಾಲಿಕ ಉಪಕುಲಪತಿ, ಕ. ವಿ. ವಿ., ಧಾರವಾಡ)

[ರಾಷ್ಟ್ರದ ಕೆಲಕಡೆಗಳಲ್ಲಿ ಮತ್ತೆ ವಿದ್ಯಾರ್ಥಿಗಳ ಗಲಭೆಯು ಕಿಡಿ ಎದ್ದಿದೆ. ಈ ಸಮಸ್ಯೆ ಬಹಳ ಗಂಭೀರವಾದದ್ದು. ಶ್ರೀ ಒಡೆಯರರು ಈ ಸಮಸ್ಯೆಯನ್ನು ನೋಡುವ ಬಗೆಯನ್ನು ಇಲ್ಲಿ ಒದಗಿಸಲಾಗಿದೆ. ಸಂ.]

"ಯೋಗ್ಯ ವಿದ್ಯಾರ್ಥಿಗಳಿಗೆ ಮಾತ್ರ ಕಾಲೇಜುಗಳಲ್ಲಿ ಪ್ರವೇಶ ಮೀಸಲಿಡಬೇಕು. ಆಗ ಉತ್ತಮ ಮೌಲ್ಯಗಳುಳ್ಳ ಪ್ರಜೆಗಳು ತಯಾರಾಗುತ್ತಾರೆ ಸಮಾಜವು ಸುಧಾರಿಸುತ್ತದೆ. ಇದು ವಿದ್ಯಾರ್ಥಿ ಗಲಭೆಗೆ ಒಂದು ಶಾಶ್ವತ ಪರಿಹಾರ ಒದಗಿಸಬಲ್ಲದು" ಎಂದು ಕರ್ನಾಟಕ ವಿಶ್ವವಿದ್ಯಾಲಯದ ಶ್ರೀ ಸದಾಶಿವ ಒಡೆಯರರು ಹೇಳಿದರು.

'ವಿದ್ಯಾರ್ಥಿ ಗಲಭೆ' ಬಗ್ಗೆ ಶ್ರೀಯುತರ ಅಭಿಪ್ರಾಯ ಸಂಗ್ರಹಕ್ಕಾಗಿ ಭೆಟ್ಟಿಯಾದಾಗ ಅವರು ಮೇಲಿನಂತೆ ಹೇಳಿದರು.

ರಾಜಕೀಯ ಪಕ್ಷಗಳ ಹಸ್ತಕ್ಷೇಪದ ಬಗ್ಗೆ ಕೇಳಿದಾಗ "ವಿದ್ಯಾರ್ಥಿ ಗಲಭೆಗೆ ರಾಜಕೀಯ ಮೂಲವಲ್ಲ. ಆದರೆ ಯಾವುದೋ ಕಾರಣಕ್ಕೆ ಪ್ರಾರಂಭವಾದ ವಿದ್ಯಾರ್ಥಿಗಳ ಗಲಭೆಯನ್ನು ರಾಜಕೀಯ ಪಕ್ಷಗಳು ತಮ್ಮ ಸ್ವಾರ್ಥಸಾಧನೆಗೆ ಉಪಯೋಗಿಸಿಕೊಳ್ಳುತ್ತಾರೆ. ಅವರು ಅದನ್ನು ಪ್ರಾರಂಭಿಸುವುದಿಲ್ಲ. ಎಂದವರೇ ಪ್ರಧಾನಿ ಶ್ರೀಮತಿ ಇಂದಿರಾ ಗಾಂಧಿಯವರು

ಹೇಳಿದ ಹಾಗೆ 'ಸರ್ಕಾರವನ್ನು ಹೊಡೆಯಲು ಯಾವ ಬೆತ್ತವಾದರೂ ಸಾಕು'; ಇದು ಸಂಪೂರ್ಣ ಸತ್ಯವಾಗಿದೆ. ನಮ್ಮ ರಾಜಕೀಯ ಪಕ್ಷಗಳು ಸರ್ಕಾರದ ವಿರೋಧ ವಿದ್ಯಾರ್ಥಿಗಳನ್ನು ಉಪಯೋಗಿಸುತ್ತಾರೆ' ಎಂದರು.

'ವಿದ್ಯಾರ್ಥಿ ಗಲಭೆ'ಗಳಿಗೆ ಕಾರಣ ವಿವರಿಸುತ್ತಾ ಶ್ರೀಯುತರು ಕೆಳಗಿನಂತೆ ಹೇಳಿದರು:

"ವಿಶ್ವವಿದ್ಯಾಲಯದ ಅಧಿಕಾರಿಗಳು ವಿದ್ಯಾರ್ಥಿಗಳ ಸಮಸ್ಯೆಗಳ ಬಗ್ಗೆ ಅಸಡ್ಡೆ ತೋರುತ್ತಾರೆ. ವಿದ್ಯಾರ್ಥಿಗಳ ಕುಂದು-ಕೊರತೆಗಳ ನಿವಾರಣೆಗೆ ಸವಲತ್ತುಗಳಿಲ್ಲ. ಅಧಿಕಾರಿಗಳು ವಿದ್ಯಾರ್ಥಿಗಳನ್ನು ತಮ್ಮ ವಿಶ್ವಾಸಕ್ಕೆ ತೆಗೆದುಕೊಂಡು ಅವರ ಬಗ್ಗೆ ಸಹಾನುಭೂತಿ ತಾಳಬೇಕು. ಸಾಮಾನ್ಯವಾಗಿ ವಿದಾರ್ಥಿಗಳು ಕೆಟ್ಟವರಾಗಿ ಇರುವುದಿಲ್ಲ. ಅವರಲ್ಲಿ ನಂಬಿಕೆಯಿಡದಿದ್ದರೆ ಅವರು ಉದ್ರೇಕಗೊಳ್ಳುತ್ತಾರೆ. ಅನೇಕ ವಿಶ್ವವಿದ್ಯಾಲಯಗಳಲ್ಲಿ ಉಪಕುಲಪತಿಗಳು ಹಾಗೂ ರಜಿಸ್ಟ್ರಾರರು ವಿದ್ಯಾರ್ಥಿಗಳಿಗೆ ಭೆಟ್ಟಿ ಮಾಡಲು ಅನುಕೂಲ ಮಾಡಿರುವುದಿಲ್ಲ. ಇದರಿಂದಾಗಿಯೂ ಅನೇಕ ಸಮಸ್ಯೆಗಳು ಸಂಕೀರ್ಣಗೊಳ್ಳುತ್ತವೆ. ಈ ಕಾರಣದ ನಿವಾರಣೆಗೆ ವಿದ್ಯಾರ್ಥಿಗಳ ಕಲ್ಯಾಣವನ್ನು ಗಮನಿಸಲು ಒಬ್ಬ ಅಧಿಕಾರಿಯನ್ನು ನೇಮಿಸಬೇಕು. ಈ ಅಧಿಕಾರಿಯು ಪ್ರಾಧ್ಯಾಪಕರಲ್ಲಿ ಓರ್ವರಾಗಬೇಕು. ಇದರಿಂದ ಅನೇಕ ತೊಂದರೆಗಳನ್ನು ನಿವಾರಿಸಬಹುದು.

ಅನೇಕ ವಿದ್ಯಾ ಸಂಸ್ಥೆಗಳಲ್ಲಿ ಶಿಕ್ಷಕರು ಉತ್ತಮ ಆದರ್ಶವನ್ನು ತಾಳಿರುವುದಿಲ್ಲ. ಶಿಕ್ಷಕರಲ್ಲಿ ಶೀಲ, ಆದರ್ಶ, ಚಾರಿತ್ರ್ಯಗಳಿಲ್ಲದಿದ್ದರೆ ಅವರು ವಿದ್ಯಾರ್ಥಿಗಳ ಆದರ-ಗೌರವ ಹೇಗೆ ಸಂಪಾದಿಸಲು ಸಾಧ್ಯ? ಹೀಗಾದರೆ ವಿದ್ಯಾರ್ಥಿಗಳಿಂದ ಉತ್ತಮ ಗುಣಗಳನ್ನು ಹೇಗೆ ಅಪೇಕ್ಷಿಸಲು ಸಾಧ್ಯ? ಶಿಕ್ಷಕರಲ್ಲಿಯ ನೈತಿಕ ಪತನಕ್ಕೆ ಅನೇಕ ಕಾರಣಗಳಿವೆ. ಅವರ ಪಗಾರ ಆಕರ್ಷಕವಾಗಿಲ್ಲವಾದ್ದರಿಂದ ಪ್ರತಿಭಾವಂತರು ಶಿಕ್ಷಕರಾಗಲು ಹಿಂಜರಿಯುತ್ತಾರೆ. ಅದೂ ಅಲ್ಲದೆ ಈಗಿನ ಕಾಲದಲ್ಲಿ ಶಿಕ್ಷಕರಿಗೆ ಸಮಾಜದಲ್ಲಿ ಗೌರವ ಸ್ಥಾನವೂ ಇಲ್ಲ. ಪೂರ್ವದಲ್ಲಿ ಶಿಕ್ಷಕರ ಪಗಾರ ಕಡಿಮೆಯಿದ್ದರೂ ಅವರಿಗೆ ಗೌರವ ದೊರೆಯುತ್ತಿತ್ತಾದ್ದರಿಂದ ಆದರ್ಶವಾದಿಗಳು ಈ ಉದ್ಯೋಗವನ್ನೇ ಸ್ವೀಕರಿಸುತ್ತಿದ್ದರು.

ವಿದ್ಯಾರ್ಥಿಗಳ ಸಂಖ್ಯೆ ಬಹಳಷ್ಟು ಬೆಳೆದು ವಿದ್ಯಾರ್ಥಿಗಳನ್ನು ನಿಯಂತ್ರಿಸಲು ದುಸ್ಸಾಧ್ಯವಾಗಿದೆ. ಅದೂ ಅಲ್ಲದೆ ಬಹಳ ವಯಸ್ಸಾದವರು ಕಾಲೇಜುಗಳಿಗೆ ಸೇರುತ್ತಾರೆ. ಹೆಚ್ಚಿನ ವಯಸ್ಸು ವಿದ್ಯಾರ್ಜನೆಗೆ ಅನಾನುಕೂಲ ಅಂಶ. ಈ ವಯಸ್ಸಿನ ಯುವಕರಲ್ಲಿ ಆದರ್ಶದ ಪ್ರಜ್ಞೆಯಿರುವುದು ಕ್ವಚಿತವಾದ್ದರಿಂದ ಬಹು ಸುಲಭವಾಗಿ ಕೆಟ್ಟ ಮಾರ್ಗಕ್ಕೆ ತೊಡಗುತ್ತಾರೆ.

ಮನೆಗಳಲ್ಲಿ ತಂದೆ ತಾಯಿಗಳು ನೈತಿಕ ವಾತಾವರಣವನ್ನು ನಿರ್ಮಿಸುವುದಿಲ್ಲ. ಹಳೆಯ ಕಾಲದಲ್ಲಿ ಯಾವುದೇ ವಿದ್ಯಾರ್ಥಿಯನ್ನು ಕಾಲೇಜು ಅಥವಾ ವಿಶ್ವವಿದ್ಯಾಲಯದಿಂದ ಕಿತ್ತು ಹಾಕಿದರೆ ಅವನು ಈ ಅವಮಾನ ಭರಿಸಲಾರದೆ ಆತ್ಮಹತ್ಯೆಗೇ ಪ್ರಯತ್ನ ಮಾಡುತ್ತಿದ್ದ. ಆದರೆ ಈಗಿನ ಸ್ಥಿತಿ ಬೇರೆಯದಾಗಿದೆ. ಇಂತಹ ಸನ್ನಿವೇಶಗಳಲ್ಲಿ ತಂದೆ–ತಾಯಿಗಳು ವಿದ್ಯಾರ್ಥಿಯ ಪರವಾಗಿ ನ್ಯಾಯಾಲಯಗಳನ್ನು ಆಶ್ರಯ ಕೋರುವುದೋ ಅಥವಾ ಉಚ್ಚ ಅಧಿಕಾರಿಗಳಲ್ಲಿ ದೂರು ಕೊಡುವುದೋ ಮಾಡುತ್ತಾರೆ. ಹೀಗಾಗಿ ತಂದೆ-ತಾಯಿಗಳಿಂದ ವಿದ್ಯಾರ್ಥಿಯ ಅನೈತಿಕ ವರ್ತನೆಗೆ ಬೆಂಬಲ ದೊರೆಯುತ್ತದೆ.

ಆದರೆ ವಿದ್ಯಾರ್ಥಿಗಳಿಗೆ ತಮ್ಮ ಕುಂದು ಕೊರತೆಗಳನ್ನು ನಿವಾರಿಸುವ ಭರವಸೆ ಕೊಟ್ಟು, ಇದಕ್ಕಾಗಿ ಒಂದು ಮಾರ್ಗ ಕಂಡು ಹಿಡಿದರೆ ಅನೇಕ ಸಮಸ್ಯೆಗಳು ಬಗೆಹರಿಯುತ್ತವೆ.

ಈ ಸಮಸ್ಯೆ ನಿವಾರಣೆಯಲ್ಲಿ ಪ್ರಾಧ್ಯಾಪಕರ ಪಾತ್ರವೂ ಹಿರಿದು. ಅವರಲ್ಲಿ ಅನೇಕರು ಹೊಸಬರು. ಶಿಕ್ಷಕರ ವೃತ್ತಿಗಾಗಿ ಬೇಕಾದ ತರಬೇತಿ ಅವರಿಗೆ ಲಭ್ಯವಾಗಿರುವುದಿಲ್ಲ. ವಿದ್ಯಾರ್ಥಿಗಳ ಮನಸ್ಸನ್ನು ಅರಿತು ಅವರಿಗೆ ತಕ್ಕಂತೆ ವರ್ತಿಸುವ ಪ್ರವೃತ್ತಿ ಪ್ರಾಧ್ಯಾಪಕರಲ್ಲಿ ಕಡಿಮೆ. ಹೀಗಾಗಿ ಅವರು ವಿದ್ಯಾರ್ಥಿಗಳ ಗೌರವ ಸಂಪಾದಿಸುವುದಿಲ್ಲ. ಇದನ್ನು ಪ್ರಾಧ್ಯಾಪಕರು ಗಮನಿಸಿ ಸೂಕ್ತ ಪರಿಹಾರಕ್ಕೆ ಶ್ರಮಿಸಬೇಕು.

ಉದ್ಯೋಗಗಳು ದೊರೆಯದ ಕಾರಣ ಕಾಲಹರಣ ಮಾಡುವುದಕ್ಕಿಂತ ಕಾಲೇಜು ಮೇಲು ಎಂಬ ಭಾವನೆಯಿಂದ ಕಾಲೇಜು ಸೇರುವವರಿಗೆ ವಿದ್ಯಾರ್ಜನೆಯಲ್ಲಿ ಶ್ರದ್ಧೆಯಿರುವುದಿಲ್ಲ. ಅವರಲ್ಲಿ ನಿರಾಶಾ ಮನೋವೃತ್ತಿ ಬೆಳೆದು ಬಂದಿರುತ್ತದೆ. ತಮ್ಮ ಸುತ್ತಿರುವ ಎಲ್ಲವುಗಳ ಬಗ್ಗೆ ಟೀಕಿಸುವ ಪ್ರವೃತ್ತಿ ಅವರಲ್ಲಿ ಬೆಳೆದು ಬಂದಿರುತ್ತದೆ.

ಸ್ವಾತಂತ್ರ್ಯ ನಂತರ ನಮ್ಮ ಸಮಾಜದಲ್ಲಿ ನೈತಿಕ ಪತನ ಪ್ರಾರಂಭವಾಗಿದೆ. ಲಂಚಬಡಕರಾದ ಅಧಿಕಾರಿಗಳು, ಲಾಭಬಡಕ ವ್ಯಾಪಾರಸ್ಥರು, ಸ್ವಾರ್ಥ ಹಿತಸಾಧಕ ರಾಜಕಾರಣಿಗಳು, ತುಂಬಿರುವ ನಮ್ಮ ಸಮಾಜದಲ್ಲಿ ಮೌಲ್ಯಗಳು ಗಾಳಿಗೆ ತೂರಲ್ಪಟ್ಟಿವೆ. ನೈತಿಕ ಮೌಲ್ಯಗಳಿಗೆ ಗೌರವವೇ ಇಲ್ಲ. ಪ್ರಭಾವ ಮುಖ್ಯವಾಗತೊಡಗಿದೆ; ಆದರ್ಶ ಮಣ್ಣು ಪಾಲಾಗುತ್ತಿದೆ."

ಶ್ರೀಯುತರು "ವಿದ್ಯಾರ್ಥಿ ಗಲಭೆ" ಯ ವಿಶ್ಲೇಷಣೆಯನ್ನು ಮಾಡಿದ ನಂತರ ಸಮಾರೋಪ ಮಾಡುತ್ತಾ ವಿದ್ಯಾರ್ಥಿ ಗಲಭೆಯನ್ನು ನಿವಾರಿಸಲು ಶಿಕ್ಷಕರ ಪಗಾರ ಹೆಚ್ಚಿಸಬೇಕು. ಉತ್ತಮ ಶಿಕ್ಷಕರನ್ನು ಆರಿಸಿ ನೌಕರಿ ಕೊಡಬೇಕು. ಶಿಕ್ಷಕರು ಆದರ್ಶ ಜೀವನ ನಡೆಸಲು ಅವಕಾಶ

ಮಾಡಿಕೊಡಬೇಕು. ವಿದ್ಯಾರ್ಥಿಗಳನ್ನು ಯೋಗ್ಯತೆಯ ಆಧಾರದ ಮೇಲೆ ಆರಿಸಿ ಪ್ರವೇಶ ಕೊಡಬೇಕು. ಇತರರಿಗೆ ಬೇರೆ ಬೇರೆ ವಿಧದ ವೃತ್ತಿ-ಪೋಷಕ ತರಬೇತಿಗಳಿಗೆ ಅವಕಾಶ ಮಾಡಿ ಕೊಡಬೇಕು. ನಾವು ಈ ನಿವಾರಣೋಪಾಯಗಳನ್ನು ತೆಗೆದುಕೊಳ್ಳದಿದ್ದರೆ ಇದೇ ವಿದ್ಯಾರ್ಥಿಗಳು ಮುಂದಿನ ನಾಯಕರೂ, ಆಡಳಿತಾಧಿಕಾರಿಗಳೂ ಆಗಿ ಅಶಿಸ್ತು, ರಾಷ್ಟ್ರದ ನಿತ್ಯಕರ್ಮವಾಗುತ್ತದೆ. ಭಾರತವೂ ಇಂಡೋನೇಶಿಯದಂತೆ ಆಗುತ್ತದೆ. ಆದ್ದರಿಂದ ಭಾರತದಲ್ಲಿ ಪ್ರಜಾಪ್ರಭುತ್ವವು ಸುಭದ್ರವಾಗಬೇಕಾದರೆ ಈ ಸಮಸ್ಯೆಯ ಪರಿಹಾರವೂ ಮುಖ್ಯ.



# ಗಾದೆಗಳ ಅಂತರಂಗ

**೧) ಶೆಟ್ಟೀ ಗೋಣಿ ಬರಿದು—**

ಅನೇಕ ವ್ಯಾಪಾರಿಗಳು ತಮ್ಮ ವ್ಯಾಪಾರದ ಸರಕುಗಳನ್ನು ಗೋಣಿ ಚೀಲದಲ್ಲಿ ತುಂಬಿಕೊಂಡು, ಕುದುರೆಯ ಸವಾರರಾಗಿ ಹೊರಟಿದ್ದರು. ಸುಂಕದ ಕಟ್ಟೆ ಸಮೀಪಿಸಿದಾಗ, ಸುಂಕವನ್ನು ತಪ್ಪಿಸುವುದರ ಸಲುವಾಗಿ ಒಬ್ಬ ಚತುರ ವ್ಯಾಪಾರಿ ತನ್ನ ಗೋಣಿ ಚೀಲವನ್ನು ಇನ್ನೊಬ್ಬನ ಕುದುರೆಯ ಮೇಲೆ ಹೇರಿದನು. ಸುಂಕದ ಕಟ್ಟೆಯನ್ನು ದಾಟಿದ ಮೇಲೆ ತನ್ನ ಗೋಣಿ ಚೀಲವನ್ನು ಬೇಡಲು ಹೋದಾಗ, ಆ ಇನ್ನೊಬ್ಬ ವ್ಯಾಪಾರಿ ಗೋಣಿ ಚೀಲವನ್ನು ಕೊಡಲಿಲ್ಲ. ಇಷ್ಟೇ ಅಲ್ಲ ಆ ಗೋಣಿ ಚೀಲ ತನ್ನದೇ ಎಂದು ಹೇಳಿ ಇದಕ್ಕೆ ಸಾಕ್ಷಿ ಸುಂಕದ ಕಟ್ಟೆ ರಿಸೀಟು ಎಂದನು. ಚತುರ ವ್ಯಾಪಾರಿ ಪೆಚ್ಚು ಮೋರೆ ಮಾಡಿಕೊಂಡು ಮನೆಗೆ ಬಂದನಂತೆ.

**೨) ಬಂದದ್ದಲ್ಲ, ಬಾರಿಸಿದ್ದಲ್ಲ—**

ಒಬ್ಬ ಬ್ರಾಹ್ಮಣ ಹುಡುಗ ಕೆಟ್ಟ ಸಂಗತಿಯಿಂದ ತುಡುಗು ಮಾಡಲು ಪ್ರಾರಂಭಿಸಿದನು. ಪ್ರತಿನಿತ್ಯದಂತೆ ಒಂದು ದಿವಸ ತುಡುಗು ಮಾಡಲಿಕ್ಕೆ ಕನ್ನ ಹಾಕಿದನು. ಆ ಮನೆಯೂ ಬ್ರಾಹ್ಮಣರದು. ದ್ವಾದಶಿಯ ದಿವಸ. ದೇವರನ್ನೇ ಕದಿಯಬೇಕು ಎಂದು ಇಚ್ಛೆ. ಆದರೆ ಆ ದೇವರನ್ನು ಮುಟ್ಟುವುದು ಹೇಗೆ. ಪೂರ್ವ ಸಂಸ್ಕಾರದಂತೆ, ಅಲ್ಲಿಯೇ ಜಳಕ ಮಾಡಿ, ಮಡಿ ಉಟ್ಟು ಪೂಜೆ ಮಾಡಿ, ಸಿದ್ಧವಿದ್ದ ಅಡಿಗೆಯ ನೈವೇದ್ಯ ತೋರಿಸಿ, ಆರತಿ ಮಾಡುವಾಗ ಮೈಮರೆತು ಗಂಟೆಯನ್ನು ಬಾರಿಸಿಬಿಟ್ಟನಂತೆ. ಮನೆಯವರು ಎಚ್ಚರಾಗಿ ಬಂದು ಚೆನ್ನಾಗಿ ತುಡುಗನನ್ನು ಹೊಡೆದರಂತೆ. ಆಗ ಆ ತುಡುಗ ಪಶ್ಚಾತ್ತಾಪದಿಂದ ನುಡಿದ "ಬಂದದ್ದಲ್ಲ, ಬಾರಿಸಿದ್ದಲ್ಲ". ಅಂದರೆ ತಾನು ಬ್ರಾಹ್ಮಣನಾಗಿ ತುಡುಗಿಗೆ ಬರಬಾರದಾಗಿತ್ತು; ಬಂದ ಮೇಲೆ ಗಂಟೆಯನ್ನು ಬಾರಿಸಬಾರದಾಗಿತ್ತು.

ಸಂ: **ಡಾ|| ವಾ. ದ. ಬೇಂದ್ರೆ**

## ‘ಕಾರ್ಮಿಕರ ಪ್ರಥಮ ರಾಜ್ಯ ಸ್ಥಾಪಕ’

# ವಿ. ಐ. ಲೆನಿನ್

### ‘ ಮಾನವರಲ್ಲಿ ಅತಿಮಾನವ ’

ಅವರ ವ್ಯಕ್ತಿತ್ವದ ಪರಿಚಯ ಮಾಡಿಕೊಡುವುದು ಬಹಳ ಕಷ್ಟವಾದುದು. ಅವರು ತಮ್ಮ ಮಾತಿನಲ್ಲಿ ಎಷ್ಟು ನಿರಾಡಂಬರರೋ ಅಷ್ಟೇ ನಿರಾಡಂಬರತೆ ಅವರ ಜೀವನದಲ್ಲಿ ರಕ್ತಗತವಾಗಿತ್ತು.



ಅವರ ವೀರ ಕೃತಿಗಳಿಗೆ ಬಾಹ್ಯದ ಮೆರಗಿರಲಿಲ್ಲ. ಅದು ಪ್ರಾಮಾಣಿಕ ಹಾಗೂ ಪ್ರತಿಭಾವಂತ ಕ್ರಾಂತಿಕಾರಿಯ ಪವಿತ್ರವಾದ ನಿಸ್ವಾರ್ಥನಮ್ರ ವೀರಕೃತಿ. ಇಂತಹ ವ್ಯಕ್ತಿಗಳು ಅತಿ ವಿರಳ. ಅವರಿಗೆ ಸಾಮಾಜಿಕ ನ್ಯಾಯವು ಈ ಲೋಕದಲ್ಲಿ ಸ್ಥಾಪಿಸಲ್ಪಡುವುದೆಂಬ ದೃಢ ವಿಶ್ವಾಸವಿತ್ತು. ತಮ್ಮ ಎಲ್ಲ ಲೌಕಿಕ ಸಂತೋಷ – ಆನಂದಗಳನ್ನು ಮಾನವ ಕಲ್ಯಾಣಕ್ಕೆ ತ್ಯಾಗ ಮಾಡಿದ ವೀರ ಶ್ರೇಷ್ಠ ಲೆನಿನ್ ......ಅವರು ವಾಙ್ಮಿಗಳಾಗಿ ಬೀರುತ್ತಿದ್ದ ಪ್ರಭಾವ ಅವರ್ಣನೀಯ. ಅವರು ಬಹಳ ಕಡಿಮೆ ಮಾತಾಡಿದರೂ ಅತಿ ಹೆಚ್ಚಿನ ಪರಿಣಾಮವನ್ನು ಮೂಡಿಸುತ್ತಿದ್ದರು. ಅವರನ್ನು ಕೇಳಿದವರು “ ಅಬ್ಬಾ ! ಏನು ಮಹತ್ತರ ಮಾತು !....” ಎಂದು ಬೆರಗಾಗುತ್ತಿದ್ದರು.

× × ÷

ಸೋರ್‌ಮಾವೊ ಕಾರ್ಖಾನೆಯ ಕಾರ್ಮಿಕ ಡ್ಮಿಟ್ರಿ ಪಾವಲೋರವರನ್ನು ಲೆನಿನ್‌ರ ಬಗ್ಗೆ ತಮ್ಮ ಅಭಿಪ್ರಾಯವನ್ನು ಕೇಳಿದೆ.

“ಸರಳತೆ. ಅವರು ಸತ್ಯದಷ್ಟು ಸರಳರು.” ಎಂದು ಉತ್ತರ ಬಂತು.

## ರಷ್ಯನ್ ಸಾಹಿತ್ಯ ಜನಕ
## 'ಮಾಕ್ಸಿಂಗಾರ್ಕಿ' ರವರ
## ಸವಿನೆನಪುಗಳು

× × ×

ಯಾರ ವ್ಯಕ್ತಿತ್ವವನ್ನಾದರೂ ಅರಿಯಬೇಕಾದರೆ ಆ ವ್ಯಕ್ತಿಯಲ್ಲಿ ಕೆಲಸ ಮಾಡುವ ನೌಕರನನ್ನು ಕೇಳಬೇಕು. ಅಂತೆಯೇ ಲೆನಿನ್‌ರ ಡ್ರೈವರ್ ಗಿಲ್‌ನನ್ನು ಒಮ್ಮೆ ಇದೇ ವಿಷಯವಾಗಿ ಕೇಳಿದೆ. "ಲೆನಿನ್ ಒಬ್ಬ ವಿಶಿಷ್ಟ ವ್ಯಕ್ತಿ. ಅವರಂತೆ ಮತ್ತೊಬ್ಬರಿಲ್ಲ. ಒಮ್ಮೆ ಮ್ಯಾಸ್ನಿಟ್ಸ್ಕಿ ವೀಧಿಯಲ್ಲಿ ವಾಹನವನ್ನು ತೆಗೆದುಕೊಂಡು ಹೋಗಬೇಕಾಗಿತ್ತು. ಅದು ಬಹಳ ವಾಹನ ಚಲನ, ಜನಸಂದಣಿಯ ವೀಧಿ. ಯಾರಿಗೆ ಢಿಕ್ಕಿ ಹೊಡೆದೇನೋ ಯಾರ ಮೇಲೆ ಕಾರನ್ನು ಹಾಯಿಸುತ್ತೇನೋ ಎಂದು ಹೆದರಿ ಹೆದರಿ 'ಹಾರ್ನ್' ಬಾರಿಸತೊಡಗಿದ್ದೆ. ನನ್ನ ಗಮನಕ್ಕೆ ಬಾರದಂತೆಯೇ ಲೆನಿನ್ ಹಿಂದಿನ ಬಾಗಿಲ ತೆಗೆದು ನನ್ನ ಬಳಿಗೆ ಇಳಿದು ಬಂದು 'ಗಿಲ್! ಇಷ್ಟು ಗಾಬರಿಗೊಳ್ಳಬೇಡ. ಎಲ್ಲರೂ ವಾಹನ ನಡೆಸಿದಂತೆ ಸಾವಕಾಶವಾಗಿ ನಡೆಸು' ಎಂದು ಹೇಳಿ, ಮತ್ತೆ ಕಾರ್ ಹತ್ತಿದರು. ನನ್ನ ಜೀವನದಲ್ಲೇ ನಾನು ಇಂತಹ ಮಾಲಕನನ್ನು ನೋಡಿರಲಿಲ್ಲ" ಎಂದ.

× ÷ ×

ಅವರ ನಗು ಸಾಂಕ್ರಾಮಿಕವಾಗಿತ್ತು. ಆ ಹೃದಯಾಂತರಾಳದಿಂದ ಚಿಮ್ಮಿ ಬರುತ್ತಿದ್ದ ನಗುವು ಅವರು ಸಮಾಜದಲ್ಲಿ ಕಂಡ ಮಾನವರ ದಡ್ಡತನ, ಕುಚೇಷ್ಟೆ – ಕುಯುಕ್ತಿಗಳು ಮೋಸ – ವಂಚನೆಗಳನ್ನು ಚೆನ್ನಾಗಿ ಅರಿತು, ಅವುಗಳಿಗೆ ಪ್ರತಿಕ್ರಿಯೆಯಂತೆ ತಮ್ಮ ಮುಗ್ಧ ಮನಸಿನ ಸರಳ ಹೃದಯದ ನಗುವನ್ನು ಪ್ರತಿಧ್ವನಿಸುವುದರಲ್ಲಿ ಸಂತಸ ಪಡೆಯುತ್ತಿರುವುದನ್ನು ಪ್ರಕಟಿಸುತ್ತಿತ್ತು.

ಗಿಯೋವನ್ನಿ ಸ್ಪಾಡರೋ ಎಂಬ ಮೀನುಗಾರ ಒಮ್ಮೆ ಹೇಳಿದ– "ಪ್ರಾಮಾಣಿಕ ಮಾನವನು ಮಾತ್ರ ಹೀಗೆ ನಗಬಲ್ಲ" ಎಂದು.

× ÷ ×

ಅವರಿಗೆ ಜೀವನವೆಂದರೆ ಬಹಳ ಪ್ರೀತಿ; ಆದರೆ ಅದರಲ್ಲಿಯ ಹೊಲಸನ್ನು ಕಂಡರೆ ಬಹಳ ನಿಕೃಷ್ಟವಾಗಿ ಅದನ್ನು ದ್ವೇಷಿಸುತ್ತಿದ್ದರು. ಅವರ ಪ್ರತಿಯೊಂದು ಕೃತಿಯಲ್ಲಿ ಯೌವನದ ಲವಲವಿಕೆ ತುಂಬಿತುಳುಕುತ್ತಿತ್ತು. ಅವರಿಗೆ ಅವಿರತವಾಗಿ, ಅವಿಶ್ರಾಂತವಾಗಿ ದುಡಿಯಲು ಇದ್ದ ದಿವ್ಯಶಕ್ತಿಯನ್ನು ನೋಡಿ ನಾನು ಬೆರಗಾಗುತ್ತಿದ್ದೆ. ಅವರ ಮುಖ ಬಿಂಬದಲ್ಲಿ ಪ್ರತಿಭೆಯ ಕಾಂತಿ ಹೊಳೆಯುತ್ತಿತ್ತು. ಜೀವನದ ದುಃಖ–ದುಮ್ಮಾನಗಳು, ಮಾನವನ ಕಲುಷತ್ವಗಳ ವಿರುದ್ಧ ಹೋರಾಡುವ ಪ್ರತಿಜ್ಞೆ ಆ ತೇಜಸ್ಸಿನಲ್ಲಿ ಅಡಗಿತ್ತು. ಅವರ ಕಣ್ಣುಗಳಲ್ಲಿರುವ ಅಂತಃಸತ್ವ ಹೊಳೆದರೆ, ಅವರ ಮಾತುಗಳಲ್ಲಿಯ ಶಕ್ತಿ, ಅವುಗಳು ಆ ಪವಿತ್ರ ಹೃದಯಾಲಯದಿಂದ ಹೊರಬರುವ ಸತ್ಯದ ಸತ್ವವನ್ನು ಹೊಂದಿರುತ್ತಿದ್ದವು.

× × ×

೧೯೧೯ರಲ್ಲಿ ರಷ್ಯಾ ಕ್ಷಾಮದ ದವಡೆಯಲ್ಲಿತ್ತು. ಆಗ ದೇಶದ ನಾನಾ ಕಡೆಗಳಿಂದ ಇವರ ಹಿತೈಷಿಗಳು, ಸೈನಿಕರು, ಕಾರ್ಮಿಕರು ಇವರಿಗೆ ಬಹುಮಾನಗಳನ್ನು, ವಿಶಿಷ್ಟ ತಿಂಡಿ–ತಿನಸುಗಳನ್ನು ಕಳುಹಿಸುತ್ತಿದ್ದರು. ಆಗ ಅವರು, "ರಾಜನಿಗೆ ಕಾಣಿಕೆಗಳು ಕಳುಹಿಸಿದಂತೆ ನನಗೆ ಉಡುಗೊರೆಗಳನ್ನು ಕಳುಹಿಸುತ್ತಿದ್ದಾರೆ. ಇದನ್ನು ನಿಲ್ಲಿಸುವುದು ಹೇಗೆಂದು ತಿಳಿಯದಾಗಿದೆ. ಈ ತಿಂಡಿ–ತಿನಸು, ಕಾಣಿಕೆಗಳನ್ನು ನಿರಾಕರಿಸಿದರೆ, ಅವರ ಮನಸ್ಸನ್ನು ನೋಯಿಸಿದಂತಾಗುತ್ತದೆ. ಆದರೆ ನನ್ನ ಸುತ್ತು–ಮುತ್ತಲಿನ ಜನ ಕ್ಷಾಮದ ದವಡೆಯಲ್ಲಿದ್ದಾರೆ"

ಎಂದು ನೊಂದುಕೊಂಡರು. ಈ ಊಟವನ್ನು ಕ್ಷಾಮಪೀಡಿತರಿಗೆ ಹಂಚುತ್ತಿದ್ದರು.

× × ×

ನಿರಾಡಂಬರವಾದ ಲೆನಿನ್, ತಂಬಾಕು ಸೇವನೆಯಾಗಲೀ, ಮದ್ಯಪಾನದಲ್ಲಾಗಲೀ ಚಟ ಹೊಂದಿರಲಿಲ್ಲ. ರಾತ್ರಿ-ಹಗಲೆನ್ನದೆ ದುಡಿಯು ತ್ತಿದ್ದರು; ತಮ್ಮ ಬಗ್ಗೆ ಏನೇನೂ ಕಾಳಜಿ ಮಾಡುತ್ತಿರಲಿಲ್ಲ; ಅವರ ಎಲ್ಲ ಶ್ರದ್ಧೆ ತಮ್ಮ ಪ್ರಜೆಗಳ ಹಿತವೇ ಆಗಿತ್ತು.

× × ×

ಒಮ್ಮೆ ನಾನು ಲೆನಿನ್‌ರನ್ನು ಒಂದು ಶಸ್ತ್ರಾಸ್ತ್ರ ಕಾರ್ಖಾನೆಗೆ ಕರೆದೊಯ್ದೆ. ಆದರೆ ಕಾರ್ಖಾನೆಯ ಅಧಿಕಾರಿಗಳಿಗೆ ಲೆನಿನ್‌ರನ್ನು ಕರೆತರುತ್ತೇನೆಂದು ಹೇಳಿರಲಿಲ್ಲ. ಅವರು ಬಂದೂಕುಗಳ ಹೊಸ ಹೊಸ ರಚನೆಗಳ ಬಗ್ಗೆ ಬಹಳಷ್ಟು ಪ್ರಶ್ನೆಗಳನ್ನು ಕೇಳಿದರು. ಅವರು ಯಾರೋ ಶಸ್ತ್ರಾಸ್ತ್ರ ಪ್ರಾಧ್ಯಾಪಕನೋ, ವಿಜ್ಞಾನಿಯೋ ಇರಬೇಕೆಂದು ಮಾಡಿದ್ದರು. ಕೊನೆಗೆ ಅವರು ಲೆನಿನ್ ಎಂದು ನಾನು ಪ್ರಕಟಿಸಿದಾಗ ಅದನ್ನು ಅವರಾರೂ ನಂಬಲಿಲ್ಲ— "ಆ! ಲೆನಿನ್! ...... ಅವರಿಗೆ ಈ ಕ್ಷೇತ್ರದಲ್ಲೂ ಇಷ್ಟು ಜ್ಞಾನವಿದೆಯೇ!" ಎಂದು ಬೆರಳು ಕಚ್ಚಿದರು.

× × ×

ನಿಮ್ಮೆಲ್ಲರ ಸತತ ಸ್ಮರಣೆಗೆ ಇವರಿಗಿಂತ ಯೋಗ್ಯರು ಬೇರಾರೂ ಇಲ್ಲ. ಇವರ ಜ್ಞಾನದ ವಾರಸುದಾರರು ಇನ್ನೂ ಜೀವಂತವಿದ್ದಾರೆ. ಇವರು ಎಲ್ಲರಿಗಿಂತ ಹೆಚ್ಚಾಗಿ, ಜಗತ್ತಿನ ಎಲ್ಲೆಡೆಗಳಲ್ಲಿ, ಎಲ್ಲ ಕಾಲದಲ್ಲಿ ಶ್ರಮಿಸುತ್ತಿದ್ದಾರೆ.

ರಷ್ಯಾದ ಅಕ್ಟೋಬರ್ ಮಹಾಕ್ರಾಂತಿಯ
ಸುವರ್ಣ ಮಹೋತ್ಸವದ ನೆನಪಿಗಾಗಿ–
ಅದರ ಶಿಲ್ಪಿಯ ಸ್ಮರಣೆ.



[ಸೋವಿಯತ್ ರಷ್ಯಾದಲ್ಲಿ ಅಕ್ಟೋಬರ್ ಮಹಾಕ್ರಾಂತಿ ನಡೆದು ಈಗ ೫೦ ವರುಷಗಳಾದವು. ಇದೇ ನವ್ಹಂಬರ್ ೭ರಂದು 'ಅಕ್ಟೋಬರ್ ಕ್ರಾಂತಿಯ' ಸುವರ್ಣ ಮಹೋತ್ಸವವನ್ನು ರಷ್ಯಾ ಜನತೆ ಬಹಳ ಸಂಭ್ರಮದಿಂದ ಆಚರಿಸುತ್ತಿದ್ದಾರೆ. ಈ ಸಂದರ್ಭದಲ್ಲಿ ಜಾಗತಿಕ ಕ್ರಾಂತಿಗಳಲ್ಲಿ ಅತಿ ಮಹತ್ವದ ಕ್ರಾಂತಿಯಾದ ಅಕ್ಟೋಬರ್ ಕ್ರಾಂತಿಯ ಬಗ್ಗೆ ಈ ವಿಶೇಷ ಲೇಖನ ಬರೆಯಲಾಗಿದೆ. ಈ ಮಹಾಕ್ರಾಂತಿ ಯಾವ ವಿಧದ ಪರಿಣಾಮವನ್ನು ಬೀರಿತು, ಜಾಗತಿಕ ಪ್ರಗತಿಯ ದೃಷ್ಟಿಯಿಂದ ಇದರ ಮಹತ್ವವೇನು ಎಂಬ ಅಂಶಗಳನ್ನು ಇಲ್ಲಿ ವಿವೇಚಿಸಲಾಗಿದೆ.] —ಸಂ.

"ರಷ್ಯನ್ ಕ್ರಾಂತಿಯು ಜಾಗತಿಕ ಚರಿತ್ರೆಯಲ್ಲಿ ಬಹಳ ಮಹತ್ವಪೂರ್ಣ ಘಟನೆ. ಈ ವಿಧದ ಪ್ರಥಮ ಕ್ರಾಂತಿ ಇದೆನಿಸಿಕೊಂಡರೂ ಇದು ಇಂತಹ ಒಂದೇ ಕ್ರಾಂತಿಯಾಗಿ ಉಳಿಯಲಾರದು. ಇದರಿಂದ ಸ್ಫೂರ್ತಿಗೊಂಡ ಅನೇಕ ದೇಶಗಳಿಗೆ ಇದೊಂದು ಮಾದರಿ." ಎಂದು ದಿ. ಪಂಡಿತ ಜವಾಹರಲಾಲ್ ನೆಹರೂರವರು ರಷ್ಯನ್ ಕ್ರಾಂತಿಯ ಬಗ್ಗೆ ಹೇಳಿದ್ದಾರೆ. ಈ ಮಾತನ್ನು ಅವರು ೧೯೩೩ರಲ್ಲಿ ಹೇಳಿದ್ದರೂ ಜಾಗತಿಕ ಚರಿತ್ರೆಯ ಪುಟಗಳನ್ನು ತಿರಿವಿದರೆ, ಜಗತ್ತಿನ ಅನೇಕ ರಾಷ್ಟ್ರಗಳಿಗೆ ರಷ್ಯ ಹೇಗೆ ಸ್ಫೂರ್ತಿ ಕೊಟ್ಟಿತು; ಈ ಕಾರ್ಮಿಕರ ಪ್ರಥಮ ರಾಷ್ಟ್ರ ಹೇಗೆ ಅನೇಕ ಕಾರ್ಮಿಕ ರಾಷ್ಟ್ರಗಳ ನಿರ್ಮಾಣಕ್ಕೆ ನಾಂದಿಯಾಯಿತು; ಈ ಕ್ರಾಂತಿಯ ಮೂಲಕ ಜಗತ್ತಿನಲ್ಲಿ ತನ್ನ ಪ್ರಥಮ ಹೆಜ್ಜೆಯನ್ನಿಟ್ಟ

ಸಮಾಜವಾದ ಹೇಗೆ ಜಗತ್ತಿನ ಬಹು ಭಾಗವನ್ನು ಈಗ ಆಕ್ರಮಿಸಿದೆ ಎಂಬ ವಿಷಯಗಳ ಬಗ್ಗೆ ಅರಿವಾಗುತ್ತದೆ.

ಜಗತ್ತಿನ ಪ್ರ ಥ ಮ ಸಮಾಜವಾದೀ ರಾಷ್ಟ್ರವಾದ ಸೋವಿಯತ್ ರಷ್ಯಾದ ಸಂಸ್ಥಾಪಕರಾದ ದಿ. ವಿ. ಐ. ಲೆನಿನ್‌ರವರ ಮಾತಿನಲ್ಲಿ "ರಷ್ಯನ್ ಕ್ರಾಂತಿಯು ಸಮಸ್ತ ಜಗತ್ತಿನಲ್ಲಿ ಸಮಾಜವಾದದ ಸ್ಥಾಪನೆಗೆ ನಾಂದಿಯಾಗಿದೆ. ಇದು ಬಂಡವಾಳಶಾಹಿಗಳ ಅಂತ್ಯ ಕಾಲದ ಸೂಚನೆಯನ್ನು ಕೊಟ್ಟಿದೆ !

ದಲ್ಲಿ ಬರೆದಿರುವುದನ್ನು ಪರಿಶೀಲಿಸಿದರೆ ಅಂದಿನ ರಷ್ಯಾದಲ್ಲಿಯ ಚಿಂತಾಜನಕ ಪರಿಸ್ಥಿತಿಯ ಪರಿಚಯವೂ ಆಗುತ್ತದಲ್ಲದೆ ಈ ಮಹಾ ಕಾರ್ಯಕ್ಕೆ ಲೆನಿನ್ ಹೇಗೆ ಕಾರಣೀಭೂತ ಶಕ್ತಿ ಎಂಬುದೂ ತಿಳಿಯುತ್ತದೆ. ಆ ಸ್ಥಿತಿಯಿಂದ ಅಕ್ಟೋಬರ್ ಕ್ರಾಂತಿಯ ನಂತರ ರಷ್ಯಾ ದೇಶವು ಇಂದಿನ ಸಂಪದ್ಭರಿತ, ಪ್ರಗತಿಪರ ಸ್ಥಿತಿಗೆ ಬಂದಿದೆ. ಜಗತ್ತಿನ ಮಹಾಶಕ್ತಿಯಾಗಿ ರೂಪುಗೊಂಡಿದೆ. ಜಗತ್ತನ್ನು ಬಂಡವಾಳಶಾಹೀ ಸಮಾಜವಾದೀ ಎಂಬ ಎರಡು ಬಣಗಳಾಗಿ ಭಾಗಿ




'ರಷ್ಯಾದಲ್ಲಿ ಅಂದು ನೆಲಗೊಂಡಿದ್ದ ಚಾರಿತ್ರಿಕ ಹಾಗೂ ಆರ್ಥಿಕ ಸ್ಥಿತಿಗತಿಗಳು, ಮೊದಲನೆ ಮಹಾಯುದ್ಧದಿಂದುಂಟಾಗಿದ್ದ ಸಾವು-ನೋವು ಹಾಗೂ ಸ್ಥಿತ್ಯಂತರಗಳನ್ನು ಉಪಯೋಗಿಸಿಕೊಂಡ ಲೆನಿನ್‌ರ ಪ್ರತಿಭೆ-ಅಸಮಾನ ನಾಯಕತ್ವ ಇವೇ ರಷ್ಯನ್ ಕ್ರಾಂತಿಗೆ ಕಾರಣವೆನ್ನಬಹುದು' ಎಂದು ದಿ. ನೆ ಹ ರೂ ರ ವ ರು ತಮ್ಮ "ಗ್ಲಿಂಪ್ಸಸ್ ಆಫ್ ವರ್ಲ್ಡ್ ಹಿಸ್ಟರಿ" ಪುಸ್ತಕ

ಸಿದ ಈ ಮಹಾಕ್ರಾಂತಿಯ ಪರಿಣಾಮದಿಂದ ಇಂದು ಸಮಾಜವಾದದ ನಾಯಕ ರಾಷ್ಟ್ರವಾದ ರಷ್ಯಾ ತಾನು ಬಂಡವಾಳಶಾಹೀ ರಾಷ್ಟ್ರಗಳನ್ನೂ ಮೀರಿಸಬಲ್ಲದೆಂದು ತನ್ನ ಪ್ರಗತಿಯಿಂದ ತೋರಿಸಿಕೊಟ್ಟಿದೆ. ಇಂತಹ ಮಹತ್ವಪೂರ್ಣ ಅಕ್ಟೋಬರ್ ಮಹಾಕ್ರಾಂತಿಯು ಜಗತ್ತಿನ ನಾನಾ ರಾಷ್ಟ್ರಗಳ ಮೇಲೆ ಮಾಡಿದ ಪರಿಣಾಮದ ಸಂಕ್ಷಿಪ್ತ ವಿವೇಚನೆಯನ್ನು ಮಾಡೋಣ.

ಆಕ್ಟೋಬರ ಮಹಾಕ್ರಾಂತಿಯು ಜಗತ್ತಿನ ಎಲ್ಲ ರಾಷ್ಟ್ರಗಳ ಕಾರ್ಮಿಕರಿಗೆ– ಶ್ರಮಿಕರಿಗೆ ಒಂದು ಉದಾಹರಣೆಯಾಯಿತು. ರಷ್ಯಾ ದೇಶದ ಇರುವಿಕೆಯು ಸಮಾಜವಾದ ರಚನೆಯ ಯಶಸ್ಸನ್ನು ನಿರೂಪಿಸಿ ಬೇರೆ ಬೇರೆ ರಾಷ್ಟ್ರಗಳ ಕಾರ್ಮಿಕರೂ ಸಮಾಜವಾದೀ ರಾಷ್ಟ್ರರಚನೆಗೆ ಶ್ರಮಿಸಲು ಆದರ್ಶ ನೀಡಿತು.

ಕ್ರಾಂತಿಯಾದ ಪ್ರಾರಂಭದಲ್ಲಿ ನವೋದಿತ ರಷ್ಯಾದ ಸಮಾಜವಾದೀ ಸರ್ಕಾರ ಅನೇಕಾನೇಕ ಸಮಸ್ಯೆಗಳನ್ನು ಎದುರಿಸಬೇಕಾಯಿತು. ಈ ಮಹಾಕ್ರಾಂತಿಗೆ ರಷ್ಯಾದ ಜನತೆಯನ್ನು ತಯಾರು ಮಾಡಿ ಕ್ರಾಂತಿಯನ್ನು ಯಶಸ್ವಿಯಾಗಿ ನಡೆಸುವ ಹವಣಿಕೆ ಹಾಗೂ ಸಾಧನೆ ಇದರ ಒಂದು ಹಂತವಾದರೆ, ಕ್ರಾಂತಿಯ ಪರಿಣಾಮದಿಂದ ಒದಗಿದ ಹೊಸ ವಾತಾವರಣದ, ಹೊಸ ಸಮಸ್ಯೆಗಳನ್ನು ಪರಿಹರಿಸುವುದು ಇನ್ನೊಂದು ಹಂತವಾಯಿತು. ಈ ಎರಡನೆಯ ಹಂತದಲ್ಲಿ ಒಂದನೆಯ ಸಮಸ್ಯೆ ರಾಷ್ಟ್ರದಲ್ಲೇ ನಡೆದ ಆಂತರಿಕ ಸಮಸ್ಯೆಗಳನ್ನು ಪರಿಹರಿಸುವುದು, ಎರಡನೆಯದು ಜಗತ್ತಿನ ಬಲಿಷ್ಠ ಬಂಡವಾಳಶಾಹೀ ರಾಷ್ಟ್ರಗಳಿಂದ ಬಂದ ಪ್ರತಿಭಟನೆಯನ್ನು ಎದುರಿಸುವುದು ಆಗಿತ್ತು. ಇದು ಒಂದು ಮನೆತನದಲ್ಲಿ ಸಮಸ್ಯಾ ಶಿಶು ಜನಿಸಿದಂತೆಯೇ ಆಗಿತ್ತು. ಸಮಸ್ಯಾ ಶಿಶುವನ್ನು ತಾಯಿ ಪೋಷಿಸಿದರೂ, ಮನೆ ಮಂದಿಯೆಲ್ಲಾ ಅದನ್ನು ಕಡೆಗಾಣಿಸುತ್ತಾರೆ. ನೆರೆಹೊರೆಯ ಜನ ಆ ಕೂಸನ್ನು ಸ್ವೀಕರಿಸಲು ನಿರಾಕರಿಸುತ್ತಾರೆ. ಹೀಗಾಗಿತ್ತು ರಷ್ಯಾದ ನವ್ಯ ಸಮಾಜವಾದೀ ರಾಷ್ಟ್ರ ಶಿಶುವಿನ ಜನನ.

ಆದರೆ ಜಗತ್ತಿನ ಬೇರೆ ರಾಷ್ಟ್ರಗಳ ಕಾರ್ಮಿಕರೆಲ್ಲರೂ ಈ ಹೊಸ ರಾಷ್ಟ್ರವನ್ನು ಸಂತೋಷದಿಂದ ಸ್ವಾಗತಿಸಿದರು. ರಷ್ಯಾದಲ್ಲಿಯ ಸಮಾಜವಾದೀ ರಾಷ್ಟ್ರವನ್ನು ಪೋಷಿಸುವುದು, ಅದಕ್ಕೆ ಸಹಾಯ ಮಾಡುವುದು ತಮ್ಮ ಪವಿತ್ರ ಕರ್ತವ್ಯವೆಂದೇ ಅವರು ಭಾವಿಸಿದರು. ಪೆಟ್ರೋಗ್ರಾಡ್ ಮತ್ತು ಮಾಸ್ಕೋಗಳಲ್ಲಿ ದಂಗೆ ಎದ್ದಾಗ ಹಂಗೇರೀಯ ಯುದ್ಧ ಕೈದಿಗಳು, ಚೀನೀ ಕಾರ್ಮಿಕರು, ಪೋಲೀಷ್ ಸೈನಿಕರು ದಂಗೆಯಲ್ಲಿ ಭಾಗವಹಿಸಿ ರಷ್ಯಾದ ಕ್ರಾಂತಿ ದಳಕ್ಕೆ ಸಹಕಾರ ಮಾಡಿದರು. ಪರದೇಶಗಳ ಬಂಡವಾಳಶಾಹೀ ರಾಷ್ಟ್ರಗಳು ರಷ್ಯಾ ದೇಶದಲ್ಲಿ ಸಮಾಜವಾದದ ಸ್ಥಾಪನೆಯನ್ನು ಎದುರಿಸಲು, ರಷ್ಯಾ ಸರ್ಕಾರಕ್ಕೆ ತೊಂದರೆ ಕೊಡಲು ಪ್ರಾರಂಭಿಸಿದರೆ ಆ ತೊಂದರೆ ಕೊಡಬಯಸಿದ ರಾಷ್ಟ್ರಗಳಲ್ಲಿಯ ಕಾರ್ಮಿಕರೇ ಪ್ರತಿಭಟನೆಯನ್ನು ಸಂಘಟಿಸಿ "ಸೋವಿಯತ್ ರಷ್ಯದಲ್ಲಿ ಹಸ್ತಕ್ಷೇಪ ಬೇಡ," ಎಂಬ ಘೋಷಣೆಗಳನ್ನು ಮಾಡಿದರು. ನಾನಾ ರಾಷ್ಟ್ರಗಳ ಕಾರ್ಮಿಕರು ರಷ್ಯಾದಲ್ಲಿಯ ಕ್ರಾಂತಿಯ ಯಶಸ್ಸು ಜಾಗತಿಕ ಬಂಡವಾಳ ಶಾಹಿಗಳ ಮೇಲೆ ಕಾರ್ಮಿಕರಿಗಾದ ಪ್ರಥಮ ಯಶಸ್ಸೆಂದು ಭಾವಿಸಿದರಲ್ಲದೆ ಜರ್ಮನಿ, ಹಂಗೇರಿ, ಜೆಕ್,

ಸ್ಲೋವ್ಯಾಕ್, ಬಲ್ಗೇರಿಯ, ಯುಗೋಸ್ಲಾವಿಯಾ, ಆಸ್ಟ್ರಿಯಾ, ಟರ್ಕಿ, ಪೋಲೆಂಡ್, ಚೈನಾ ಮುಂ. ದೇಶಗಳ ಯುದ್ಧ ಕೈದಿಗಳು ಆ ಅವಧಿಯಲ್ಲಿ ರಷ್ಯಾದಲ್ಲಿದ್ದುದರಿಂದ ಅವರೆಲ್ಲರೂ ಮಹಾಕ್ರಾಂತಿಯನ್ನು ಪ್ರೋತ್ಸಾಹಿಸಿ, ಕ್ರಾಂತಿಯ ನಂತರ ರಷ್ಯಾದಲ್ಲಿಯ ಆಂತರಿಕ ದಂಗೆ ಹಾಗೂ ಪ್ರಾದೇಶಿಕ ಸರಕಾರದೊಡನೆಯ ಹೋರಾಟಗಳಲ್ಲಿ ಕ್ರಾಂತಿದಳಕ್ಕೆ ಸಹಾಯ ಮಾಡಿದರು. ಇದು ರಷ್ಯಾದಲ್ಲಿ ನಡೆದ ಕ್ರಾಂತಿಗೆ ಜಾಗತಿಕ ಮಹತ್ವವನ್ನು ಒದಗಿಸಲು ಸಹಕರಿಸಿತೆನ್ನಬಹುದು. ರಷ್ಯಾದಲ್ಲಿಯ ಸೋವಿಯತ್ ಸಶಸ್ತ್ರ ದಳದಲ್ಲಿ ಜೆಕೊಸ್ಲೊವಾಕ್, ಚೈನೀಸ್, ಬಲ್ಗೇರಿಯನ್, ಯುಗೋಸ್ಲೋವಿಯನ್, ರುಮೇನಿಯನ್ ಮತ್ತು ಹಂಗೇರಿಯನ್ ಘಟಕಗಳಿದ್ದವು.

**ಜಾಗತಿಕ ಪರಿಣಾಮ:**

ಅಕ್ಟೋಬರ್ ಕ್ರಾಂತಿಯ ಬಿರುಗಾಳಿಯು ಜಗತ್ತಿನ ಅನೇಕ ರಾಷ್ಟ್ರಗಳಲ್ಲಿ ಕ್ರಾಂತಿಯ ಅಲೆಗಳನ್ನು ಬಡೆದೆಬ್ಬಿಸಿತು. ಫಿನ್‌ಲ್ಯಾಂಡ್‌ದಲ್ಲಿ ಹತ್ತಿದ ಕ್ರಾಂತಿಯ ಕಿಡಿಯ ಪರಿಣಾಮವಾಗಿ ಜನವರಿ ೨೭, ೧೯೧೮ರಲ್ಲಿ ಅವರಿಗೆ ಸ್ವಾತಂತ್ರ್ಯ ದೊರಕಿಸಿತು.

ಸೋವಿಯತ್ ಸರ್ಕಾರದಿಂದ ಸ್ವಾತಂತ್ರ್ಯ ಪಡೆದಿದ್ದ ಪೋಲೆಂಡ್‌ದಲ್ಲಿ ಕಾರ್ಮಿಕರು ದಂಗೆಯೆದ್ದರು. ರಷ್ಯಾದಲ್ಲಿಯ ಮಹಾಕ್ರಾಂತಿಯಿಂದ ಪ್ರಭಾವಿತರಾಗಿ ಜನಪ್ರಿಯ ಸರ್ಕಾರದ ಸ್ಥಾಪನೆಯನ್ನು ಬೇಡಿದರು. ೧೨೦ಕ್ಕೂ ಮೀರಿ ಕಾರ್ಮಿಕ ಸಮಿತಿಗಳು ದೇಶದಲ್ಲಿ ರಚಿತವಾಗಿದ್ದವು. ಆದರೆ ಈ ಕ್ರಾಂತಿಯ ಸುಂಟರಗಾಳಿ ಬಹಳ ದುರ್ಬಲವಾಗಿದ್ದುದರಿಂದ ಹೆಚ್ಚು ಪರಿಣಾಮಕಾರಿಯಾಗಲಿಲ್ಲ.

ಆಸ್ಟ್ರಿಯಾ, ಹಂಗೇರಿ ಮತ್ತು ಜರ್ಮನಿಗಳಲ್ಲಿ ಆರ್ಥಿಕ ಅಭದ್ರತೆ, ಕ್ಷಾಮ, ಔದ್ಯಮಿಕ ಅಶಾಂತಿಗಳು ಹೆಚ್ಚಾಗಿ, ವರ್ಗಭೇದವು ತೀಕ್ಷ್ಣಗೊಂಡು ಕಾರ್ಮಿಕರ ಕ್ರಾಂತಿಗೆ ಎಡೆಕೊಟ್ಟಿತು. ರಷ್ಯಾದಲ್ಲಿ ಮಹಾಕ್ರಾಂತಿಯ ಯಶಸ್ಸನ್ನು ಸಂತೋಷದಿಂದ ಸ್ವೀಕರಿಸಿದ ಆಸ್ಟ್ರಿಯಾ, ಹಂಗೇರಿಯ ನೂರು ಸಾವಿರ ಜನ ರಷ್ಯನ್ ಕಾರ್ಮಿಕರ ಯಶಸ್ಸನ್ನು ಕೋರಿ ನವ್ಹಂಬರ್ ೨೫, ೧೯೧೭ರಂದು ಸಭೆಕೂಡಿ ರಷ್ಯಾದ ಸಮಾಜವಾದೀ ಕ್ರಾಂತಿಗೆ ಸ್ವಾಗತ ಕೋರಿದರು.

ಸೈಬೇರಿಯಾ, ಕ್ರೋಮಿಯ, ಸ್ಲೋವೇನಿಯಾಗಳಲ್ಲಿಯ ನಗರಗಳಲ್ಲಿ ಕಾರ್ಮಿಕರ ಸಭೆಗಳೂ ಕೂಡ ನವ್ಹಂಬರ್ ೧೯೧೭ರಲ್ಲಿ ಶುಭ ಕೋರಿ ಸಂದೇಶಗಳನ್ನು ಕಳುಹಿಸಿದರು.

ಅಕ್ಟೋಬರ್ ಕ್ರಾಂತಿಯು ಜರ್ಮನಿಯ ಮೇಲೆ ಬಹಳ ಮಹತ್ವದ ಪ್ರಭಾವ ಬೀರಿತು. ರಾಷ್ಟ್ರಕ್ಕೆ ರಾಷ್ಟ್ರವೇ ರಷ್ಯನ್ ಕ್ರಾಂತಿಯನ್ನು ಪ್ರಶಂಸಿಸಿತು. ರಷ್ಯಾದೊಡನೆ ಹಿತಸಂಬಂಧ ಬಯಸಿತು. ಜನ

ವರಿ ೨೮, ೧೯೧೮ರಂದು ಬರ್ಲಿನ್ನಿನ ೪೦೦,೦೦೦ ಕಾರ್ಮಿಕರು ಸಂಪು ಮಾಡಿದ್ದರು. ರಷ್ಯನ್ ಕ್ರಾಂತಿಯನ್ನು ರಕ್ಷಿಸಲು ಕರೆಕೊಟ್ಟರು.

ರುಮೇನಿಯಾದಲ್ಲೂ ೧೯೧೮ರ ಬಿಸಿಲು ಕಾಲದಲ್ಲಿ ರಾಜಕೀಯ ಸಂಪುಗಳನ್ನು ಆಚರಿಸಲಾಯಿತು. ರುಮೇನಿಯಾದ ನೌಕಾದಳದಲ್ಲಿ ದಂಗೆ ಎದ್ದಿತು. ಜರ್ಮನ್ನರು ತಮ್ಮ ದೇಶದ ಆಕ್ರಮಿತ ಪ್ರದೇಶಗಳಿಂದ ಹಿಂತೆಗೆಯಬೇಕೆಂದೂ ಘೋಷಿಸಲಾಯಿತಲ್ಲದೆ, ರಷ್ಯಾದಲ್ಲಿಯ ಬಂಡವಾಳಶಾಹಿ ಭೂಸ್ವಾಮಿಗಳನ್ನು ಸೋಲಿಸಬೇಕೆಂದು ಬಿನ್ನವಿಸಲಾಯಿತು.

ಡಿಸೆಂಬರ್ ೧೯೧೭ರಲ್ಲಿ ಫ್ರಾನ್ಸ್‌ಗೆ ರಷ್ಯಾ ಕ್ರಾಂತಿಯ ಬಿರುಗಾಳಿ ಸೋಂಕಿತು. ಲೋರೇ ಕೊಳ್ಳದ ಲೋಹದ ಕಾರ್ಖಾನೆಯ ಕಾರ್ಮಿಕರು ಸಂಪು ಹೂಡಿದರು. ಇದರ ಫಲವಾಗಿ ಫ್ರಾನ್ಸಿನ ಅನೇಕ ಭಾಗಗಳಲ್ಲಿ ಕ್ರಾಂತಿಯ ಚಳವಳಿಯು ಪಸರಿಸಿ "ರಷ್ಯದ ಕ್ರಾಂತಿ ಚಿರಾಯುವಾಗಲಿ"ಎಂಬ ಘೋಷಣೆಗಳೂ ಮಾಡಲಾದವು. ಅಕ್ಟೋಬರ್ ೧೯೧೮ರಲ್ಲಿ ನಡೆದ ಫ್ರೆಂಚ್ ಸೋಷಲಿಸ್ಟ ಮಹಾ ಅಧಿವೇಶನದಲ್ಲಿ "ಸಮಾಜವಾದೀ ರಾಷ್ಟ್ರ ಚಿರಾಯುವಾಗಲಿ" ಎಂಬ ಸಂದೇಶ ರಷ್ಯಾಗೆ ಕಳುಹಿಸಲಾಯಿತು.

ಕ್ರಾಂತಿಯ ಝಳ ರಷ್ಯಾದಿಂದ ಬ್ರಿಟನ್ನಿಗೆ ತಾಕಲಿಲ್ಲವೆಂದಲ್ಲ. ಬ್ರಿಟನ್ನಿನ ಕಾರ್ಮಿಕರೂ ಕೂಡ ರಷ್ಯಾ ಕ್ರಾಂತಿಯ ಬೆಂಬಲಿಗರಾದರು. ಬ್ರಿಟಿಷ್ ಸಮಾಜವಾದೀ ಪಕ್ಷವು ಬ್ರಿಟನ್ನಿನ ಅನೇಕ ಸ್ಥಳಗಳಲ್ಲಿ ಸಭೆಗಳನ್ನು, ಮೆರವಣಿಗೆಗಳನ್ನು ಏರ್ಪಡಿಸಿ "ನಮ್ಮ ಸಹಾಯ ಹಸ್ತ ರಷ್ಯಾಗೆ ನೀಡೋಣ" ಎಂಬ ಘೋಷಣೆಗಳನ್ನು ಮಾಡಿದರು.

ಸ್ಪೇನ್, ನೆದರ್‌ಲ್ಯಾಂಡ್ಸ್, ಡೆನ್‌ಮಾರ್ಕ, ಬೆಲ್‌ಜಿಯಂ, ನಾರ್ವೆ, ಸ್ವೀಡನ್, ಮುಂತಾದ ಅನೇಕ ದೇಶಗಳಲ್ಲಿ ಕೂಡ ಗಾಳಿ ಸೋಕಿತು. ಕಾರ್ಮಿಕರ ಸಂಘಟನೆ ಪ್ರಾರಂಭವಾಯಿತು.

ಅಮೇರಿಕಾದ ಶ್ರೀ ವಿಲಿಯಂ ಫಾಸ್ಟರ್ ಹೇಳಿದಂತೆ "ಇತರ ರಾಷ್ಟ್ರಗಳಲ್ಲಿಯಂತೆ ಅಮೇರಿಕಾದ ಜನತೆಯೂ ರಷ್ಯಾದ ವೀರೋಚಿತ ಮಹಾಕ್ರಾಂತಿಯಿಂದ ಮಂತ್ರಮುಗ್ಧರಾದರು....ಅಮೇರಿಕಾದ ಕಾರ್ಮಿಕರೂ ಕೂಡ ರಷ್ಯಾದಲ್ಲಿಯ ಕಾರ್ಮಿಕರ ಯಶಸ್ಸು ತಮ್ಮ ಯಶಸ್ಸು ಕೂಡಾ ಎಂದು ಭಾವಿಸಿದರು" ಎಂದಿದ್ದಾರೆ. ಲೆನಿನ್ "ಬಂಡವಳಶಾಹಿ ರಾಷ್ಟ್ರಗಳಲ್ಲಿ ಅತಿ ಬಲಿಷ್ಠವಾದದ್ದು ಹಾಗೂ ಅತಿ ಎಳೆಯದೂ ಆದ ಅಮೇರಿಕಾದಲ್ಲೂ ಕಾರ್ಮಿಕ ಸಮೂಹಗಳಿಗೆ ಸೋವಿಯತ್ ಜನರ ಬಗ್ಗೆ ಸಹಾನುಭೂತಿ ಇದೆ" ಎಂದಿದ್ದಾರೆ.

ಜಪಾನಿನ ಕಾರ್ಮಿಕ ವರ್ಗಗಳೂ ರಷ್ಯಾದ ಕ್ರಾಂತಿಯಿಂದ ಪ್ರಭಾವಿತರಾದರು. ಹತ್ತು ದಶಲಕ್ಷಕ್ಕೂ ಮಿಕ್ಕಿ ಕಾರ್ಮಿಕರು ಅಗಸ್ಟ್–ಸಪ್ಟಂಬರ್ ೧೯೧೮ರಲ್ಲಿ

"ಅಕ್ಕಿ ಪ್ರತಿಭಟನೆ" (Rice Revolts) ಮಾಡಿದರು. ಸೋವಿಯತ್‌ದ ಪೂರ್ವದಲ್ಲಿ ವಿದೇಶಿ ದಳಗಳು ನೆಲೆಸಿರುವುದನ್ನು ಜಪಾನ ಕಾರ್ಮಿಕ ಸಂಘಗಳು ಪ್ರತಿಭಟಿಸಿದವು.

ಅಕ್ಟೋಬರ್ ಕ್ರಾಂತಿಯು ಚೈನಾ ದೇಶಕ್ಕೆ ಬಹಳ ಸ್ಫೂರ್ತಿ ನೀಡಿತು. ಪ್ರಗತಿಪರ ಬೇರೆ ಬೌದ್ಧಿಕ ಪ್ರಜ್ಞಾವಂತರು, ಕಾರ್ಮಿಕರು ರಷ್ಯಾದಲ್ಲಿಯ ಕ್ರಾಂತಿಯನ್ನು ಸ್ವಾಗತಿಸಿದರಲ್ಲದೆ ತಮ್ಮ ರಾಷ್ಟ್ರದ ಕ್ರಾಂತಿಗೆ ಇಲ್ಲಿಂದ ಆದರ್ಶವನ್ನು ಪಡೆದರು. ಚೀನಾದ ಕ್ರಾಂತಿಯ ಮಹಾನಾಯಕ ಸನ್‌ಯತ್‌ಸೇನ್, ಲೆನಿನ್‌ರಿಗೆ ಒಂದು ತಂತಿಯನ್ನು ಕಳುಹಿಸಿ ಅವರನ್ನು ಅಭಿನಂದಿಸುತ್ತಾ "ರಷ್ಯಾ ಹಾಗೂ ಚೈನಾಗಳಲ್ಲಿ ಕ್ರಾಂತಿಕಾರೀ ಪಕ್ಷಗಳು ಒಂದಾಗಿ ಜಗತ್ತಿನ ಬಂಡವಾಳಶಾಹಿಗಳ ಪತನಕ್ಕೆ ಶ್ರಮಿಸಬೇಕು" ಎಂದರು.

ಭಾರತದ ಪ್ರತಿಭಾವಂತರ ಮೇಲೂ ರಷ್ಯದ ಕ್ರಾಂತಿ ಪ್ರಭಾವ ಬೀರಿತು. ಬ್ರಿಟಿಷರ ದಾಸ್ಯದಲ್ಲಿದ್ದ ಭಾರತೀಯರು ರಷ್ಯಾದಲ್ಲಿಯ ಕ್ರಾಂತಿಯನ್ನು ನೋಡಿ ಆಕರ್ಷಿತರಾದರು. ನವ್ಹೆಂಬರ್ ೬೩ ರಂದು ಭಾರತದಿಂದ ಲೆನಿನರನ್ನು ಭೆಟ್ಟಿಯಾಗಲು ಒಂದು ಪ್ರತಿನಿಧಿಗಳ ಮಂಡಲ ಹೋಗಿತ್ತು. ಭಾರತದ ಪ್ರತಿನಿಧಿಯೊಬ್ಬರು ಅಖಿಲ ರಷ್ಯಾ ಕೇಂದ್ರ ಕಾರ್ಯಕಾರೀ ಸಮಿತಿಯಲ್ಲಿ ಮಾತನಾಡಿದರು. "ರಷ್ಯಾದಲ್ಲಿಯ ನಮ್ಮ ಸಹೋದರರು ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಹಾಗೂ ಜಗತ್ತನ್ನು ದಾಸ್ಯದಿಂದ ಪಾರುಮಾಡಲು ಸಹಕರಿಸುವರೆಂದು ಭಾವಿಸಿದ್ದೇವೆ" ಎಂಬ ವಿಷಯವನ್ನು ಬಿಂಬಿಸಿದರು.

ಇಂಡೋನೇಶಿಯಾದಲ್ಲೂ ಕ್ರಾಂತಿಯ ಪ್ರಭಾವವಾಯಿತು. ಪೂರ್ವ ಏಶಿಯಾ ಹಾಗೂ ಮಧ್ಯ ಪೂರ್ವ ಪ್ರಾಂತಗಳಲ್ಲೂ ಈ ಮಹತ್ವದ ಅರಿವಾಗಿ ಅಲ್ಲಲ್ಲಿ ಕ್ರಾಂತಿಯ ಕಿಡಿಗಳೆದ್ದವು. ಅರಬ್ ರಾಜ್ಯಗಳಿಗೆ

---

## — ಯಕ್ಷ ಪ್ರಶ್ನೆಗೆ ಉತ್ತರಗಳು —

(೧) ಪ್ರೆಜ್ವಾಲ್‌ಸ್ಕೀ ಕುದುರೆ; ಪ್ರೆಜ್ವಾಲ್‌ಸ್ಕೀ (೨) ಅಶ್ವಮೇಧ (೩) ಹಾರ್ಸ್‌ಫ್ಲೈ (೪) ಹಾರ್ಸ್ ಲ್ಯಾಟಿಟ್ಯೂಡ್ಸ್ (೫) ಹಯಗ್ರೀವ (೬) ಅಶ್ವತ್ಥಾಮ (೭) ಕಿನ್ನರ (೮) ಅಶ್ವತ್ಥ (೯) ಹಾರ್ಸ್–ಪವರ್ (೧೦) ಕತ್ತೆ, ಜೀಬ್ರಾ, ಖಡ್ಗಮೃಗ, ಟೇಪರ್ (೧೧) ಕುವಲಯ.

(ಪ್ರಶ್ನೆಗಳು ೫೦ ನೆಯ ಪುಟದಲ್ಲಿವೆ.)

---

ಸೋವಿಯತ್ ಜನರು ಬಹಳ ಪ್ರಿಯರಾದರು. ಇರಾನ್, ಇರಾಕ್, ಇಜಿಪ್ತ್‌ಗಳಲ್ಲೆಲ್ಲಾ ಸಾಮ್ರಾಜ್ಯಶಾಹಿಗಳನ್ನು ಹೊರಗೆಡಹುವ ಪ್ರಯತ್ನ ಮಾಡಲಾಯಿತು.

ಅಂತರರಾಷ್ಟ್ರೀಯ ಕಾರ್ಮಿಕ ಚಳುವಳಿಯು ರಷ್ಯನ್ ಕ್ರಾಂತಿಯ ನಂತರ ಬಲಗೊಂಡಿತು. ಹೆಚ್ಚು ಹೆಚ್ಚು ಪ್ರಸಾರವಾಗಿ ಅನೇಕ ರಾಷ್ಟ್ರಗಳಲ್ಲಿ ಬೇರೂರಿತು. ಜಗತ್ತಿನ ಅನೇಕ ರಾಷ್ಟ್ರಗಳಲ್ಲಿ ಸಮಾಜವಾದದ ಸ್ಥಾಪನೆಯಾಯಿತು.

ಈಗ ಜಗತ್ತಿನಲ್ಲಿ ಶೇಕಡ ೩೬ ರಷ್ಟು ಜನ ಸಮಾಜವಾದಿಗಳಾಗಿದ್ದಾರೆ. ಜಗತ್ತಿನ ಒಂದನೆಯ ಮೂರಾಂಶಕ್ಕಿಂತ ಹೆಚ್ಚು ಜನ ಅಂದರೆ ೧,೦೦೦,೦೦೦,೦೦೦ ಜನ ಸಮಾಜವಾದೀ ಸರ್ಕಾರಗಳ ನೆರಳಿನಲ್ಲಿ ಸಮೃದ್ಧಿಯನ್ನು, ಸಂತೋಷವನ್ನು ಪಡೆಯುತ್ತಿದ್ದಾರೆ.

ರಷ್ಯಾದಲ್ಲಿ ನೆಟ್ಟ ಸಮಾಜವಾದದ ಬೀಜ ಬೆಳೆದು ಹೆಮ್ಮರವಾಗಿ ಜಗತ್ತಿನಾದ್ಯಂತ ತನ್ನ ಶಾಖೆಗಳನ್ನು ಬೆಳೆಸಿ, ಸಮಸ್ತ ಜನಸಾಮಾನ್ಯರಿಗೆ ಆಶ್ರಯ ನೀಡುವ ಕಲ್ಪವೃಕ್ಷವಾಗುವ ಹೆಬ್ಬಯಕೆಯಿಂದ ಬೆಳೆಯುತ್ತಿದೆ ಇದನ್ನು ಕೆಲವರು ಕಲ್ಪವೃಕ್ಷವೆಂದರೆ ಮತ್ತೆ ಕೆಲವರು ಜಾಲಿಗಿಡವೆಂದಿದ್ದಾರೆ. ಆದರೆ ಸಮಾಜವಾದವಿರುವ ರಾಷ್ಟ್ರಗಳಲ್ಲಿಯ ಪ್ರಜೆಗಳು ಸುಖಸಮೃದ್ಧಿಗಳನ್ನು ಅನುಭವಿಸುತ್ತಾ ಇದನ್ನು ಕಲ್ಪವೃಕ್ಷವಾಗಿಯೇ ಸ್ವೀಕರಿಸಿದ್ದಾರೆ.

ಜಗತ್ತಿನ ಎಲ್ಲ ರಾಷ್ಟ್ರಗಳಲ್ಲೂ ಕಾರ್ಮಿಕರಿದ್ದಾರೆ. ಎಲ್ಲೆಡೆ ಕಾರ್ಮಿಕ ಸಂಘಗಳೂ ಇವೆ. ಈ ಕಾರ್ಮಿಕ ವೃಂದಕ್ಕಾದರೂ ಅಕ್ಟೋಬರ್-ಕ್ರಾಂತಿ ಒಂದು ಸ್ಫೂರ್ತಿದಾಯಕ ಘಟನೆ. ಏಕೆಂದರೆ ಇದು 'ಕಾರ್ಮಿಕರ ಕಲ್ಯಾಣರಾಷ್ಟ್ರಕ್ಕೆ' ಒಂದು ಹಾದಿ.



---

## ಸುಪ್ರಮನ

"ಇಂದಿನ ಮಾನವ ಬುದ್ಧಿಗೆ ಭೌತಿಕ ಹಾಗೂ ಆಧ್ಯಾತ್ಮಗಳು ಒಂದಕ್ಕೊಂದು ವಿರೋಧವೆಂದು ಭಾಸವಾಗಿದೆ. ಆದ್ದರಿಂದ ಮಾನವನಲ್ಲಿ ಸುಪ್ರಮನ ಉಂಟಾದಾಗ ಭೌತಿಕ ಹಾಗೂ ಆಧ್ಯಾತ್ಮಗಳು ಒಂದಕ್ಕೊಂದು ವಿರೋಧವಲ್ಲ ಪೂರಕ ಎಂದು ತಿಳಿಯುತ್ತದೆ. ಆಗ ಸುಪ್ರಮನದ ಅವಕಾಶದಲ್ಲಿ ಭೌತಿಕ–ಆಧ್ಯಾತ್ಮಗಳಲ್ಲಿ ಸಂಗಮವಾಗಿ ದೈವೀ ವಾಸ್ತವಿಕತೆಯಲ್ಲಿ ಲೀನವಾಗುತ್ತವೆ."

ಡಾ. ದ. ರಾ. ಬೇಂದ್ರೆ, ಎಂ. ಎ., ಡಿ. ಲಿಟ್.

# ಏಕಪಾಕ

ಅರಿವು, ಇರವು, ಹರವು ಇವು ಏಕಪಾಕವಾಗುವದೇ ಹಿಗ್ಗು. ಇದರ ಅಡೆ, ತಡೆ–ತಗ್ಗು, ಕುಗ್ಗು. ರಸಪಾಕ ಮಾಡುವುದೇ ಜೀವನ ಯಜ್ಞ. ಉಳಿದುದು ಹಾಗೂ ಹೀಗೂ ಕ್ರಿಯಾ ಕರ್ಮ ಅನಿವಾರ್ಯ. ಸದ್ಗುರುವಿನ ಅರಿವು ಈ ಏಕ ಪಾಕದ ಹಿಗ್ಗು. ಶಮಸ್ಥಾಯಿಯಾದ ನವಮ ಅಂದರೆ ಶಿಷ್ಯ–ಭಕ್ತ ಆ ಗುರುವಿನ ಹತ್ತಿರ ಇರುತ್ತಾನೆ. ಹತ್ತರ ಹಂತ ಗುರುವಿನದು. ಈ ಹತ್ತರ ಹತ್ತೊತ್ತೇ ಹನ್ನೊಂದು: ೧ + ೧೦ = ೨ + ೯ = ೩ + ೮ = ೪ + ೭ = ೫ + ೬. ಒಂದೊಂದು ಕೈಗೆ ಐದೈದು ಬೆರಳು. ಎರಡು ಕೈ ಕೂಡಿದರೆ ಹತ್ತು. ಇದು ಭಾವೈಕ್ಯದ ನಮಸ್ಕಾರ. ಹನ್ನೊಂದರಲ್ಲಿ ಒಂದನ್ನು ಒಂದು ಹತ್ತಿಕೊಂಡಿರುತ್ತದೆ. ಈ ಹನ್ನೊಂದರ ಒಂದೊಂದು ಜೋಡಿಯಲ್ಲಿ, ಒಂದು ಸಂಯುಕ್ತ ಸಂಖ್ಯೆ; ಇನ್ನೊಂದು ವಿಭಾಜ್ಯ. ಇದು ಈ ಪಂಚಕದ ಅದೃಷ್ಟ ಅಪೂರ್ವತೆ. ಕಾಲ ಪಾಕವೇನೋ ಹನ್ನೆರಡು ತಿಂಗಳಿನ ಒಂದು ವರ್ಷದ್ದು. ಒಮ್ಮೊಮ್ಮೆ ಹದಿಮೂರರದು–ಅಧಿಕದ್ದು. ಲೋಕ ಪಾಕಕ್ಕೆ ಏಳರ ಒಂದು ಚೌಕಡಿ ಬೇಕು: ೭, ೧೪, ೨೧, ೨೮. ಹದಿನಾಲ್ಕು ಲೋಕದ ಮಾತು ಬಳಕೆಯದು. ಈ ಹದಿನಾಲ್ಕರ ಮಧ್ಯದಲ್ಲಿ ಅಂತರಾತ್ಮನ ಪ್ರಜ್ಞಾಲೋಕ ಸಪ್ತಭೂಮಿಕೆ ಮಾಡುವುದು. ಉಳಿದ ಏಳು, ನಾರಾಯಣ ಸ್ಥಾಯಿಯಲ್ಲಿ ಇರುವ ಧ್ರುವ ಮಂಡಲದ ಅಂಚಿಗೆ ಸಪ್ತರ್ಷಿಗಳಾಗಿ ತಿರುಗುತ್ತಿವೆ. ಇವು ಸಪ್ತಋಷಿ ವಾಣಿಗಳ ಲೋಕ. ಇವರಲ್ಲಿ ಅತ್ರಿ ಮೊದಲ ಮೂರಕ್ಕೂ ಒಳಗು – ಹೊರಗು; ಎರಡನೆಯ ಮೂರಕ್ಕೂ ಒಳಗು – ಹೊರಗು. ಹೀಗೆ ಏಳನ್ನು ಏಕ ಬಿಂದುವಿನಲ್ಲಿ ಹಿಡಿಯುವುದು ಎಂಟರ ನಂಟು. ಇದು ಎಂಟಿದೆಯ ಬಂಟತನ. ಇಂತಹ ವೀರನಲ್ಲದವನು ಶ್ರಮಸ್ಥಾಯಿಯಾದ ನವಮದಲ್ಲಿ ನಿಲ್ಲಲಾರನು. ಲೋಕದ ಕ್ರಮ ಇದು:– ತಳವಿತಳಾದಿ ಸಪ್ತ, ಭೂರ್ಭೂವಾದಿ ಸಪ್ತ, ಪ್ರಜ್ಞಾ ಭೂಮಿಯ ಸಪ್ತಕ ಮತ್ತು ಋಷಿ ಸಪ್ತಕ. ಇದಲ್ಲದೆ ಪೂರ್ಣಿಮೆಯ ಪಾಂಡುರಂಗ, ಷೋಡಶದ ಕಾಲ ರಾತ್ರಿ ಇದ್ದೇ ಇವೆ. ಇದನ್ನು ಮಿಕ್ಕಿದುದು ಹದಿನೇಳನೆಯದು– ಜೀವಜ್ಯೋತಿ. ಸೂರ್ಯ-

ಚಂದ್ರರಿಗಿರುವ ರಾಹುಗ್ರಾಸ ಇದಕ್ಕಿಲ್ಲ. ಆದರೆ ಮೂವತ್ತೇಳರಲ್ಲಿರುವ ಕ್ಷೇತ್ರಜ್ಞನ ನೆರವು ಬರದೇ ಇದಕ್ಕೆ ಸಾಮರ್ಥ್ಯ ಬರುವದೆಂತು? ಮೂವತ್ತಾರಕ್ಕೆ ಒಂದು ಮೂವತ್ತೇಳನೆಯದು, ಎಪ್ಪತ್ತೆರಡಕ್ಕೆ ಎಪ್ಪತ್ತ ಮೂರನೆಯದು, ನೂರೆಂಟಕ್ಕೆ ನೂರೊಂಭತ್ತನೆಯದು. ಹೀಗೆ ಎರಡನೂರಾ ಹದಿನಾರಕ್ಕೆ ಮೂರು ಸೇರಿ ಈ ಎರಡ ನೂರಾ ಹತ್ತೊಂಭತ್ತರ ಗುಂಪು, ಎರಡ ನೂರಾ ಇಪ್ಪತ್ತಕ್ಕೆ ಏರದು; ರಡನೂರಾ ಹದಿನೆಂಟಕ್ಕೆ ಇಳಿಯದು. ಈ ಸಮತೂಕದಲ್ಲಿ ನಿಲ್ಲುವುದು, ನಿಲ್ಲಿಸುವುದು ತ್ರಿವಿಕ್ರಮನ ಪರಾಕ್ರಮ; ಜೀವದ ಕೃತಕೃತ್ಯತೆ. ಸ್ವಯಂಬಲಿಗಳು ದಾನಿಗಳಾಗಬಹುದು. ಅದಕ್ಕೆ ಪಾತಾಳಕ್ಕಿಳಿಯುವುದೂ ಅಗತ್ಯ. ಭಗವಂತನಿಗೆ ಶರಣಾಗತನಾಗುವುದರಿಂದ ಭಕ್ತ ಸದ್ಬಲವನ್ನು ಪಡೆಯುತ್ತಾನೆ. ಇಂಥ ಅಂತರಾತ್ಮಿಕ ಭಕ್ತರೇ ಜೀವನವನ್ನು ಹಂತ ಹಂತಕ್ಕೂ ಪೂರ್ಣಗೊಳಿಸುತ್ತಾರೆ. ಹೀಗಾಗಿ ದೇಹ, ಪ್ರಾಣ, ಮನ, ವಿಜ್ಞಾನಗಳ ಯೋಗ ಸಮನ್ವಿತ ಜೀವನವು ಭೂತಿ, ಭಾವ,ಉದ್ಭವಗಳಲ್ಲಿ ಭೌಮದ ಸ್ಪರ್ಶವನ್ನು ಪಡೆಯುತ್ತಿದೆ. ಇದು ಯುಗ ಯುಗದ ಪಾಕ. ಈಶ ಸಂಕಲ್ಪ ಪಾಕವಾಗಲು ಒಂದು ಕಲ್ಪಕಾಲ ಬೇಕು. ಯೋಗದಿಂದ ಅದು ತೀವ್ರವಾಗಬಹುದು; ಕಾಲಕ್ಕೆ ಬಿಟ್ಟರೆ ಅದು ಸಾವಕಾಶವಾಗಬಹುದು.

ಈ ಪಾಕದ ಅರಿವು, ಪಾಪಶಾಸನನಾದ ಇಂದ್ರನಿಗೆ ಇದೆ. ಇದು ಇಂದ್ರ–ಉಪೇಂದ್ರರ ಸಂಯುಕ್ತ ಕಾರ್ಯ. ಈ ನೆಲೆಯಲ್ಲಿ ಅಹುದು ಯಾವುದು ? ಅಲ್ಲ ಯಾವುದು ? ಇಹುದು ಯಾವುದು ? ಇಲ್ಲ ಯಾವುದು ? ಎಂಬ ಪ್ರಜ್ಞೆ ಪ್ರತಿಷ್ಠಿತವಾಗಿದೆ. ಒಂದು ಸ್ವಭಾವಕ್ಕೆ ಅರಿವಿನ ಸತ್–ಅಸತ್ ಭಾವ ಪ್ರಜ್ಞೆಗೆ ಬರುತ್ತದೆ. ಅಸತ್ತು ಕಾಮಕಲ್ಪ. ಸತ್ವ ಈಶ ಸಂಕಲ್ಪ. ಬೇರೆ ಕೆಲವು ಸ್ವಭಾವಗಳಿಗೆ ಪ್ರಾಣದ, ತ್ರಾಣದ ಸತ್ತಾಸತ್ತೆಯೇ ಪ್ರಮಾಣ. ಮತ್ತೆ ಕೆಲವರಿಗೆ ಬಂಡವಾಳದ ಅರಿವೇ ಅರಿವು. ಬಂಡವಾಳವಿದ್ದರೆ ಬದುಕಿದ; ಇಲ್ಲದಿದ್ದರೆ ಸತ್ತಂತೆ. ಆದರೆ ಬಹುಜನರಿಗೆ ತಮ್ಮ ಅನ್ನ ಪಡೆಯುವ ದುಡಿಮೆ ಇದೆಯೇ ಇಲ್ಲವೇ– ಈ ಅರಿವೇ ಅರಿವು. ಈ ತಂತ್ರವನ್ನೂ ಅರಿಯದ ಅತಂತ್ರರಾದ ಸ್ವೇಚ್ಛಾಚಾರಿಗಳ ಗುಂಪು ಒಂದು ಇದ್ದೇ ಇದೆ. ಇದು ದುರ್ವಿಪಾಕದ ಭಂಡವಾಳ, ದುರಂತಕ್ಕೆ ಮೂಲ.

Global unity or Global Chaos– ಭೂಮಂಡಲದ ತುಂಬ ಅರಾಜಕತೆ ಇಲ್ಲವೆ ಭೂಮಂಡಲದ ಏಕ ರಾಜ್ಯ. ಇವೆರಡೇ ಮಾನವ ಜಾತಿಗೆ, ಧರ್ಮಕ್ಕೆ ತೆರೆದಿವೆ. ಮಾನವ ಜಾತಿ ಅಧೋಗತಿಯನ್ನು ಪತಿಕರಿಸುವುದೋ ಉನ್ನತಿಯನ್ನೊ? ಇದು ಸ್ವಭಾವ ಪರಿಪಾಕದ ಸಾಮರಸ್ಯವನ್ನು ಅವಲಂಬಿಸಿದೆ. ಐತಿಹಾಸಿಕ ಪರಿಣಾಮಕ್ಕಾಗಿ ಒಬ್ಬೊಬ್ಬರೂ ಕಾಯಬೇಕಾಗಿದೆ. ವ್ಯಕ್ತಿ ವ್ಯಕ್ತಿಯಲ್ಲಿ ಅವರವರ ಪಾಕ ನಡೆಯಲೇಬೇಕು. ಇದು ಗುಪ್ತ ಭಕ್ತಿ– ದೇವ ಗರ್ಭ.

ಹಂತದಿಂದ ಹಂತಕ್ಕೆ ಮುಟ್ಟಿಸುವವನೇ ಗುರು. ಅವನನ್ನು ಹತ್ತರಿಸುವವನೇ ಶಿಷ್ಯ. ಅವನಿಗೆ ಅನಂತ ಉತ್ಸಾಹಬೇಕು. ಸಾಂಖ್ಯ ನಿರ್ದಿಷ್ಟವಾದ ಜ್ಞಾನವೇ ಶಾಸ್ತ್ರ.

## ನೊಬೆಲ್ ಪಾರಿತೋಷಕ ವಿಜೇತ

# ಡಾ|| ಸಿ. ವಿ. ರಾಮನ್



**ಎಂಭತ್ತರಲ್ಲಿ ಕಾಲಿರಿಸಿದರೂ**
**ಸಂಶೋಧನೆಯಲ್ಲಿ ಇನ್ನೂ**
**ತೊಡಗಿರುವ ಅಸಾಮಾನ್ಯ**

[ ನೊಬೆಲ್ ಪಾರಿತೋಷಕ ವಿಜೇತ ಡಾ॥ ಸಿ. ವಿ. ರಾಮನ್ ನವ್ಹಂಬರ್ ೧೮೮೮ ಜನಿಸಿದರು. ಇವರು ಈ ತಿಂಗಳು ತಮ್ಮ ಎಂಭತ್ತನೆಯ ವರ್ಷದಲ್ಲಿ ಪದಾರ್ಪಣ ಮಾಡುತ್ತಾರೆ. ಇವರಿಗೆ ಶತಾಯುಷಿಗಳಾಗುವ ಬಲ-ಆಯುಷ್ಯ ಲಭಿಸಲೆಂದು ಪ್ರಾರ್ಥಿಸುವ 'ಮಾಧವಿ' ಅವರ ವ್ಯಕ್ತಿ ಚಿತ್ರವನ್ನು ಇಲ್ಲಿ ಒದಗಿಸಿದೆ. ಡಾ॥ ರಾಮನ್‌ರಿಗೆ ನೊಬೆಲ್ ಪಾರಿತೋಷಕ ದೊರಕಿಸಿದ "ರಾಮನ್ ಎಫೆಕ್ಟ್" ದರ ಪರಿಚಯ ಹಾಗೂ ಅವರು ಇತ್ತೀಚೆಗೆ ಪ್ರತಿಪಾದಿಸಿರುವ "ಕಣ್ಣು-ಬಣ್ಣ-ಬೆಳಕು"ಗಳ ಬಗೆಯ ಹೊಸ.ಸಂಶೋಧನೆಯ ವಿವರಗಳನ್ನು ಇಲ್ಲಿ ಒದಗಿಸಲಾಗಿದೆ.]

—ಸಂ.

"ಆರ್ಥಿಕ ಆಡಳಿತಜ್ಞ ಭೌತ ವಿಜ್ಞಾನಿಯಾದ; ಅವನು ಭೌತ ವಿಜ್ಞಾನದಲ್ಲಿ ಅತಿ ಹೆಚ್ಚಿನ ಯಶಸ್ವೀ ಸಾಧನೆಯೆಂದು ಪರಿಗಣಿಸಲಾಗುವ ನೊಬೆಲ್ ಪಾರಿತೋಷಕವನ್ನು ಪಡೆದ", ಎಂದರೆ ಇದೆಲ್ಲ ಕೇವಲ ಕನಸಿನ ಮಾತು ಎಂಬಂತೆ ತೋರಬಹುದು. ಆದರೆ ಈ ಸಾಧನೆಯನ್ನು ಮಾಡಿದ ಡಾ|| ಚಂದ್ರಶೇಖರ ವೆಂಕಟರಾಮನ್ ಇಂದು

ಜೀವಂತ ವ್ಯಕ್ತಿಯಾಗಿ, ಇದು ಕನಸಲ್ಲ ನನಸು ಎಂದು ನಿದರ್ಶಿಸಿದ್ದಾರೆ.

ಎಂಭತ್ತರ ಹೊಸ್ತಿಲಲ್ಲಿ ಯುವಕರ ಚೈತನ್ಯದಿಂದ ಇನ್ನೂ ಸಂಶೋಧನೆಯಲ್ಲಿ ತೊಡಗಿದ್ದು, "ಅದು ತಪ್ಪು, ಇದು ತಪ್ಪು" ಎಂಬ ಯುವಕನ ಧಾರ್ಷ್ಟ್ಯವನ್ನೇ ಭೌತ ವಿಜ್ಞಾನದಲ್ಲಿ ಕಾಯ್ದುಕೊಂಡು ಬಂದಿರುವ ಅವರ ಪ್ರತಿಭೆ, ಶ್ಲಾಘನೀಯ. ಒಮ್ಮೆ ಅವರು "ಇದು ತಪ್ಪು" ಎಂದು ಬೆಳಕಿನ ಪ್ರಸರಣದ ಬಗ್ಗೆ ಹೇಳಿದಾಗ, ಬಹಳಷ್ಟು ಜನ ಅವರನ್ನು ನಂಬಲಿಲ್ಲ. ಆದರೆ ಈ ಘೋಷಣೆ ಅವರಿಗೆ ನೊಬೆಲ್ ಪಾರಿತೋಷಕ ದೊರಕಿಸಿತು. ಈಗ ಅವರು "ಕಣ್ಣು–ಬಣ್ಣ–ಬೆಳಕು" ಈ ತ್ರಿಕೋಣದ ತತ್ವಗಳ ಬಗ್ಗೆ ಕೆಲವು ತತ್ವಗಳನ್ನು "ತಪ್ಪು" ಎಂದು ಮತ್ತೊಮ್ಮೆ ಅಂದಿದ್ದಾರೆ. ಈ ಘೋಷಣೆ ಅವರಿಗೆ ಯಾವ ಪಾರಿತೋಷಿಕವನ್ನು ದೊರೆಕಿಸುತ್ತದೆಯೋ ನೋಡಬೇಕಾಗಿದೆ.

**ವ್ಯಕ್ತಿ ಪರಿಚಯ**

ಕಾಲೇಜಿನಲ್ಲಿ ಅಭ್ಯಾಸ ಮಾಡುವಾಗ ವಿಜ್ಞಾನವನ್ನು ಒಂದು ವಿಷಯವಾಗಿ ತೆಗೆದುಕೊಂಡಿದ್ದರೂ ಇವರು ೧೯೦೭ರಲ್ಲಿ ಭಾರತೀಯ ಆರ್ಥಿಕ ಸಂಸ್ಥೆಯು ನಡೆಸಿದ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಪ್ರಪ್ರಥಮ ಸ್ಥಾನ ಪಡೆದು ಉತ್ತೀರ್ಣರಾಗಿ ಈ ಇಲಾಖೆಯ ಅಧಿಕಾರಿಗಳಾಗಿ ನೇಮಕಗೊಂಡರು. ಇದೇ ಹುದ್ದೆಯಲ್ಲಿ ಹತ್ತು ವರ್ಷಗಳ ಕಾಲ ಸೇವೆ ಸಲ್ಲಿಸಿದರು. ಆರ್ಥಿಕ ಆಡಳಿತಗಾರರಾದರೂ ಇವರ ಒಲವು ವಿಜ್ಞಾನದೆಡೆಯೇ ಆಗಿತ್ತು. ಭಾರತೀಯ ಆರ್ಥಿಕ ಸಂಸ್ಥೆಯಲ್ಲಿ ನೌಕರಿ ಸೇರುವ ಮೊದಲೇ ಇವರು ಸ್ವತಂತ್ರವಾಗಿ ವೈಜ್ಞಾನಿಕ ಸಂಶೋಧನೆಗಳನ್ನು ನಡೆಸಿದ್ದರು. ೧೯೦೬ರಲ್ಲಿ ಲಂಡನ್ನಿನ 'ಫಿಲಾಸಾಫಿಕಲ್ ಮ್ಯಾಗಝೀನ' ದಲ್ಲಿ ಇವರು ಬರೆದ 'ಆಯತ ರಂಧ್ರದಿಂದಾಗುವ ಅವ್ಯವಸ್ಥಿತ ಪತನ ಪಂಕ್ತಿಗಳು, (Unsymmetrical Defraction Bands due to a Rectangular aperture) ಎಂಬ ಸಂಶೋಧನಾತ್ಮಕ ಪ್ರಬಂಧವು ಪ್ರಕಟವಾಯಿತು. ಭಾರತೀಯ ಆರ್ಥಿಕ ಸಂಸ್ಥೆಯ ಅಧಿಕಾರಿಯಾಗಿದ್ದಾಗ ಕಲಕತ್ತಾದಲ್ಲಿ ನೌಕರಿ ಮಾಡುವ ಅವಕಾಶ ಇವರಿಗೆ ದೊರೆಯಿತು. ಆಗ ಇವರು ಕಲಕತ್ತಾದಲ್ಲಿಯ ವಿಜ್ಞಾನ ಸಂಶೋಧನಕ್ಕೆ ಪ್ರಚೋದನವೀಯುವ ಭಾರತ ಸಂಸ್ಥೆಯೊಂದರಲ್ಲಿ ವೈಜ್ಞಾನಿಕ ಸಂಶೋಧನೆಯನ್ನು ಮಾಡಲು ಅನುಮತಿ ಪಡೆದರು. ಇಲ್ಲಿ ಅವರಿಗೆ ದೊರೆತ ಅವಕಾಶದ ಸಂಪೂರ್ಣ ಲಾಭ ಪಡೆದರಲ್ಲದೆ, ಇಲ್ಲಿಂದ ರಂಗೂನ್ ಹಾಗೂ ನಾಗಪೂರಗಳಿಗೆ ವರ್ಗಾಯಿಸಲ್ಪಟ್ಟಾಗಲೂ ಇವರು ತಮ್ಮ ಸಂಶೋಧನೆಯನ್ನು ಮುಂದುವರಿಸಿದರು. ೧೯೧೧ರಲ್ಲಿ ಶ್ರೀ ರಾಮನ್‌ರವರಿಗೆ ಮತ್ತೆ ಕಲಕತ್ತಾಗೆ ವರ್ಗವಾಯಿತು. ಆಗ ಇವರಲ್ಲಿ ಹುದುಗಿದ್ದ ಅಸಾಮಾನ್ಯ ವೈಜ್ಞಾ

ನಿಕ ಪ್ರತಿಭೆಯನ್ನು ಕಲಕತ್ತಾ ವಿಶ್ವವಿದ್ಯಾಲಯದ ಆಗಿನ ಉಪಕುಲಪತಿಗಳಾದ ಶ್ರೀ ಅಸುತೋಷ್ ಮುಖರ್ಜಿಯವರು ಗುರ್ತಿಸಿದರು. ಶ್ರೀ ರಾಮನ್‌ರವರನ್ನು ಆರ್ಥಿಕ ಆಡಳಿತಜ್ಞರಾಗಿ ಇರಲು ಬಿಟ್ಟರೆ ರಾಷ್ಟ್ರಕ್ಕೆ ಆಗಬಹುದಾದ ಹಾನಿಯನ್ನು ಹಾಗೂ ಭೌತ ವಿಜ್ಞಾನಕ್ಕೆ ಆಗಬಹುದಾದ ಹಾನಿಯನ್ನು ಅವರು ಮುನ್ಸೂಚನೆ ಪಡೆದು ತಪ್ಪಿಸುವ ಮಹತ್ಕಾರ್ಯವನ್ನು ಮಾಡಿದರೆನ್ನಬೇಕು. ಶ್ರೀ ಮುಖರ್ಜಿ ಇವರಲ್ಲಿ ಆಸ್ತೆವಹಿಸದಿದ್ದರೆ ಇಂದಿನ ಡಾ|| ರಾಮನ್‌ರನ್ನು ನಾವು ಪಡೆಯುತ್ತಿದ್ದೆವೋ ಇಲ್ಲವೋ. ಶ್ರೀಅಸುತೋಷ್‌ರವರು ಶ್ರೀ ರಾಮನ್‌ರನ್ನು ಕಲಕತ್ತಾ ವಿಶ್ವವಿದ್ಯಾಲಯದ ಭೌತ ವಿಜ್ಞಾನದ ಮುಖ್ಯಸ್ಥರಾಗಿ ನೇಮಿಸಿಕೊಂಡರು. ಅಂದಿನಿಂದ ತರುಣರಾದ ಶ್ರೀ ರಾಮನ್‌ರ ವಿಜ್ಞಾನದ ಭ್ರಮೆಗೆ ಸಂಪೂರ್ಣ ವಿಕಾಸದ ಅವಕಾಶ ದೊರೆತಂತಾಯಿತು.

೧೯೨೮ರ ಫೆಬ್ರುವರಿ ತಿಂಗಳಲ್ಲಿ ಇವರು "ಬೆಳಕು" ವಿಷಯದ ಮೇಲೆ ಒಂದು "ಹೊಸ ಬೆಳಕು" ಬೀರಿದರು. ಇವರ "ಎಫೆಕ್ಟ್" ಏ "ರಾಮನ್ ಎಫೆಕ್ಟ್" ಆಯಿತು. ಈ "ಎಫೆಕ್ಟ್" ಇವರಿಗೆ ನೊಬೆಲ್ ಪಾರಿತೋಷಕ ದೊರಕಿಸಿದ್ದು. ಬ್ರಿಟಿಷ್ ವೈಜ್ಞಾನಿಕ ಪತ್ರಿಕೆಗಳು ಇವರ "ರಾಮನ್ ಎಫೆಕ್ಟ್" ಬಗ್ಗೆ ಬರೆಯುತ್ತಾ "ಈ ಸಂಶೋಧನೆಯು ಹಿಂದಿನ ಕಾಲದಲ್ಲಿ ಕ್ಷ– ಕಿರಣ ಹಾಗೂ ರಶ್ಮಿ ಚೈತನ್ಯಗಳ ಬಗ್ಗೆ ಮಾಡಿದ ಸಂಶೋಧನೆಗಳಷ್ಟೇ ಮಹತ್ವದ್ದಾಗಿದೆ ಎಂದಿವೆ. ಡಾ|| ರಾಮನ್‌ರ ಹೊಸ ಸಂಶೋಧನೆಯನ್ನು ಗಣಿತ ಶಾಸ್ತ್ರಜ್ಞರು ಹಾಗೂ ರಸಾಯನ ಶಾಸ್ತ್ರಜ್ಞರೂ ಕೂಡ ತಮ್ಮ ತಮ್ಮ ಕ್ಷೇತ್ರಗಳಲ್ಲಿ ಹೊಸ ಸಂಶೋಧನೆಗೆ ಅವಕಾಶವಾಯಿತೆಂಬ ಸಂತಸದಿಂದ ಆಹ್ವಾನಿಸಿದರು.

## ರಾಮನ್ ಎಫೆಕ್ಟ್

ಸರ್ ಸಿ. ವಿ. ರಾಮನ್‌ರವರು ಕಿರಣ ಪೃಥಃಕರಣದ ಬಗ್ಗೆ ಪ್ರಯೋಗಗಳನ್ನು ನಡೆಸಿದರು. ತಮ್ಮ ಸಂಶೋಧನೆಯ ಫಲವಾಗಿ ಈ ವಿಷಯದ ಬಗ್ಗೆ ಲಾರ್ಡ್ ರ್‍ಯಾಲೆಯವರು ಪ್ರತಿಪಾದಿಸಿದ್ದ ತತ್ವಗಳು ತಮಗೆ ಅಂಗೀಕೃತವಾಗಿಲ್ಲವೆಂದು ನಿರ್ಧರಿಸಿದರು. ಶ್ರೀ ರಾಮನ್‌ರವರು ಘನಪದಾರ್ಥ, ದ್ರವ ಪದಾರ್ಥ ಹಾಗೂ ಅನಿಲಗಳಲ್ಲಿ ಕಿರಣ ಪೃಥಃಕ್ಕರಣದ ಬಗ್ಗೆ ಮಾಡಿದ ಪ್ರಯೋಗಗಳನ್ನು ಆಗಿನ ಕಾಲದಲ್ಲಿದ್ದ ಭೌತವಿಜ್ಞಾನ ತತ್ವಗಳ ಸಹಾಯದಿಂದ ಪ್ರತಿಪಾದಿಸಲು ಸಾಧ್ಯವಾಗಲಿಲ್ಲವಾದ್ದರಿಂದ ತಮ್ಮದೇ ಆದ ನಿಯಮಗಳನ್ನು ಪ್ರತಿಪಾದಿಸಬೇಕಾಯಿತು. ಅಂದು ನ್ಯೂಟನ್‌ರವರ ನಿಯಮಗಳ ಅನ್ವಯ ಎಲ್ಲ ಭೌತವಿಜ್ಞಾನದ ಕ್ರಿಯೆ - ಪ್ರತಿಕ್ರಿಯೆಗಳನ್ನು ಉಲ್ಲೇಖಿಸಲ್ಪಡಲಾಗುತ್ತಿತ್ತು. ಈ ತತ್ವವು ಶ್ರೀ ರಾಮನ್‌ರ ಸಂಶೋಧನೆಗಳಿಗೆ ಪೂರ್ಣ ವಿವರಣೆ ಕೊಡಲು ಅಸಮರ್ಥವಾದವು.

ಅಂದು ಜಾರಿಯಲ್ಲಿದ್ದ ತತ್ವಗಳ ಮೇರೆಗೆ ಪೃಥಃಕ್ಕರಣಗೊಂಡ ಕಿರಣಗಳು ಒಂದೇ ಬಣ್ಣ ಹೊಂದಿರಬೇಕಾಗಿತ್ತು ಅಥವಾ ಅಧಿಪಾತ ಕಿರಣದಷ್ಟೇ ತರಂಗದ-ಅಳತೆಯನ್ನು ಅದು ಹೊಂದಿರಬೇಕಾಗಿತ್ತು. ಈ ತತ್ವವು ಶ್ರೀ ರಾಮನ್‌ರ ಸಂಶೋಧನೆಯಂತೆ ಸರಿಯಾಗಿರಲಿಲ್ಲ. ಏಕೆಂದರೆ ಬಣ್ಣದ ಕಿರಣಗಳಿಂದ ಪ್ರಯೋಗ ಮಾಡಿದಾಗ ಪೃಥಃಕರಣಗೊಂಡ ಕಿರಣಗಳು ಅಧಿಪಾತ ಕಿರಣದಷ್ಟೇ ತರಂಗ–ಅಳತೆ ಹೊಂದಿರುತ್ತಿರಲಿಲ್ಲ. ಆದರೆ ಅಧಿಪಾತ ಕಿರಣದಲ್ಲಿಯ ಒಂದೇ ಬಣ್ಣದ ಕಿರಣವು ಅನೇಕ (ದೊಡ್ಡ ಹಾಗೂ ಸಣ್ಣ) ಭಾಗಗಳಾಗಿ ವಿಭಾಗವಾಗುವುದು ಕಂಡು ಬರುತ್ತಿತ್ತು. ಈ ವಿಭಾಗಿಸಲ್ಪಟ್ಟ ಬಣ್ಣಗಳು ಮೂಲ ಅಧಿಪಾತ ಕಿರಣದಲ್ಲಿ ಕಂಡು ಬರುತ್ತಿರಲಿಲ್ಲ. ಈ ವಿಭಾಗಿಸಲ್ಪಟ್ಟ ಅಂಶವನ್ನೇ "ರಾಮನ್ ಎಫೆಕ್ಟ್" ಎಂದು ಕರೆಯಲಾಯಿತು. ಈ 'ರಾಮನ್ ಎಫೆಕ್ಟ್'ನ್ನು ಅದೇ ಕಾಲಕ್ಕೆ ಹೊಸ ಸಂಶೋಧನಾ ರೂಪದಲ್ಲಿ ಬಂದಿದ್ದ "ಕ್ವಾಂಟಮ್ ಮೆಕಾನಿಕ್ಸ್" ತತ್ವಗಳ ಆಧಾರದ ಮೇಲೆ ವಿವರಿಸಲು ಹಾಗೂ ಉಲ್ಲೇಖಿಸಲು ಸಾಧ್ಯವಾಯಿತು.

### ಪ್ರಶಸ್ತಿಗಳ ಪ್ರವಾಹ

೧೯೩೦ರಲ್ಲಿ ನೊಬೆಲ್ ಪಾರಿತೋಷಕ, ಲಂಡನ್ನಿನ ರಾಯಲ್ ಸೊಸೈಟಿಯ ಫೆಲೋಷಿಪ್, ಇಟಾಲಿಯನ್ ಸೊಸೈಟಿ ಆಫ್ ಸೈನ್ಸ್‌ದಿಂದ ಮೆಟ್ಯುಕಿ ಪದಕದ ಪ್ರಶಸ್ತಿ, ರಾಯಲ್ ಸೊಸೈಟಿಯ ಹ್ಯೂಗ್ಸ್ ಪದಕದ ಪ್ರಶಸ್ತಿ, ಪ್ಯಾರಿಸ್, ಫ್ರಾಯ್‌ಬರ್ಗ್ ಮತ್ತು ಗ್ಲಾಸ್ಗೋ ವಿಶ್ವವಿದ್ಯಾಲಯಗಳ ಗೌರವ ಡಾಕ್ಟರೇಟ್ ಪದವಿಗಳು ಮುಂತಾಗಿ ಒಂದರ ನಂತರ ಒಂದು, ಪ್ರಶಸ್ತಿಗಳ ಪ್ರವಾಹವೇ ಹರಿದಂತಾಯಿತು.

### ಡಾ|| ರಾಮನ್‌ರವರ ಇತ್ತೀಚಿನ ಸಂಶೋಧನೆ

ಇವರ ಇತ್ತೀಚಿನ ಸಂಶೋಧನೆ "ಕಣ್ಣು–ಬಣ್ಣ–ಬೆಳಕು" ಇವುಗಳ ಬಗ್ಗೆ ಇದೆ. ದೃಷ್ಟಿ ಹಾಗೂ ಕಣ್ಣಿನ ರಚನೆಗಳ ಬಗ್ಗೆ ವಿವೇಚಿಸುವಾಗ ಕಿರಣಗಳ ಬಗ್ಗೆ ಈಗಿರುವ 'ಅಲೆಗಳಲ್ಲಿಯ ಚಲನದ ವಾದ' ಸಂಪೂರ್ಣವಾಗಿ ಅಸಂಬದ್ಧ ಎಂದಿದ್ದಾರೆ. ಇವರ ವಾದ ಬೆಳಕು ರಶ್ಮಿಕಣಗಳಿಂದ ಕೂಡಿದ್ದಾಗಿದೆ ಎಂದು.

ಇವರು ಕಳೆದ ಮೂರು ನಾಲ್ಕು ವರ್ಷಗಳ ಸಂಶೋಧನೆಯ ಫಲವಾಗಿ ಈ ಹೊಸ ತತ್ವವನ್ನು ಪ್ರತಿಪಾದಿಸಿದ್ದಾರೆ. "ನೇತ್ರದ ಅಕ್ಷಿಪಟಲದ ಭಾಗದಮೇಲೆ ಬೀಳುವ ಪ್ರಕಾಶದ ತೀವ್ರತೆಯ ಮೇಲೆಯೇ ಗೋಚರತೆಯ ಹೊಂದಾಣಿಕೆಯು ನಿರ್ಧರಿಸಲ್ಪಡುವುದು." ಇದೇ ಇವರ ಹೊಸ ಪ್ರತಿಪಾದನೆ. ಈ ಹೊಸ ಸಂಶೋಧನೆಯು ಆಕಾಶಯಾನದಲ್ಲಿ ಬಹಳ ಮಹತ್ವದ್ದಾಗಿದೆ.

ಈಗಿನ ತತ್ವಗಳಂತೆ ಸ್ಕೋಟೋಪಿಕ್ ಮತ್ತು ಫೋಟೋಪಿಕ್ ಎಂದು ಎರಡು ವಿಧದ ದೃಷ್ಟಿಗಳಿವೆ ಎಂದು ಪ್ರತಿಪಾದಿಸ

ಲಾಗಿದೆ. ಆದರೆ ಡಾ|| ರಾಮನ್‌ರವರ ಸಂಶೋಧನೆಯಂತೆ ಅವರು ಈ ಎರಡು ಬಗೆಯ ದೃಷ್ಟಿಗಳಲ್ಲಿ ನಂಬಿಕೆ ಇಲ್ಲ ಎನ್ನುತ್ತಾರೆ.

ಬಣ್ಣ ಕುರುಡುತನ ಹಾಗೂ ದೃಷ್ಟಿ ಮಾಂದ್ಯಗಳಿಗೂ ರಾಡ್ ದೃಷ್ಟಿ (Rod Vision) ಮತ್ತು ಕೋನ್ ದೃಷ್ಟಿ (Cone Vision) ಇವುಗಳಿಗೂ ಸಂಬಂಧವಿಲ್ಲ. ರಾಡ್ ದೃಷ್ಟಿ ಮತ್ತು ಕೋನ್ ದೃಷ್ಟಿ ಈ ಎರಡೂ ಬೇರೆ ಬೇರೆ ವಿಧದ ದೃಷ್ಟಿಗಳಲ್ಲ; ಆದರೆ ಬೆಳಕಿನ ಕಿರಣಗಳ ಮೂಲ ಗುಣದ ಪರಿಣಾಮಗಳು ಎಂದಿದ್ದಾರೆ.

'ದೃಷ್ಟಿ'ಯ ದೃಷ್ಟಿಯಿಂದ ಪ್ರಕಾಶವು ತರಂಗಗಳಿಂದ ರಚಿತವಾಗಿಲ್ಲ, ಆದರೆ ದೃಷ್ಟಿ ಕಣಗಳಿಂದ ರಚಿತವಾಗಿದೆ.

### ವರ್ಣದ್ರವ್ಯ ನಾಶವಿಲ್ಲ

ಅಕ್ಷಿ ಪಟಲದಲ್ಲಿರುವ ವರ್ಣದ್ರವ್ಯಗಳು ನಾಶವಾಗುವುವೆಂಬ ಸಿದ್ಧಾಂತ ಸರಿಯಲ್ಲ ಎಂದು ಇವರು ಹೇಳಿದ್ದಾರೆ. ಇವರ ಸಿದ್ಧಾಂತನಂತೆ ಈ ವರ್ಣದ್ರವ್ಯ (Visual Violet – Visual Purple) ಗಳು ನಾಶವಾಗುವುದಿಲ್ಲ.

ಮಾನವನ ದೃಷ್ಟಿಯ ವಿಶಿಷ್ಟ ಅಂಶವೆಂದರೆ ವಿವಿಧ ಜ್ಯೋತಿಗಳಿಂದ ಮಾನವನ ನೇತ್ರಗಳು ಕೆಲಸ ಮಾಡುತ್ತವೆ. ಶುಭ್ರ ಬೆಳದಿಂಗಳು ಸೂರ್ಯ ಪ್ರಕಾಶದ ದಶಲಕ್ಷದ ಒಂದನೇ ಭಾಗದಷ್ಟಿದೆ. ಕತ್ತಲು ರಾತ್ರಿಗಳಲ್ಲಿ ನೇತ್ರಗಳು ನೋಡಬಲ್ಲವು. ರಾತ್ರಿ ಆಕಾಶದಲ್ಲಿ ಕಾಣುವ ನಕ್ಷತ್ರಗಳೆಲ್ಲವನ್ನು ಸೇರಿಸಿದರು ಅವುಗಳ ಪ್ರಕಾಶ ಚಂದ್ರ ಪ್ರಕಾಶದ ಸಾವಿರದ ಒಂದನೆಯ ಭಾಗದಷ್ಟು ಆಗುವುದು. ಈ ರೀತಿ ಪ್ರಕಾಶದ ವಿವಿಧ ವ್ಯಾಪ್ತಿಗಳಲ್ಲಿ ದೃಷ್ಟಿಯ ಕೆಲಸ ಮಾಡುತ್ತಿರುವುದು ಕಣ್ಣಿನ ಹೊಂದಾಣಿಕೆಯ ಸಾಮರ್ಥ್ಯದಿಂದ. ಕತ್ತಲಲ್ಲಿ ಪ್ರಕಾಶದ ಬಣ್ಣವನ್ನು ಕಂಡುಹಿಡಿಯಲಾಗುವುದಿಲ್ಲ. ದೃಷ್ಟಿಯ ತೀಕ್ಷ್ಣತೆ ಇಲ್ಲದಂತಾಗುವುದು. ಇವೆರಡಕ್ಕೂ ಪರಸ್ಪರ ಸಂಬಂಧವಿರುವುದೆಂಬುದೇ ಡಾ|| ರಾಮನ್‌ರವರ ಹೊಸ ಸಂಶೋಧನೆ.

ಡಾ|| ರಾಮನ್‌ರವರು 'ಸೋಡಿಯಂ ಬೆಳಕಿ'ನ ಪ್ರಯೋಗಗಳನ್ನು ತಮ್ಮ ರಾಮನ್ ಫಂಡಮೆಂಟಲ್ ರಿಸರ್ಚ್ ಇನ್ಸ್ಟಿಟ್ಯೂಟ್‌ದಲ್ಲಿ ನಡೆಸಿದ ಫಲವಾಗಿ ಮೇಲಿನ ಹೊಸ ಸಿದ್ಧಾಂತವನ್ನು ಪ್ರತಿಪಾಸಿದ್ದಾರೆ.

ಡಾ|| ಸಿ. ವಿ. ರಾಮನ್‌ರವರು ತಮ್ಮ ಎಂಭತ್ತನೆಯ ವೃದ್ಧಾಪ್ಯದಲ್ಲೂ ಇಪ್ಪತ್ತರ ಹುಮ್ಮಸ್ಸಿನಿಂದ ವೈಜ್ಞಾನಿಕ ಸಂಶೋಧನೆಗಳನ್ನು ನಡೆಸುತ್ತಿದ್ದಾರೆಂದರೆ ಅವರಿಗೆ ವಿಜ್ಞಾನದಲ್ಲಿರುವ ಅವಿರತ ಶ್ರದ್ಧೆ ಹಾಗೂ

ಅರ್ಪಣಾ ಮನೋವೃತ್ತಿಗಳು ವ್ಯಕ್ತವಾಗುತ್ತವೆ. ಅವರು ತಮ್ಮ ಜೀವನವನ್ನೇ ವಿಜ್ಞಾನಕ್ಕೆ ಮುಡಿಪಿಟ್ಟ ವಿಜ್ಞಾನಯೋಗಿ. ಇವರು ತಾವು ಸ್ಥಾಪಿಸಿರುವ ರಾಮನ್ ಸಂಶೋಧನ ಕೇಂದ್ರ (ಬೆಂಗಳೂರು) ದಲ್ಲಿ ಸಂಶೋಧನೆಗಳನ್ನು ನಡೆಸುತ್ತಿದ್ದಾರೆ.

ಭಾರತವನ್ನು ಅಂತರರಾಷ್ಟ್ರೀಯ ವೈಜ್ಞಾನಿಕ ಭೂಪಟದ ಮೇಲೆ ಇರಿಸಿದ ಮಹಾವಿಜ್ಞಾನಿಗಳಲ್ಲಿ ಒಬ್ಬರಾದ ಡಾ|| ಸಿ. ವಿ. ರಾಮನ್‌ರವರು ಶತಾಯುಷಿಗಳಾಗಲಿ. ನಮ್ಮ ಭಾರತದ ಭಾಗ್ಯೋದಯಕ್ಕೆ, ಭೌತವಿಜ್ಞಾನ ಶಾಸ್ತ್ರದ ಪ್ರಗತಿಗೆ ತಮ್ಮ ಅಮೂಲ್ಯ ಕಾಣಿಕೆಗಳನ್ನು ಅವಿಶ್ರಾಂತವಾಗಿ ಅರ್ಪಿಸಲಿ.



ಶುಕ್ರನು ನಮ್ಮ ಸನಿಹಕ್ಕೆ
ಬರುತ್ತಿದ್ದಾನೆ.

ಪ್ರಪ್ರಥಮವಾಗಿ
ಶುಕ್ರಗ್ರಹವನ್ನು
ತಲುಪಿದ ವಾಹನ

# ರಷ್ಯನ್ ಅಂತರಿಕ್ಷ ನೌಕೆ ವೀನಸ್-೪

ಕಳೆದ ಹತ್ತು-ಹನ್ನೆರಡು ವರ್ಷಗಳಿಂದ ಅಂತರಿಕ್ಷ ಪಯನದತ್ತ ಮಾನವನ ದೃಷ್ಟಿ ಸಾಗಿದೆ. ಅಂತರಿಕ್ಷ ಸಂಶೋಧನೆಯಲ್ಲೂ ಅಮೇರಿಕಾ ಹಾಗೂ ರಷ್ಯಾಗಳ ನಡುವೆ ತೀವ್ರ ಸ್ಪರ್ಧೆ ನಡೆದಿದೆ. ರಷ್ಯಾ ತನ್ನ ಪ್ರಥಮ ಕೃತ್ರಿಮ ಉಪಗ್ರಹ ಸ್ಪುಟ್ನಿಕ್-೧ನ್ನು ಅಕ್ಟೋಬರ್ ೧, ೧೯೫೭ ರಲ್ಲಿ ಹಾರಿಸಿದಾಗ ಪ್ರಬಲಗೊಂಡ ಸ್ಪರ್ಧೆ ದಿನ ದಿನಕ್ಕೆ ತೀವ್ರಗೊಳ್ಳುತ್ತಿದೆ. ಆದರೆ ಇತ್ತೀಚಿಗೆ ರಷ್ಯಾ ದೇಶದ ಅಂತರಿಕ್ಷ ಸಂಶೋಧಕರು ಹಾರಿಸಿದ ವೀನಸ್-೪, ರಷ್ಯಾ ವೈಜ್ಞಾನಿಗಳಿಗೆ ಅಮೇರಿಕನ್ ವಿಜ್ಞಾನಿಗಳಿಗಿಂತ ಮುನ್ನಡೆಯನ್ನು ಒದಗಿಸಿ ಕೊಟ್ಟಿದೆ. ವೀನಸ್-೪ ಶುಕ್ರ ಗ್ರಹದ ಮೇಲೆ ಅಬಾಧಿತವಾಗಿ ತಲುಪಿದ ಪ್ರಥಮ ವಾಹನ. ಈ ಸಾಧನೆಯನ್ನು ತಜ್ಞರು ಬಹಳ ಮಹತ್ವಪೂರ್ಣವಾದುದೆಂದು ಹೇಳುತ್ತಾರೆ. ರಷ್ಯಾ ಅಂತರಿಕ್ಷದ ಯಾನಕ್ಕೆ ಪ್ರಥಮ ಮಾನವನನ್ನು ಕಳುಹಿಸಿತು—ಯೂರಿ ಗ್ಯಾಗರಿನ್‌ರ ಮೂಲಕ. ಇದರಷ್ಟೇ ಮಹತ್ವವಾದ ಸಾಧನೆ ವೀನಸ್-೪ ಶುಕ್ರ ಗ್ರಹವನ್ನು ತಲುಪಿರುವ ಸಾಧನೆ ಎಂದು ಹೇಳಲಾಗುತ್ತದೆ.

ಫೆಬ್ರುವರಿ ೧, ೧೯೬೧ರಲ್ಲಿ ರಷ್ಯಾ ತನ್ನ ಪ್ರಥಮ ಕೃತ್ರಿಮ ಉಪಗ್ರಹ ವೀನಸ್-೧ನ್ನು ಶುಕ್ರ ಗ್ರಹದೆಡೆಗೆ ಹಾರಿಸಿತ್ತು. ಶುಕ್ರ ಗ್ರಹವನ್ನು ತಲುಪುವ ದಿಕ್ಕಿನಲ್ಲಿ ಇದು ಪ್ರಥಮ ಪ್ರಯತ್ನವಾಗಿತ್ತು. ಮಾರ್ಚ ೧೯೬೬ರಲ್ಲಿ ವೀನಸ್-೨ ಮತ್ತು ವೀನಸ್-೩ ಉಪಗ್ರಹಗಳನ್ನು ಹಾರಿಸಿತು. ಆದರೆ ಇವು ಶುಕ್ರ ಗ್ರಹವನ್ನು ಅಪ್ಪಳಿಸಿ ನಾಶ ಹೊಂದಿದವೆಂದು ವರದಿಯಾಯಿತು. ಶುಕ್ರ ಗ್ರಹವನ್ನು ತಲುಪುವಲ್ಲಿ ಕಳೆದ ಆರು ವರ್ಷಗಳಲ್ಲಿ ನಡೆಸಿದ ಪ್ರಯತ್ನಗಳ ಫಲವಾಗಿ



ಮಾಧವಿ



ರಷ್ಯಾ ದೇಶದ ಅಂತರಿಕ್ಷ ತಜ್ಞರು ವೀನಸ್—೪ನ್ನು ಹಾರಿಸಿದ್ದಾರೆ. ಈ ಅಂತರಿಕ್ಷ ನೌಕೆಯು ಅಬಾಧಿತವಾಗಿ ಶುಕ್ರ ಗ್ರಹವನ್ನು ತಲುಪಿ, ಅಲ್ಲಿಯ ವಾತಾವರಣದ ಬಗೆಗೆ ಮಾಹಿತಿಯನ್ನು ಕಳುಹಿಸುತ್ತಿದೆ. ಅಂತರಿಕ್ಷ ಸಂಶೋಧನಾ ಸ್ಪರ್ಧೆಯಲ್ಲಿ ರಷ್ಯಾ ಸಾಧಿಸಿರುವ ಅನೇಕ ಪ್ರಥಮ ವಿಕ್ರಮಗಳಲ್ಲಿ ಇದೂ ಒಂದು ಎಂದು ಹೇಳಬಹುದು. ಶುಕ್ರನ ಮೇಲೆ ಅಬಾಧಿತವಾಗಿ ಇಳಿದ ವಾಹನವೆಂದರೆ ಇದೇ ಪ್ರಥಮವಾದದ್ದು. ಶುಕ್ರನ ಪಾತಳಿಯಿಂದ ಮಾಹಿತಿಯನ್ನು ದೊರಕಿಸಿದುದೇ ಇದೇ ಮೊದಲನೆಯ ಸಲ.

## ವೀನಸ್–೪ರ ಪಯಣ

ಸೋವಿಯತ್ ವಿಜ್ಞಾನಿಗಳು ಇದೇ ಜೂನ್ ೧೨ ರಂದು ವೀನಸ್ ೪ ನ್ನು ಹಾರಿಸಿದರು. ಶುಕ್ರಗ್ರಹವು ಭೂಮಿಯ ಪಾತಳಿಯಿಂದ ೪೫೫ ಲಕ್ಷ ಮೈಲು ದೂರದಲ್ಲಿದೆ. ಈ ಅಂತರಿಕ್ಷ ನೌಕೆಯು ಶುಕ್ರಗ್ರಹವನ್ನು ತಲುಪುವುದನ್ನು ಅರಿಯಲು ಅನೇಕಾನೇಕ ಸೋವಿಯತ್ ವಿಜ್ಞಾನಿಗಳು ನೆರೆದಿದ್ದರು. ಅಕ್ಟೋಬರ್ ೧೭, ೧೯೬೭ ಮಂಗಳವಾರ ನಿಯಂತ್ರಣ ಕೇಂದ್ರದಲ್ಲಿ ಆತುರತೆಯಿಂದ ವಿಜ್ಞಾನಿಗಳು ಕಾದಿದ್ದರು. ಅವರು ವೀನಸ್–೪ ಹೇಗೆ ಶುಕ್ರಗ್ರಹದ ಮೇಲೆ ಇಳಿಯುತ್ತದೆಂದು ನೋಡುವ ಕುತೂಹಲ

ದಲ್ಲಿದ್ದರು. ಮಾಸ್ಕೋ ವೇಳೆ ೫.೪೨ (ಭಾರತೀಯ ವೇಳೆ ೮.೧೨) ಕ್ಕೆ ವೀನಸ್-೪ ನಿಂದ ಸಂಕೇತಗಳು ಬರುತ್ತಿದ್ದವು. ಇದ್ದಕ್ಕಿದ್ದಂತೆ ನಿಯಂತ್ರಣ ಕೇಂದ್ರದಲ್ಲಿ ವಿವಿಧ ಬಣ್ಣಗಳ ಕಾಂತಿ ಮಿಂಚಿತು! ಸ್ವಯಂಚಾಲಿತ ಯಂತ್ರದಿಂದ ಸಂಕೇತಗಳು ಕಾಣಲಾರಂಭಿಸಿತು. ವೀನಸ್ ೪ನ್ನು ಶುಕ್ರಗ್ರಹದ ಸುತ್ತಲಿನ ಅಂತರಿಕ್ಷದಲ್ಲಿ ಸರಿಯಾದ ದಿಕ್ಕಿನಲ್ಲಿ ತಿರುಗಿಸಲು ಸಣ್ಣ ಸಣ್ಣ ಕ್ಷಿಪಣಿಗಳನ್ನು ಸುಡಲಾಯಿತು. ಇದನ್ನು ನೋಡಿ ಎಲ್ಲವೂ ಯೋಜಿಸಿದಂತೆ ನಡೆದಿದೆ ಎಂಬ ಸಮಾಧಾನ ಅಲ್ಲಿಯ ತಜ್ಞರಿಗೆ ದೊರೆಯಿತು. ಈ ಅಂತರಿಕ್ಷ ನೌಕೆಯಿಂದ ವಿಷಯ ಪ್ರಸಾರಗಳು ಪ್ರವಾಹದಂತೆ ಬರಲಾರಂಭಿಸಿತ್ತು. ಮುಂಜಾನೆ ೭.೦೦ ಗಂಟೆಗೆ ಶುಕ್ರಗ್ರಹವು ಅಂತರಿಕ್ಷ ನೌಕೆಯನ್ನು ಎಳೆಯುತ್ತಿದ್ದುದು. ಭಾಸವಾಗುತ್ತಿತ್ತು. ಆಗ ವೀನಸ್-೪ ಶುಕ್ರಗ್ರಹದ ಪಾತಳಿಯಿಂದ ಕೇವಲ ೧೫,೦೦೦ ಕಿ. ಮೀಟರ್ ದೂರದಲ್ಲಿತ್ತು. ೭.೨೫ ಕ್ಕೆ ನಿಯಂತ್ರಣ ಕೇಂದ್ರದಿಂದ ಅಂತಿಮ ಆಜ್ಞೆಯನ್ನು ಅಂತರಿಕ್ಷ ನೌಕೆಗೆ ಕಳುಹಿಸಲಾಯಿತು. ಆಗ ಅದು ಶುಕ್ರಗ್ರಹದ ಮೇಲೆ ಇಳಿಯುವ ಕಾಲ ಸನ್ನಿಹಿತವಾಗಿತ್ತು. ಅಂತರಿಕ್ಷ ನೌಕೆ ಶುಕ್ರಗ್ರಹವನ್ನು ಸಮೀಪಿಸಿದಂತೆ ವಿಜ್ಞಾನಿಗಳ ಕುತೂಹಲ ಹೆಚ್ಚುತ್ತಿತ್ತು. ಇನ್ನು ಕೇವಲ ೪೦೦-೫೦೦ ಕಿ. ಮೀ. ಅಂತರವಿದ್ದಾಗ ಅಂತರಿಕ್ಷ ನೌಕೆಯಿಂದ ಅಂತರಿಕ್ಷ ಕ್ಯಾಪ್ಸೂಲ್ ಬೇರ್ಪಟ್ಟು, ತನ್ನಷ್ಟಕ್ಕೆ ತಾನೇ ಹೋಗಿ ಶುಕ್ರಗ್ರಹದ ಮೇಲೆ ಇಳಿಯುವ ಕಾಲ. ಆ ಅಂತರಿಕ್ಷ ಕ್ಯಾಪ್ಸೂಲನ್ನು ವೆನೆರಾ-೪ ಎಂದು ರಷ್ಯನ್‌ರು ಕರೆದಿದ್ದಾರೆ. ಅಂದು ೭-೩೪ ಕ್ಕೆ ಸರಿಯಾಗಿ ಚಾರಿತ್ರ್ಯಾತ್ಮಕ ಘಟನೆ ಸಂಭವಿಸಿತು. ಗೋಳಾಕಾರದ ಕ್ಯಾಪ್ಸೂಲ್ ವೆನೆರಾ-೪ ವೀನಸ್-೪ ರಿಂದ ಬೇರ್ಪಟ್ಟು ಶುಕ್ರಗ್ರಹದ ಮೇಲೆ ಇಳಿಯಲಾರಂಭಿಸಿತು. ವೈಮಾನಿಕ ಕೊಡೆಯ ಆಧಾರದಿಂದ ವೆನೇರಾ-೪ ಶುಕ್ರಗ್ರಹದೆಡೆ ಇಳಿಯತೊಡಗಿತ್ತು ಇದು ಇಳಿದಂತೆ ಸಂಕೇತಗಳೂ ಬರುತ್ತಿದ್ದವು.

ವೀನಸ್-೪ ನ್ನು ಅಂತರಿಕ್ಷಕ್ಕೆ ಒಯ್ದ ಅಂತರಿಕ್ಷ ವಿಮಾನಕ್ಕೆ ವೀನಸ್-೪ ನ್ನು ಸಕ್ಕರೆಯ ಕೊಕ್ಕಿಯಿಂದ ಸಿಕ್ಕಿಸಿದ್ದರೆಂದು ವರದಿಯಾಗಿದೆ. ಇದಕ್ಕೆ ಕಾರಣವೆಂದರೆ, ಒಂದು ವೇಳೆ ಅಂತರಿಕ್ಷ ವಿಮಾನವು ನೀರಿನಲ್ಲಿ ಬಿದ್ದರೆ, (ಯಾವುದಾದರೂ ಅನಾಹುತವಾಗಿ) ಆಗ ಸಕ್ಕರೆಯ ಕೊಕ್ಕಿ ಕರಗಿ ಅದರಲ್ಲಿಯಡಗಿದ್ದ ಒಂದು ಸ್ಪ್ರಿಂಗ್ ದ ಸಹಾಯದಿಂದ ವೀನಸ್-೪ ನೀರಿನ ಮೇಲಕ್ಕೆ ಹಾರುವ ವ್ಯವಸ್ಥೆಯಿತ್ತೆಂದು ಹೇಳಲಾಗಿದೆ. [ಯಾವಾಗಲೂ ಅಂತರಿಕ್ಷ ನೌಕೆಯನ್ನು ಅಂತರಿಕ್ಷಕ್ಕೆ ಒಯ್ಯಲು ಅದನ್ನು ಅಂತರಿಕ್ಷ ವಿಮಾನಕ್ಕೆ ತಗಲು ಹಾಕಿ ಕಳುಹಿಸುತ್ತಾರೆ. ಇದಕ್ಕೆ ಕಾರಣವೆಂದರೆ ಅಂತರಿಕ್ಷ ನೌಕೆಯಲ್ಲಿ ಬಳಸ

ಲಾಗುವ 'ಫ್ಯುಯಲ್' ಬಹಳ ಕಿಮ್ಮತ್ತಿನದೂ ಹಾಗೂ ಅದು ಅಂತರಿಕ್ಷ ನೌಕೆಯ ಪಯಣಕ್ಕೆ ಸಂಪೂರ್ಣವಾಗಿ ಉಪಯೋಗವಾಗಲೆಂದು ಈ ವಿಧಾನವನ್ನು ಪಾಲಿಸಲಾಗುತ್ತದೆ. ]

### ಶುಕ್ರಗ್ರಹದಿಂದ ಬಂದ ವರದಿಗಳು

ವೆನೆರಾ-೪ ರಿಂದ ಬಂದ ಪ್ರಸಾರಗಳ ಆಧಾರದಿಂದ ಶುಕ್ರ ಗ್ರಹದ ವಾತಾವರಣವು ೪೦ ರಿಂದ ೨೮೦ ಡಿಗ್ರಿ ಸೆಂಟಿಗ್ರೇಡ್‌ದಷ್ಟು ಉಷ್ಣತೆ ಹೊಂದಿದೆ. ಅಲ್ಲಿಯ ವಾತಾವರಣದ ಒತ್ತಡವು ಭೂಮಿಯ ಮೇಲಿನ ವಾತಾವರಣದ ೧೫ ಪಟ್ಟು ಇದೆ. ಅಲ್ಲಿಯ ವಾತಾವರಣದಲ್ಲಿ ಹೆಚ್ಚು ಪ್ರಮಾಣದಷ್ಟು ಅಂಗಾರಾಮ್ಲ ವಾಯುವಿದೆ. ಕೇವಲ ೧.೫% ರಷ್ಟು ಮಾತ್ರ ಜಲಜನಕ ವಾಯು ಮತ್ತು ನೀರಿನ ಬಾಷ್ಪವು ಇದೆ. ನೈಟ್ರೋಜನ್‌ದ ಅಂಶ ಬಹಳಷ್ಟು ಕಡಿಮೆಯ ಪ್ರಮಾಣದಲ್ಲಿ ಮಾತ್ರ ಕಂಡಿದೆ.

ಭೂಮಿಯ ವಾತಾವರಣದಲ್ಲಿ ೨೧% ಪ್ರಾಣವಾಯುವಿದ್ದು ನೀರಿನ ಬಾಷ್ಪವು ೪ ರಷ್ಟು ಇರುತ್ತದೆ.

ವೀನಸ್-೪ ಶುಕ್ರಗ್ರಹದ ವಾತಾವರಣವನ್ನು ಹೊಕ್ಕುವಾಗ ಒಂದು ಸೆಕೆಂಡಿಗೆ ೧೧ ಕಿ.ಮೀ. ದಷ್ಟು ವೇಗದಿಂದ ಪ್ರಯಾಣ ಮಾಡಿತು.

ಶುಕ್ರಗ್ರಹದಿಂದ ವೆನೆರಾ-೪ ಕ್ಯಾಪ್ಸೂಲ್ ೯೦ ಮಿನಿಟುಗಳ ಕಾಲ ಸಂಕೇತಗಳನ್ನು ಕಳುಹುತ್ತಿತ್ತು. ಆದರೆ ಇದಾದ ನಂತರ ಏತಕ್ಕೆ ಪ್ರಸರಣಗಳನ್ನು ಕಳುಹಿಸಿಲ್ಲವೆಂದು ಇನ್ನೂ ತಿಳಿದಿಲ್ಲ. ಶುಕ್ರಗ್ರಹದ ಸುತ್ತಲಿನ ವಾತಾವರಣದಲ್ಲಿ ಗುರ್ತಿಸುವಷ್ಟು ಅಯಸ್ಕಾಂತದ ಆಕರ್ಷಣಾ ಕ್ಷೇತ್ರವಾಗಲಿ, ರಶ್ಮಿ ಪ್ರಸಾರದ ಪಟ್ಟಿಗಳಾಗಲೀ ಇಲ್ಲವೆಂದು ಕಂಡುಬಂದಿದೆ. ಆದರೆ ಶುಕ್ರಗ್ರಹದ ಸುತ್ತಲು ಜಲಜನಕದ ಪ್ರಭಾ ವಲಯವನ್ನು ಗುರ್ತಿಸಲಾಗಿದೆ.

### ಬ್ರಿಟಿಷ್ ಅಂತರಿಕ್ಷ ಸಂಶೋಧಕರ ಸಹಾಯ

ಪ್ರಪ್ರಥಮವಾಗಿ ಈ ಸಲ ರಷ್ಯನ್ ಅಂತರಿಕ್ಷ ಸಂಶೋಧಕರು ಬ್ರಿಟಿಷ್ ಅಂತರಿಕ್ಷ ಸಂಶೋಧಕರ ಸಹಕಾರವನ್ನು ತೆಗೆದುಕೊಂಡಿದ್ದಾರೆ. ಅಂದರೆ ವೀನಸ್-೪ ರಿಂದ ಬರುವ ಪ್ರಸಾರಗಳನ್ನು ಸ್ವೀಕರಿಸಿ ಅದು ಶುಕ್ರಗ್ರಹದ ಮೇಲೆ ಇಳಿಯುತ್ತದೆಯೋ ಇಲ್ಲವೋ ಎಂಬುದನ್ನು ಗುರ್ತಿಸಲು ಕೇಳಿಕೊಂಡಿತ್ತು. ಇಂಗ್ಲೆಂಡಿನ "ಜೋಡ್ರೆಲ್ ಬ್ಯಾಂಕ ಸ್ಪೇಸ್ ಸ್ಟೇಷನ್" ದಲ್ಲಿ ಈ ಸಹಕಾರವನ್ನು ಬ್ರಿಟಿಷ್ ತಜ್ಞರು ಒದಗಿಸಿದರು. ಶುಕ್ರಗ್ರಹದ ಮೇಲೆ ವೀನಸ್-೪ ಇಳಿದಾಗ ಪ್ರಸಾರಗೊಂಡ ಸಂಕೇತಗಳು ಸ್ವೀಕರಿಸಲಾದುವು. ರಷ್ಯನ್ನರು ವೀನಸ್-೪ ಇಳಿಯುತ್ತಿದೆ ಎಂದು ಸಾರಿದ ೮೦ ನಿಮಿಷಗಳ ಕಾಲದವರೆಗೆ ಸಂಕೇತಗಳನ್ನು ಸ್ವೀಕರಿಸಲಾಯಿತು. ಭಾರತೀಯ ವೇಳೆ ೮.೧೨

### ಅಂತರಿಕ್ಷ ಸಂಶೋಧನೆಯಲ್ಲಿ ರಶಿಯುದ ಪ್ರಥಮ ಸಾಧನೆಗಳು

- ಅಕ್ಟೋಬರ್, ೧೯೫೭— ಪ್ರ ಥ ಮ ಕೃತ್ರಿಮ ಉಪಗ್ರಹ ಸ್ಪುಟ್ನಿಕ್– ೧.
- ನವ್ಹಂಬರ್, ೧೯೫೭- ಪ್ರಥಮ ಪ್ರಾಣಿ ಲೈಕಾ ( ನಾಯಿಯನ್ನು ) ಹಾರಿಸಿದ್ದು.
- ಜನವರಿ, ೧೯೫೯— ಪೃಥ್ವಿಯ ಸುತ್ತು ಸುತ್ತಿದ ಪ್ರಥಮ ಅಂತರಿಕ್ಷ ನೌಕೆ ಲ್ಯೂನಾ– ೧.
- ಸೆಪ್ಟಂಬರ್, ೧೯೫೯— ಚಂದ್ರನಿಗೆ ಮೊದಲ ಬಾರಿ ತಾಕಿದ ಅಂತರಿಕ್ಷ ನೌಕೆ ಲ್ಯೂನಾ– ೨.
- ಅಕ್ಟೋಬರ್, ೧೯೫೯— ಚ ಂ ದ್ರ ನ ಅಗೋಚರ ಭಾಗಗಳ ಚಿ ತ್ರ ವ ನ್ನು ಲ್ಯೂನಾ– ೩ ಕಳುಹಿಸಿತು.
- ಆಗಸ್ಟ್, ೧೯೬೦– ಅಂತರಿಕ್ಷದಲ್ಲಿ ಪ್ರದಕ್ಷಿಣೆ ಹಾಕಿ ಭೂಮಿಗೆ ಮರಳಿ ಬಂದ ಪ್ರಥಮ ಪ್ರಾಣಿಗಳು– ಸ್ಟೆಲ್ಕಾ ಮತ್ತು ಬೆಲ್ಕಾ ಇವುಗಳನ್ನು ಕೊಂಡೊಯ್ದ ಕಾಸ್ಮಾಸ್– ೨ ಹಾರಿಸಿದ್ದು.
- ಫೆಬ್ರುವರಿ, ೧೯೬೧– ಇನ್ನೊಂದು ಗ್ರಹದೆಡೆಗೆ ಹಾರಿಸಿದ ಪ್ರಥಮ ಉಪಗ್ರಹ ವೀನಸ್– ೧.
- ಎಪ್ರಿಲ್, ೧೯೬೧— ಅ ಂ ತ ರಿ ಕ್ಷ ಯಾತ್ರೆ ಕೈಕೊಂಡ ಪ್ರಥಮ ಮಾನವ ಶ್ರೀ ಯೂರಿ ಗ್ಯಾ ಗ ರಿ ೕ ನ್ ರ ನ್ನು ಕೊಂಡೊಯ್ದು ಭೂಮಿಗೆ ಪರತ ತಂದ ಅಂತರಿಕ್ಷ ನೌಕೆ ವೋಸ್ಟಾಕ್– ೧.
- ೧೭ ಅಕ್ಟೋಬರ್ ೧೯೬೭– ಉಪಗ್ರಹ ವೀನಸ್– ೪. ಪ್ರಪ್ರಥಮವಾಗಿ ಶುಕ್ರ ಗ್ರಹವನ್ನು ತಲುಪಿದ್ದು.

ಗಂಟೆಗೆ ಶುಕ್ರಗ್ರಹದಿಂದ ಪ್ರಾರಂಭವಾದ ಪ್ರಸಾರವು ಭಾರತೀಯ ವೇಳೆ ೧೦.೦೮ ರ ವರೆಗೆ ಬ್ರಿಟಿಷ್ ಕೇಂದ್ರದಲ್ಲಿ ಸ್ವೀಕರಿಸಲಾಯಿತು. ಮುಂಜಾನೆ ೧೦.೦೮ ಗಂಟೆಗೆ ಈ ಪ್ರಸಾರ ಸಂಕೇತಗಳು ಇದ್ದಕ್ಕಿದ್ದಂತೆಯೇ ನಿಂತು ಹೋಯಿತು.

ಬ್ರಿಟಿಷ್ ಕೇಂದ್ರದ ಮುಖ್ಯಸ್ಥ ಸರ್ ಬೆ ನಾ ರ್ ಡ್ ್ ರ ವ ರು "ರಷ್ಯನ್ನರ ಈ ಪ್ರಯೋಗ ಬಹಳ ಮಹತ್ವ ಪೂರ್ಣವಾದದ್ದು" ಎಂದಿದ್ದಾರೆ.

ಅ ಮೇ ರಿ ಕ ನ್ ಅಂತರಿಕ್ಷಯಾನದ ಸಂಶೋಧನೆಯ ಮುಖ್ಯಸ್ಥ ಡಾ|| ಐ.ಆರ್. ಷೆಪ್ಪರ್ಡ್‌ರವರು ಈ ಬಗ್ಗೆ ತಮ್ಮ ಪ್ರತಿಕ್ರಿಯೆಯನ್ನು ವ್ಯಕ್ತ ಪಡಿಸುತ್ತಾ, "ಇದು ಬಹಳ ಮಹತ್ವಪೂರ್ಣವಾದ ಮುನ್ನಡೆ" ಎಂದಿದ್ದಾರಲ್ಲದೆ "ರಷ್ಯನ್ನರ ಅಂತರಿಕ್ಷ ಕ್ಯಾಪ್ಸೂಲ್ ಸ್ವತಂತ್ರವಾಗಿ ಶುಕ್ರಗ್ರಹದ ಮೇಲೆ ಇಳಿದಿದ್ದರೆ ಅದು ಬಹಳ ಮಹತ್ವವಾದದ್ದು" ಎಂದಿದ್ದಾರೆ.

### ಅಂತರಿಕ್ಷಯಾನದ ಪ್ರಗತಿಯ ಹಿನ್ನೆಲೆ

ರಷ್ಯಾ ದೇಶವು ಇಲ್ಲಿಯ ವರೆಗೆ ೧೬ ನೌಕೆಗಳನ್ನು ಇತರ ಗ್ರಹಗಳೆಡೆ ಹಾರಿಸಿದೆ. ಇದರಲ್ಲಿ ೯ ಶುಕ್ರ ಗ್ರಹದೆಡೆ ಹಾಗೂ ೭ ಮಂಗಳ ಗ್ರಹದೆಡೆ. ಈ ೧೬ ನೌಕೆಗಳೂ ಅಪಯಶಸ್ವಿಯಾಗಿವೆ.

ಅಮೇರಿಕಾ ದೇಶವು ೧೯೬೨ರಲ್ಲಿ ಶುಕ್ರ ಗ್ರಹಕ್ಕೆ ಪ್ರಥಮ ಮ್ಯಾರಿನರ್ ಕಳುಹಿಸಿತು. ೧೯೬೪ರಲ್ಲಿ ಮಂಗಳ ಗ್ರ ಹ ಕ್ಕೆ

ಒಂದು ಅಂತರಿಕ್ಷ ನೌಕೆಯನ್ನು ಹಾರಿಸಿತ್ತು. ಹೋದ ತಿಂಗಳಲ್ಲೇ ಅಮೇರಿಕನ್ನರ ಮ್ಯಾರಿನರ್ – ೫ (ಇದನ್ನು ಅಮೇರಿಕಾ ಜೂನ್– ೧೪ರಂದು ಹಾರಿಸಿತ್ತು) ಶುಕ್ರ ಗ್ರಹದಿಂದ ೨೫೦೦ ಮೈಲು ಅಂತರದ ವರೆಗೆ ಮುಟ್ಟಿದ ವರದಿ ಬಂದಿದೆ. ಆದರೆ ಅಮೇರಿಕಾ ದೇಶವು ೧೯೬೯ರ ವರೆಗೆ ತನ್ನ ಅವಳಿ–ಜವಳಿ ಮ್ಯಾರಿನರ್ ಅಂತರಿಕ್ಷ ನೌಕೆಯನ್ನು ಹಾರಿಸುವುದನ್ನು ಮುಂದೂಡಿರುವುದರಿಂದ ಅಮೇರಿಕಾ ಅಂತರಿಕ್ಷ ಸಂಶೋಧನೆಯಲ್ಲಿ ರಷ್ಯನ್ನರಿಗಿಂತ ಸ್ವಲ್ಪ ಹಿಂದಿದೆ ಎಂದು ತಜ್ಞರ ಅಭಿಪ್ರಾಯ.

**ರಷ್ಯಾದ ಮುನ್ನಡೆ**

ರಷ್ಯಾ ತನ್ನ ವೀನಸ್ ೪ ಶುಕ್ರ ಗ್ರಹ ತಲುಪಿದ ನಂತರ ಅಮೇರಿಕೆಗಿಂತ ನಾಲ್ಕು ವರ್ಷಗಳಾದರೂ ಅಂತರಿಕ್ಷ ಸಂಶೋಧನೆಯಲ್ಲಿ ಮುಂದಿದೆ ಎಂದು ತಜ್ಞರ ಅಭಿಪ್ರಾಯವಾಗಿದೆ.

**ಅಂತರಿಕ್ಷ ಸಂಶೋಧನೆಯ ಬಗ್ಗೆ ಕೆಲ ಅಭಿಪ್ರಾಯಗಳು**

ಅಂತರಿಕ್ಷ ಯಾನಕ್ಕೆ, ಅಂತರಿಕ್ಷ ಸಂಶೋಧನೆಗೆ ಬಹಳಷ್ಟು ಹಣ ಖರ್ಚಾಗುತ್ತಿದೆ. ರಷ್ಯನ್ನರ ವರದಿಯಂತೆ “೧೦೦ ಟನ್ ತೂಕದ ಅಂತರಿಕ್ಷ ನೌಕೆ ಭೂಮಿಯಿಂದ ಹಾರಿಸಿದರೆ ಅದು ಅಂತರಿಕ್ಷವನ್ನು ಮುಟ್ಟಿ ಪರತ ಬರಬೇಕಾದರೆ ಒಂದು ಟನ್ನಿನ ತೂಕದ ಒಂದು ಪೆಟ್ಟಿಗೆ ಬಂದರೆ ಹೆಚ್ಚು” ಎಂದು. ಇದರಿಂದ ಅಂತರಿಕ್ಷ ಸಂಶೋಧನೆಯಲ್ಲಿ ೧೦೦ : ೧ ಪ್ರಮಾಣದ ಪರಿಮಾಣದಷ್ಟು ವಾಸ್ತವಿಕವಾಗಿ ಹಿಂದೆ ಪಡೆಯಲು ಸಾಧ್ಯವಾಗಿದೆಯಷ್ಟೆ. ಇದರಂತೆಯೇ ಮಂಗಳ ಗ್ರಹಕ್ಕೆ ಅಂತರಿಕ್ಷ ನೌಕೆ ಕಳುಹಿಸಿದಾಗ ೧೦೦೦ : ೧ದಷ್ಟೇ ಹಿಂದೆ ಬರುತ್ತದೆ. ಅಂದರೆ ೧೦೦೦ ಟನ್ ತೂಕದ ಅಂತರಿಕ್ಷ ನೌಕೆ ಹೋದರೆ ಅಲ್ಲಿಂದ ಬರುವುದು ಕೇವಲ ೧ ಟನ್‌ದಷ್ಟು ಮಾತ್ರ. ಹೀಗಿದ್ದಾಗ ಈ ಸಂಶೋಧನೆಗಳಿಗೆ ಅಮೇರಿಕಾ, ರಷ್ಯಾ, ಬ್ರಿಟನ್ ಇವುಗಳು ಸ್ವತಂತ್ರ ಪ್ರಯೋಗಗಳಿಂದ ಎಷ್ಟೋ ಕೋಟ್ಯಾವಧಿ ಪ್ರಮಾಣದಲ್ಲಿ ವೆಚ್ಚ ಮಾಡುತ್ತಿದ್ದಾರೆಂಬುದು ನಿರ್ವಿವಾದ. ಈ ಸಂಶೋಧನೆಗಳು ಇಂದಿಲ್ಲ– ನಾಳೆ ಸಂಪೂರ್ಣ ಫಲಕಾರಿಯಾಗುವುದರಲ್ಲಿ ಸಂದೇಹವಿಲ್ಲವಾದರೂ ಅನೇಕರ ದೃಷ್ಟಿಯಲ್ಲಿ ಈ ಎಲ್ಲ ಕಾರ್ಯಕ್ರಮಗಳನ್ನು (ಅಂತರಿಕ್ಷ ಸಂಶೋಧನೆಗೆ ಸಂಬಂಧಪಟ್ಟ) ಈ ದಿಕ್ಕಿನಲ್ಲಿ ಶ್ರಮಿಸುತ್ತಿರುವ ಎಲ್ಲ ದೇಶಗಳೂ ಕೂಡಿ, ಒಂದು ಏಕಮೇವ ಕಾರ್ಯಕ್ರಮವನ್ನು ರಚಿಸಿ, ಅದರಂತೆ ಕಾರ್ಯ ಮಾಡಿದರೆ ಬಹಳ ಪ್ರಯೋಜನಕಾರಿ ಎಂದಿದೆ. ದಿನ ದಿನಕ್ಕೆ ವಾದ–ವಿವಾದಗಳ ಜಂಜಾಟದಲ್ಲಿಯೂ ಕೂಡ, ಸ್ಪರ್ಧಾತ್ಮಕ ಹೋರಾಟ ನಡೆದಿರುವಾಗಲೂ ಕೂಡ ಈ ಪ್ರಗತಿಪರ ದಿಕ್ಕಿನಲ್ಲಿ ಕಾರ್ಯ ನಡೆದರೆ ಮಾನವನು ತನ್ನ ಸುತ್ತಲಿನ ಗ್ರಹಗಳಿಗೆ ಶೀಘ್ರವಾಗಿ ಹೋಗಲು ಅನುಕೂಲವಾಗುತ್ತದೆ. ಅಲ್ಲಾದರೂ ಶಾಂತಿಯುತವಾಗಿ ಜೀವಿಸುವ ಸುಯೋಗ ದೊರೆಯುತ್ತದೆ.



ಕನ್ನಡದಲ್ಲಿ ಪ್ರಪ್ರಥಮವಾಗಿ ಪ್ರಕಟವಾಗುತ್ತಿರುವ




ಸಂಪಾದನೆ :


ಪ್ರೊ|| ಕೆ. ಎಸ್. ಶರ್ಮ,
ಎಂ.ಎ.,ಎಲ್‌ಎಲ್.ಬಿ.,ಡಿ.ಪಿ.ಎ.

ಡಾ|| ವಾ. ದ. ಬೇಂದ್ರೆ,
ಎಂ.ಎ.,ಪಿಹೆಚ್.ಡಿ.

ಶ್ರೀ ವ್ಹಿ. ಆರ್. ಪಾಟೀಲ್,
ಬಿ.ಎ.,ಎಲ್‌ಎಲ್.ಬಿ.

ಶ್ರೀ ಐ. ಆರ್. ಜೇವೂರ್,
ಬಿ.ಎಸ್‌ಸಿ.,ಬಿ.ಇಡಿ.


## - ಐ -

**ಐ**ಇ:— ಆಸಾಮದಲ್ಲಿಯ ಒಂದು ನದಿ. ಇದರ ಉದ್ದಳತೆ ೧೫ ಮೈಲು ನಾಲ್ಕು ಟನ್ ಭಾರದ ನಾವೆಗಳು ಇಲ್ಲಿ ಓಡಾಡುತ್ತವೆ. ಇದು ಭೂತಾನದಲ್ಲಿ ಉಗಮ ಹೊಂದಿ, ಗೋಲಾಪೂರ ಜಿಲ್ಲೆಯೊಳಗಿಂದ ಹಾದು, ಮನಾಸ ಎಂಬ ನದಿಗೆ ಬಂದು ಕೂಡುತ್ತದೆ.

**ಐ**ಇಜಲ:— ಆಸಾಮದಲ್ಲಿ ಲುಶಾಇ ಎಂಬ ಒಂದು ಗುಡ್ಡುಗಾಡು ಪ್ರದೇಶವಿದೆ:— ಉ. ಅ. ೨೩.೧ ರಿಂದ ೨೪.೧೯ ಮತ್ತು ಪೂ. ರೇ. ೯೨.೧೬ ರಿಂದ ೯೩.೨೬. ಈ ಜಿಲ್ಹೆಯಲ್ಲಿ ೧೨೫ ಹಳ್ಳಿಗಳಿವೆ.

ಈ ಪ್ರದೇಶದಲ್ಲಿ ಐಇಜಲ ಎಂಬುದು ಒಂದು ಮಹತ್ವದ ಊರು (ಉ.ಅ. ೨೩.೪ ಮತ್ತು ೯೨.೪೪). ಇದು ಗುಡ್ಡದ ತುದಿಗೆ, ಸಮುದ್ರ ಪಾತಳಿಯಿಂದ ೩೫೦೦ ಫೂಟು ಎತ್ತರದ ಮೇಲಿದೆ. ಜನಸಂಖ್ಯೆ ಸುಮಾರು ಎರಡೂವರೆ ಸಾವಿರ. ಮಳೆಯು ಸರಾಸರಿ ೮೦ ಇಂಚಿನವರೆಗೆ ಆಗುತ್ತದೆ. ತಂಪು

ಹವೆ, ಸೈನ್ಯದ ಠಾಣೆ. ಇಲ್ಲಿ ಒಂದು ದವಾಖಾನೆ ಹಾಗೂ ಕಾರಾಗೃಹವಿದೆ. ಇಲ್ಲಿ ನೀರಿನ ಕೊರತೆ ಇತ್ತು. ಆದರೆ, ಇತ್ತೀಚೆ ಸಾಕಷ್ಟು ಹಣವನ್ನು ವೆಚ್ಚ ಮಾಡಿ ಮಳೆಯ ನೀರನ್ನು ಸಂಗ್ರಹಿಸುವ ವ್ಯವಸ್ಥೆಯನ್ನು ಮಾಡಲಾಗಿದೆ.

**ಅಕಬರ್–ಸಯ್ಯದ್ ಹುಸೇನ್ ಅಲ್ಲಾಹಾಬಾದಿ:—** ಇವನು ಭಾರತೀಯ ಮುಸ್ಲಿಮ್ ಕವಿ. ಇವನ ಕಾವ್ಯನಾಮ ಅಕಬರ. ಇವನು ಉರ್ದು ಕಾವ್ಯಗಳನ್ನು ರಚಿಸಿದನು. ೧೮೪೬ರಲ್ಲಿ ಅಲಹಾಬಾದಿನ ಬಳಿ ಜನಿಸಿದನು. ವಕೀಲಿ ವೃತ್ತಿ ಮಾಡಿ, ಬ್ರಿಟಿಶ್ ಸರ್ಕಾರದಲ್ಲಿ ನ್ಯಾಯಾಧೀಶನಾಗಿ ಸೇವೆ ಸಲ್ಲಿಸಿ ೧೯೦೩ರಲ್ಲಿ ನಿವೃತ್ತಿಗೊಂಡು ೧೯೨೧ರಲ್ಲಿ ಮೃತಪಟ್ಟನು.

ಇವನ ಕಾವ್ಯಗಳು ಅಂದಿನ ಸಾಮಾಜಿಕ, ರಾಜಕೀಯ ಹಾಗೂ ಮತೀಯ ಸನ್ನಿವೇಶಗಳಿಗೆ ಹಿಡಿದ ಕನ್ನಡಿಯಂತಿದ್ದಿತು. ಇವನು ಹಾಸ್ಯಭರಿತ ಲೇಖನಗಳಿಂದ ಸಾಮಾಜಿಕ ಹಾಗೂ ರಾಜಕೀಯ ವಿಚಾರಗಳನ್ನು ಮಾರ್ಮಿಕವಾಗಿ ಬಿಂಬಿಸುತ್ತಿದ್ದನು. **"ಅಸನ್ ಅಲ್ ಅಸರ್"** (Mouthpiece of the age)ಎಂಬ ಬಿರುದನ್ನು ಇವನಿಗೆ ಕೊಟ್ಟು ಗೌರವಿಸಲಾಗಿತ್ತು. ಇವನ ಕಾವ್ಯಗಳ ಸಂಗ್ರಹವು **ಕುಲ್ಲಿಯಾತ್–ಇ–ಅಕಬರ್** ಎಂಬ ಹೆಸರಿನಲ್ಲಿ ನಾಲ್ಕು ಸಂಪುಟಗಳಗಲ್ಲಿ ಪ್ರಕಟವಾಗಿವೆ.

ಇವನ **ಗಾಂಧಿನಾಮಾ** ಸಂಗ್ರಹವು ಅಂದಿನ ಬ್ರಿಟಿಶರ ವಿರುದ್ಧ ಗಾಂಧೀಜೀ ನಡೆಸಿದ ಚಳುವಳಿಯ ರಾಜಕೀಯ ದೃಷ್ಟಿಯನ್ನು ಪ್ರಕಟಿಸುತ್ತದೆ.

**ಅಕಬರನಾಮಾ:—** ಸಾಹಿತಿ **ಅಬುಲ್ ಫಜಲ್** ಎನ್ನುವವನು ಮೊಘಲ್ ಸಾಮ್ರಾಟ ಅಕಬರ ಜಲಾಲುದ್ದೀನ್‌ಮುಹಮ್ಮದನ ಬಗ್ಗೆ ಬರೆದ ಗ್ರಂಥ ಇದು. ಅಕಬರನ ಬಗ್ಗೆ ೧೬೦೨ರ ವರೆಗೆ ನಡೆದ ಮುಖ್ಯ ಘಟನೆಗಳ ವಿವರಗಳು ಇಲ್ಲಿ ಸಂಗ್ರಹಿಸಲಾಗಿವೆ. ಇದರಲ್ಲಿ ತೈಮೂರನಿಂದ ಅಕಬರನ ವರೆಗಿನ ವಂಶಾವಳಿಯನ್ನು ಕೂಡ ಹೇಳಲಾಗಿದೆ. ಹುಮಾಯೂನನ, ಅಕಬರನ ಆಡಳಿತ, ನೀತಿಗಳನ್ನು ವಿಶದವಾಗಿ ವಿವರಿಸಲಾಗಿದೆ.

ಈ ಪುಸ್ತಕದಲ್ಲಿ ಅಬುಲ್ ಫಜಲ್ ಅಕಬರನನ್ನು ಬಹಳವಾಗಿ ಹೊಗಳಿ ಬರೆದಿದ್ದಾನೆಂದು ಕೆಲವರು ಆರೋಪಿಸಿದರೆ; ಮತ್ತೆ ಕೆಲವರು ಅಕಬರನು ಅಷ್ಟರ ಮಟ್ಟಿಗೆ ಹೊಗಳಿಸಿಕೊಳ್ಳಲು ಅರ್ಹನಾದ ಸಾಮ್ರಾಟನೇ ಆಗಿದ್ದ ಎನ್ನುತ್ತಾರೆ.

**ಅಕಬರಪೂರ:—** ಸುಮಾರು ಐದು ಸಾವಿರ ಜನಸಂಖ್ಯೆ ಉಳ್ಳ ಊರು (ಉ. ಅ. ೨೬ – ೧೫°ರಿಂದ ೨೬ – ೩೩° ಮತ್ತು

ಪೂ. ರೇ. ೭೯ – ೫೧°ರಿಂದ ೮೧ – ೧೧°).
ಇ. ಸ. ೧೯೦೩–೪ರ ಕಾಲಕ್ಕೆ ಈ ಊರಿನ ಪ್ರತಿ ವರ್ಷದ ಉತ್ಪನ್ನ ೩೫೧೦೦೦ ರೂ. ಇತ್ತು. ಈ ಪ್ರದೇಶದ ಭೂಮಿ ಕ್ಷಾರಯುಕ್ತವಾಗಿರುವುದರಿಂದ ಸಾಕಷ್ಟು ಭೂಮಿ ಸಾಗುವಳಿಯಾಗದೆ ಉಳಿದಿದೆ. ಇದು ಕಾನಪೂರ ಜಿಲ್ಹೆಯೊಳಗಿನ ಒಂದು ತಹಶೀಲು.

**ಅಕಬರಪೂರ:—** ಫೈಜಾಬಾದ ಜಿಲ್ಹೆಯೊಳಗಿನ ತಹಶೀಲು (ಉ. ಅ. ೨೬–೨೬°, ಪೂ. ರೇ. ೮೨–೩೨°). ಈ ಊರಲ್ಲಿ ಒಂದು ಕೋಟೆ ಅವಶೇಷವಾಗಿ ಉಳಿದಿದೆ. ಎಲ್ಲರೂ ನೋಡಬೇಕಾದ ಒಂದು ಸುಂದರ ಮಶೀದಿ ಹಾಗೂ ನದಿಯ ಮೇಲೆ ಕಟ್ಟಿದ ಒಂದು ದೊಡ್ಡ ಸೇತುವೆ ಇದೆ. ಇವೆರಡೂ ಕೆಲಸ ಅಕಬರನ ಕಾಲಕ್ಕೆ ಮೋಹಸೀನ ಖಾನ ಎಂಬವನು ಮಾಡಿದ್ದು. ಇಲ್ಲಿಯ ಜನಸಂಖ್ಯೆ ಸುಮಾರು ಏಳೂವರೆ ಸಾವಿರ. ೧೭೫೭ರಲ್ಲಿ ಆಕ್ಟೋಬರ ತಿಂಗಳ, ರಾಘೋಬಾದಾದಾ ಎಂಬ ಮರಾಠನು ದಿಲ್ಲಿಯಿಂದ ಅಕಬರಪೂರಕ್ಕೆ ಸಸೈನ್ಯ ಸಜ್ಜಿತನಾಗಿ ಏರಿ ಹೋಗಿದ್ದನು.

**ಅಕಬರಬಾದ:—** ಇದರ ಸುಭೇದಾರಿ ದಿಲ್ಲಿಯ ಪಾತಶಹಾ ಮತ್ತು ಮರಾಠರಲ್ಲಿ ನಡೆದ ಕರಾರು ಪತ್ರದ ಪ್ರಕಾರ ಮರಾಠರಿಗೆ ದೊರೆಯಿತು. ೧೭೭೦ರಲ್ಲಿ ಅಕಬರಬಾದ ಮೊದಲಾದ ಊರಿನ ಸುಭೇದಾರಿ ಹಾಗೂ ಫೌಜದಾರಿ ಶಿಂಥೆ ಹೋಳಕರರಿಗೆ ಕೊಡುವುದಾಗಿ ಬಾಳಾಜಿ ಬಾಜೀರಾವನೊಡನೆ ಕರಾರು ಆಯಿತು. ಮರಾಠಿ ದಪ್ತರಗಳಲ್ಲಿ ಈ ಪ್ರಕಾರ ಉಲ್ಲೇಖಗಳಿವೆ:– ಮಹಾರಾಜಾ ಚೇತಸಿಂಹನು ಫಾ||ವ|| ೬ ಶಕೆ ೧೭೧೮ರ ದಿವಸ ದೌಲತರಾವ ಶಿಂಥೆ ಇವರಿಗೆ ಬರೆದ ಪತ್ರದಲ್ಲಿ "ಇನ್ ದಿನೌವೋ ಫೌಜ ಸರಕಾರಕೀ ದತಿಆಸೆ ಅಕಬರಬಾದಕೋ ಗಈ." 'ಕಿಲ್ಲೆ ಅಕಬರಬಾದ ರಾಜಶ್ರೀ ಜಗನಾಥರಾಮ ಇವರ ಸ್ವಾಧೀನ ಮಾಡಲಾಯಿತು' ಎಂದು ಶಕೆ ೧೭೧೮ರ ಇನ್ನೊಂದು ಪತ್ರದಲ್ಲಿ ಇದೆ.

**ಅಕಂಪನ:—** ಇದು ಒಬ್ಬ ರಾಜರ್ಷಿಯ ಹೆಸರು. ಇವನು ಎಲ್ಲಿಯವನು ? ಇವನ ಕುಲಪರಂಪರೆ ಯಾವುದು ಹೇಳಲು ಬರುವಂತಿಲ್ಲ. (ಭಾರತ, ದ್ರೋಣಪರ್ವ, ಅಧ್ಯಾಯ ೫೨-೫೪) ರಲ್ಲಿ ಹೀಗೆ ಉಲ್ಲೇಖವಿದೆ:— ಇವನಿಗೆ ಹರಿ ಎಂಬ ಹೆಸರಿನ ಒಬ್ಬ ಶೂರ ಮಗನಿದ್ದನು. ಒಂದು ಯುದ್ಧದಲ್ಲಿ ಇವನು ಹೋರಾಡಿ ಸತ್ತಾಗ, ಅಕಂಪನನಿಗೆ ಸಾಕಷ್ಟು ದುಃಖವಾಯಿತು. ಆಗ ನಾರದನು ಪ್ರತ್ಯಕ್ಷನಾಗಿ– ಮರಣ ಇದು ಮಾನವ ಕುಲಕ್ಕೆ ಅನಿವಾರ್ಯ ಎಂದು ವಿವರಿಸಿ ಹೇಳಿ, ಅಕಂಪನನ ದುಃಖವನ್ನು ಶಮನಗೊಳಿಸಿದನು.

೨. ಇದೇ ಹೆಸರಿನ ಒಬ್ಬ ರಾಕ್ಷಸ



ಮಾಧವಿ

ನಿದ್ದಾನೆ. ರಾಮ–ರಾವಣರ ಯುದ್ಧದಲ್ಲಿ ಇವನೂ ಭಾಗವಹಿಸಿದ್ದನು. ಹನುಮಂತನು ಇವನನ್ನು ಸಂಹರಿಸಿದನು. ಜನಸ್ಥಾನಿ ಮತ್ತು ಖರ ಎಂಬ ರಾಕ್ಷಸರನ್ನು ರಾಮಚಂದ್ರನು ಸಂಹರಿಸಿದ ಸಮಾಚಾರವನ್ನು ಇವನೇ ಪ್ರಪ್ರಥಮವಾಗಿ ಶೂರ್ಪನಖಿಗೆ ತಿಳಿಸಿದನು. ಅನಂತರ ಈ ಸಮಾಚಾರವನ್ನು, ಶೂರ್ಪನಖಿಯೂ ರಾವಣನಿಗೆ ತಿಳಿಸಿದಳು.

**ಅಕರಾಣಿ:—** ಮುಂಬೈ ಇಲಾಖೆ, ಪಶ್ಚಿಮ ಖಾನದೇಶದಲ್ಲಿಯ ತಳೋದೆ ತಾಲೂಕಿನಲ್ಲಿ ಇರುವ ಒಂದು ಕೋಟಿ. ಇದು ನೈಸರ್ಗಿಕವಾಗಿಯೇ ಭದ್ರವಾದ ಕೋಟಿ. ಆದರೆ ಈಗ ಕೋಟಿಯ ಗೋಡೆಗಳು ಬಿದ್ದು ಅದು ಹಾಳಾದ ಅವಸ್ಥೆಯಲ್ಲಿದೆ.

೨. ಪಶ್ಚಿಮ ಖಾನದೇಶದ ತಾಪೀ ಹಾಗೂ ನರ್ಮದಾ ನದಿಯ ನಡುವಿನ ಸಾತಪುಡಾ ಪರ್ವತದ ಕಡೆ ಬರುವ ಪ್ರದೇಶವಿದು. ಈ ಪ್ರದೇಶದ ಉತ್ತರಕ್ಕೆ ನರ್ಮದಾ ನದಿ, ಪೂರ್ವಕ್ಕೆ ಬಾರವಾನಿ ಸಂಸ್ಥಾನ, ದಕ್ಷಿಣಕ್ಕೆ ಸುಲತಾನಪೂರ ಮತ್ತು ಪಶ್ಚಿಮಕ್ಕೆ ಕಾಠೀ ಸಂಸ್ಥಾನವಿದೆ.

ಖಾನದೇಶದಿಂದ ಅಕರಾಣಿ ಪ್ರದೇಶಕ್ಕೆ ಹೋಗಲು ಐದು ಘಟ್ಟದ ಮಾರ್ಗಗಳಿವೆ. ನವಾಗಾಂವ ಕಡೆಯಿಂದ ಹೋಗುವ ಘಟ್ಟದ ಮಾರ್ಗ ಸುಲಭವಾಗಿದೆ. ಇಲ್ಲಿ ಕುದುರೆ, ಎತ್ತು ಓಡಾಡಬಹುದು. ಆದರೆ ಉಳಿದ ನಾಲ್ಕು ಘಟ್ಟದ ಮಾರ್ಗಗಳು ಕಠಿಣವಾಗಿವೆ, ಕಾಲುದಾರಿಯಿಂದ ಮಾತ್ರ ಕೂಡಿವೆ. ಈ ಪ್ರದೇಶದಿಂದ ಧಾನ್ಯ, ಜೇನುತುಪ್ಪ, ಮೇಣ, ರಾಳ, ಅಂಟು ಇವು ನಿರ್ಯಾತವಾಗುತ್ತವೆ.

ಈ ಗುಡ್ಡುಗಾಡು ಪ್ರದೇಶ ಸ್ಥಾನಿಕ ಅಧಿಪತಿಗಳ ಕೈಯಲ್ಲಿತ್ತು. ೧೭೦೦ ರ ಅನಂತರ ಈ ಪ್ರದೇಶ ಧುಶವಈ ಎಂಬಲ್ಲಿಯ ರಾಣಾ ವಂಶಜರ ಕಡೆಗೆ ಹೋಯಿತು. ರಾಣಾ ಗುಮಾನಸಿಂಗ ಎಂಬವನು ಅಕರಾಣಿ ಕೋಟಿಯನ್ನು ಕಟ್ಟಿದನು. ನಾಲ್ವರ ಆಳಿಕೆ ಮುಗಿದ ಮೇಲೆ ಈ ವಂಶವು ನಿರ್ವಂಶವಾಗಿ ಅಕರಾಣಿ ಪ್ರದೇಶವು ರಾಣಾ ಭಾವೂಸಿಂಗ ಎಂಬವನ ವಶವಾಯಿತು. ಇವನು ರೋಶಮಲ ಎಂಬ ಕೋಟಿಯನ್ನು ಕಟ್ಟಿಸಿದ್ದನು. ಅದೂ ಈಗ ಬಿದ್ದು ಹೋಗಿದೆ. ೧೮೧೮ರ ವರೆಗೆ ಇವನು ರಾಜ್ಯವಾಳಿದ ಮೇಲೆ ಬ್ರಿಟೀಶರು ಈ ಮನೆತನಕ್ಕೆ ೨೪೬೮ ರೂಪಾಯಿ ಪೆನ್‌ಶನ್ ಗೊತ್ತು ಮಾಡಿ ಅಕರಾಣಿ ಪ್ರದೇಶವನ್ನು ತಮ್ಮ ಆಧೀನಪಡಿಸಿಕೊಂಡರು.



# " ಕೆಂಪು ಗುಲಾಬಿಯು ಇನ್ನೆಲ್ಲಿ ? "

ಡಾ|| ದ. ರಾ. ಬೇಂದ್ರೆ,
ಎಂ. ಎ. ಡಿ. ಲಿಟ್.



ಕೆಂಪು ಗುಲಾಬಿಯು ಇನ್ನೆಲ್ಲಿ ?
ಕಾಶ್ಮೀರದ ಘನ ವನದಲ್ಲಿ !
ಕೆಂಪು ಗುಲಾಬಿಯು ಇನ್ನೆಲ್ಲಿ ?
ಗಹನ ಸರೋವರವಿರುವಲ್ಲಿ !
ಕೆಂಪು ಗುಲಾಬಿಯು ಇನ್ನೆಲ್ಲಿ ?
ಭಾರತೀಯ ತನುಮನದಲ್ಲಿ !
ಕೆಂಪು ಗುಲಾಬಿಯು ಇನ್ನೆಲ್ಲಿ ?
ಭೌಮ ಸಮಷ್ಟಿಯ ಜನದಲ್ಲಿ !
ಕೆಂಪು ಗುಲಾಬಿಯು ಇನ್ನೆಲ್ಲಿ ?
ವಿಶ್ವಾವೈತ್ರಿಯ ತನದಲ್ಲಿ !

ಮುಚ್ಚಿದ ಕಣ್ಣಿಗು ಕಾಣುವವು
ಮೂಸದ ಮೂಗಿಗು ತಾಗುವವು
ಅನುಭವಿಯೊಡನೊಂದಾಗುವವು
ಗುಲಾಬಿ ಹೂವು
ರೋಜಾ ಹೂವು
ಹೃದಯುದ ಕಮಲೆಯ ಕುರುಹಿನ ಹೂವು
ಭಾರತ ಮಾತೆಯ ಅರುಹಿನ ಹೂವು.
ಕೆಂಪು ಗುಲಾಬಿಯು ಇನ್ನೆಲ್ಲಿ ?
ನೆನೆಯುವವರ ತನುಮನದಲ್ಲಿ.

ಅಂದು ಭಾರತ ರಾಷ್ಟ್ರದ ಪ್ರಧಾನ ಮಂತ್ರಿಯ ರಕ್ಷೆಯು ತ್ರೀವೇಣಿ ಸಂಗಮದಲ್ಲಿ ವಿಶ್ರಾಂತಿಗೊಂಡಿತು; ಪ್ರಯಾಗದಲ್ಲಿ ಮೂಡಿದ್ದು– ಪ್ರಯಾಗದಲ್ಲಿ ಮುಳುಗಿತು.

ಗಾಳಿಯಲಿ, ಧೂಳಿಯಲಿ, ಕೃತಕೃತ್ಯ
ರಕ್ಷೆ
ಗಂಗೆಯಲಿ, ತುಂಗೆಯಲಿ, ಭಾರತದ
ದೀಕ್ಷೆ.

'I dont care what happens to me or to my reputation once I am dead.'

'ಸತ್ತಮೇಲೆ ನನಗೂ, ನನ್ನ ಕೀರ್ತಿಗೂ ಏನಾದರೇನು ?'- ಎಂದು ಸಾರಿದ್ದ ಈ ಜೀವ', ತನ್ನ ದೇಹ ಸುಟ್ಟ ಹಿಡಿ ಬೂದಿ ಗಂಗೆಯಲ್ಲಿ ಬೀಳಲಿ, ಉಳಿದುದು ಭಾರತೀಯರ ಪಾದ ಧೂಳಿಯೊಡನೆ ಒಂದಾಗಲಿ ಎಂದೂ ಆಶೆಗೊಂಡಿತ್ತು. ಆ ಆಶೆ ಅಂದು ಕೊನೆಗಂಡಿತು ನೇಹರೂ ಅವರು ಪ್ರಯಾಗದ ಗಂಗೆಯಲ್ಲಿ ಮುಳುಗು ಹಾಕುವ ಸಹಸ್ರಾವಧಿ ಯಾತ್ರಿಕರೊಡನೆ ತಾವು ಮುಳುಗು ಹಾಕ ಬಯಸುತ್ತಿದ್ದರಂತೆ ಬಾಲ್ಯದಲ್ಲಿ; ಅದರಲ್ಲಿ ಭಾರತ ಕ್ಷೇತ್ರ ಪ್ರೇಮವೂ ಬಂತು; ಯಾತ್ರಿಕ ಪ್ರೇಮವೂ ಬಂತು.

ಗಂಗಾರ್ಪಣ ಶತಕೃತ್ಯನರಕ್ಷೆ
ಇದು–ಭಾರತೀಯ ಸೇವಾದೀಕ್ಷೆ !
ವಿಶ್ವವು ಮಾಡಿತು ವಿಶ್ವಪ್ರಯತ್ನ
ಭಾರತದಲಿ ಮೂಡಿತು ಈ ರತ್ನ !
ರತ್ನದೀಪವು ನಂದಿದ್ದುಂಟೇ ?
ಹೃದಯ ಗುಲಾಬಿಯು
ಕುಂದಿದ್ದುಂಟೆ ?
ಬೋಧಕ್ಕುಂಟೇ ನಿರ್ವಾಣ ?
ಅದು ನಾಳಿನ ವಿಶ್ವ–ಪ್ರಾಣ !

"दूसरे आदमी तो चले जाते हैं। रहना ही चाहिये हमारा–हमारा मुख्य प्रधान है" ॥

"ಅಂಥಿಂಥ ಪ್ರಕೃತಿಯವರು ಹೊರಟು ಹೋಗುತ್ತಾರೆ ಮನದ ಮರೆಯಾಗುತ್ತಾರೆ. ನಮ್ಮ ಪ್ರಧಾನ ಮಂತ್ರಿಗಳಂಥವರು ಅಮರರು !" ಎಂದು ಮಹಾತ್ಮರು ಹರಸಿದ್ದರು ಜವಾಹರಲಾಲನ್ನು.

'बहुत वर्ष जीयो। और हिंदके जवाहर बने रहो' ಉಪವಾಸ ಮಾಡಿದ್ದ ಜವಾಹರಲಾಲರಿಗೆ, ತಾಯಿ–ಮಗನನ್ನು ಹರಸುವಂತೆ, ಆಡಿದ್ದ ಮಹಾತ್ಮರ ಮಾತಿವು. "ಬಹುದಿನ ಬಾಳು, ಭಾರತದ ರತ್ನನಾಗಿ ಉಳಿ" ಅಳಿವುದು ಕಾಯವು ಉಳಿಯುವುದೊಂದೇ ಕೀರ್ತಿ ! ಇಂದು ಭಾರತದ ಜವಾಹರಲಾಲರು ಭೂಮಂಡಲದ ಹೃದಯ–ರತ್ನ ಎಂದು ದಶದಿಕ್ಕಿಗೂ ಹರಡಿದ ಸುಗಂಧವಾರ್ತೆಯಾಗಿದೆ.

ಅರಳಿದ ಬೆಲೆ ಹರಳಿಗೆ ಅಸಾಮಾನ್ಯ
ಸುವಾಸನೆ.

ಗುರುದೇವ ರವೀಂದ್ರನಾಥರು ಒಮ್ಮೆ ಆಡಿದ್ದರು ಹಾಡಿದ್ದರು.

'ಜವಹರಲಾಲನು ಋತುರಾಜ !
ದುಂದು ದುಂದು ವಿಜಯಾನಂದ !
ತಾರುಣ್ಯದ ನವ ವಸಂತ ಗಂಧ !
ಸ್ವಾತಂತ್ರ್ಯದ ಸೇವಕ ಶರಣ !
ಉದ್ಧತರಿಗೊ ಇವ ನಿಷ್ಕರುಣ !
ಜನತೆಗೆ ತಾ ಕಂಠಾಭರಣ' !

ಬರ್ನಾರ್ಡ್ ಶಾ ತಮ್ಮೊಂದು ಬರೆಹದಲ್ಲಿ,

'The only Asiatic equivalent to Stalin'. ತಮ್ಮತ್ತ ಕಡೆಯ ಸ್ಟಾಲಿನ್‌ಗೆ ಏಶಿಯಾದತ್ತ ಕಡೆಗೆ ಒಬ್ಬನೆ ಒಬ್ಬ ಸಮತೂಕ ಉದ್ದರಿ ಎಂದರೆ ಜವಾಹರಲಾಲ! ಎಂದು ಒಡನುಡಿದಿದ್ದರು. 'ವಜ್ರಾದಪಿ ಕಠೋರಾಣಿ ಮೃದೂನಿ ಕುಸುಮಾದಪಿ' ಎಂಬ ಮಾತು, ಜವಾಹರಲಾಲರ ಚಾರಿತ್ರ್ಯಕ್ಕೆ ಅನ್ವಯಿಸುತ್ತದೆ. ಪಾಶ್ಚಾತ್ಯರ ಮಹಾಬಲಿ ಪಾದಕ್ಕೆ ಪೌರ್ವಾತ್ಯ ದೇಶಗಳ ಸ್ವಯಂ ಪ್ರತಿನಿಧಿಯಾಗಿ ತಮ್ಮ ವಾಮನ ಪರಾಕ್ರಮದ ಪ್ರಭಾವವನ್ನು ಇವರು ತೋರಿಸದೆ ಬಿಡಲಿಲ್ಲ. ಚೀನದ ವಿಷಯದಲ್ಲಿಯೂ ಅದೇ ಮಾತು. ವಚನದಲ್ಲಿ ಕುಸುಮದ ಮಾರ್ದವ, ಧೋರಣೆಯ ರಚನೆಯಲ್ಲಿ ವಜ್ರಪ್ರಾಯ ಕಾಠಿಣ್ಯ. ಈ ಮೂರ್ತಿಯ ದ್ವಿಮುಖ ದರ್ಶನವು ಪಾಶ್ಚಾತ್ಯ ರಾಜನೀತಿಜ್ಞರನ್ನು ದಿಕ್ಕುಗೆಡಿಸಿತ್ತು. ಈತ ಉದಾಶೀನನೋ? ತಟಸ್ಥನೋ? ಮಧ್ಯಸ್ಥನೋ? ಎಂದು. ನಿಜವಾಗಿ, ನೆಹರು ಅವರು—

'ದುಡ್ಡಿಗೆ ಬೆಲೆಯೋ? ದುಡಿತಕ್ಕೋ?
ಮಾನವ ಹೃದಯದ ಮಿಡಿತಕ್ಕೋ?'

ಎಂದು, ಲೋಕಕ್ಕೆ ಸವಾಲು ಹಾಕಿದ್ದಾರೆ. ಎಚ್ಚತ್ತ ಜಗತ್ತಿನಿಂದ ಇಂದು ಉತ್ತರ ಬರುತ್ತಿದೆ— ಹೃದಯದ ಮಿಡಿತವಿದ್ದಲ್ಲಿ, ದುಡ್ಡಿಗೂ ಬೆಲೆ ಇದೆ— ದುಡಿತಕ್ಕೂ ಬೆಲೆ ಇದೆ ಎಂದು. ಹೃದಯ ಹೀನನಾದರೆ, ದುಡ್ಡು ನಿರ್ಜೀವ; ದುಡಿತ ಯಾಂತ್ರಿಕ. ಮಹಾತ್ಮಾ ಗಾಂಧಿಯವರಿಂದ ಸತ್ಯ, ಅಹಿಂಸೆಗಳ ಪಾಠ, ಗುರುದೇವ ರವೀಂದ್ರರಿಂದ ವಿಶ್ವ ಮಾನವತೆಯ ಪಾಠ, ಹೃದ್ಗತ ಮಾಡಿಕೊಂಡಿದ್ದ ಜವಾಹರಲಾಲರು ವೀರ ವಿನಯದ ಮಾರ್ಗವನ್ನು ಭಾರತೀಯರಂತೆ ಎಲ್ಲರಿಗೂ ತೆರೆದಿದ್ದಾರೆ.

ನೇಹರು ಅವರು ತ್ರಿವಿಕ್ರಮನಂತೆ ಮೂರು ಹೆಜ್ಜೆ ಹಾಕಿದ್ದಾರೆ; ಸ್ವದೇಶವನ್ನು ಪಾರತಂತ್ರ್ಯದಿಂದ ವಿಮೋಚನೆಗೊಳಿಸುವದು, –ಮೊದಲನೆಯದು; ರಾಷ್ಟ್ರೀಯ ಏಕೀಕರಣವನ್ನು ಯೋಜನೆಗಳಿಂದ ದೃಢಪಡಿಸುವದು– ಎರಡನೆಯದು; ಅಖಂಡ ಭೂಮಂಡಲದ ಸಹಕಾರ್ಯವನ್ನೆ ರಾಜ್ಯಕ್ಕೆ ತಳಹದಿ ಹಾಕುವದು– ಮೂರನೆಯದು. ನಾಲ್ಕನೆಯ ಹೆಜ್ಜೆ ಬೀಳದೆ ಈ ಮೂರಕ್ಕೆ ಮುಕ್ತಾಯವಿಲ್ಲ; ಆ ಹೆಜ್ಜೆ ವಿಶ್ವಬಾಂಧವ್ಯದ ಅಧ್ಯಾತ್ಮ ಸತ್ತ್ವದ್ದು. ಜವಾಹರಲಾಲರು ಆತ್ಮಚರಿತ್ರೆಯೊಂದಿಗೆ ರಾಷ್ಟ್ರದೃಷ್ಟಿಯನ್ನೂ, ಮಾನವೀಯ ಐಕ್ಯದೃಷ್ಟಿಯನ್ನೂ ಒಂದು ಗ್ರಂಥ ಬರೆದು ತಿಳಿಸಿ ಹೇಳಿದ್ದಾರೆ. ಅವರಂಥ ಹೃದಯ, ಅವರಂಥ ಬುದ್ಧಿ, ಅವರಂಥ ಪುಣ್ಯವಂತರಿಗೇ ಲಭ್ಯ! ಸೂರ್ಯನಾಗುವದು ಎಂಥೆಂಥ ಗ್ರಹಗಳಿಗೂ ಅಸಾಧ್ಯ; ಆದರೂ, ಕಣ್ಣು ತೆರೆದು, ಬೆಳಕು ಬಳಸಿ, ಸರಿಯಾದ ಹಾದಿಯಲ್ಲಿ ಹೆಜ್ಜೆ ಇಡುವದು ಲೋಕದಲ್ಲಿ ಬಾಳಬೇಕೆನ್ನುವವರಿಗೆ ಅಶಕ್ಯ ಎನಿಸಬಾರದು.

"The old and the new have to be related, which in a way is a question facing the world'–ಹಳೆಯ ಹೃದಯ ವಿಜ್ಞಾನ, ಹೊಸ ಪದಾರ್ಥ ವಿಜ್ಞಾನ ಎರಡೂ ಬಾಯಿಗೂಡಬೇಕು. ನೇಹರೂ ಅವರ ನೇಹ, ನೇಹರೂ ಅವರ ದೇಹ ಇದಕ್ಕಾಗಿ ಸವೆದವು; ರಕ್ತವನ್ನು ತರ್ಪಣ ಮಾಡಿದವು. ಕೆಂಪು ಗುಲಾಬಿ ಅದರ ದ್ಯೋತಕ !

ನಾಯಕನ ಕಳಕೊಂಡ ನಾಯಿಯಂತೆ
ಹೇಳಲೇನೂ ಬರದ ಬಾಯಿಯಂತೆ.

ನಮ್ಮ ಗತಿಯಾಗಿದ್ದರೂ ಕೆಂಪು ಗುಲಾಬಿಯ ವಾಸನೆ ನಮಗೆ ಮಾರ್ಗದರ್ಶಿಯಾಗಲಿ ಎಂದು ಭಾರತ ಮಾತೆಯಲ್ಲಿ ಪ್ರಾರ್ಥನೆಯನ್ನು ನಾವು ಸಲ್ಲಿಸೋಣ.

ಅರಳಿತು ರೋಜಾ
ಮುಗಿದಿತು ರೋಜಾ
ರಾಷ್ಟ್ರಕ್ಕೇ ಇದು ನೀಡಿತು ಓಜಾ
ಭೂಮಂಡಲದಲೆ ಬಿತ್ತಿತು ಬೀಜ.
ಮಾನವತೆಯ ತೇಜಾ.
ಜಹವರಲಾಲನು ಋತುರಾಜ !

(ಆಕಾಶವಾಣಿಯ ಕೃಪೆಯಿಂದ)

---

# ರಾಜ ಭಿಕ್ಷೆ

ಹಿಂದಿನ ಕಾಲದ ಒಂದು ಸ್ವಾರಸ್ಯ ಕಥೆ ಇದು. ರಾಜನು ಒಮ್ಮೆ ತನ್ನ ರಾಜಧಾನಿಯಲ್ಲಿ ಸಂಚರಿಸುತ್ತಿರುವಾಗ ಓರ್ವ ಮೋಹನಾಂಗಿ ಅವನ ದೃಷ್ಟಿಯನ್ನು ಸೆಳೆದಳು. ಆಕೆಯ ಸೌಂದರ್ಯಕ್ಕೆ ಬಲೆ ಬಿದ್ದ ರಾಜ, ತನ್ನ ಸೇವಕರನ್ನು ಕರೆದು ಆಕೆಯನ್ನು ಬಂಧಿಸಿ ರಾಜಾಸ್ಥಾನಕ್ಕೆ ಒಯ್ಯಲು ಆಜ್ಞೆ ಮಾಡಿದನು.

ವಿಧಿವಶದಿಂದ ಈ ಸುಂದರಾಂಗಿ ಓರ್ವ ಭಿಕ್ಷುಕಿಯಾಗಿದ್ದಳು. ಈ ರಾಜಾಜ್ಞೆಯನ್ನು ಕೇಳಿದವನೇ ಭಿಕ್ಷುಕರ–ನಾಯಕ ರಾಜನ ಬಳಿ ಧಾವಿಸಿದ. ಆ ಕಾಲದಲ್ಲಿ ಭಿಕ್ಷುಕರ ರಕ್ಷಣೆಯ ಹೊಣೆ ಭಿಕ್ಷುಕರ ನಾಯಕನದಾಗಿತ್ತು. ಭಿಕ್ಷುಕರ ನಾಯಕನ ಬೇಡಿಕೆ ಬಹಳ ಮಾರ್ಮಿಕವಾಗಿತ್ತು. "ಓ ರಾಜನ್ ! ನೀನು ಪ್ರಜಾಧಿಪತಿ. ನಾನು ಭಿಕ್ಷುಕರ ನಾಯಕ. ಆಕೆಯ ಜೀವವನ್ನು ಭಿಕ್ಷೆ ಬೇಡುತ್ತಿದ್ದೇನೆ, ದಯಪಾಲಿಸು." ರಾಜನು ಚಕಿತನಾದ. ಏನು ವಿಧಿಯ ಕೈವಾಡ; ತನ್ನ ನಿರ್ಧಾರವನ್ನು ಬದಲು ಮಾಡಿದ, ಆಕೆಯನ್ನು ಮರಳಿ ಭಿಕ್ಷುಕ ರಾಜನಿಗೆ ಅರ್ಪಿಸಿದ. ಪ್ರಜಾರಾಜ ಭಿಕ್ಷುಕರಾಜನಿಗೆ ಇತ್ತ ರಾಜ ಭಿಕ್ಷೆ ಇದಾಗಿತ್ತು.

**—ವಿವಿಎನ್**

# ಹನ್ನೊಂದರ ಕರ್ನಾಟಕ !















ಕುಶ್ಯಾಶ

[ನವ್ಹಂಬರ್ ೧, 'ಕರ್ನಾಟಕ ರಾಜ್ಯೋತ್ಸವ ದಿನ, ೧-೧೧-೧೯೫೬ ರಂದು ಕರ್ನಾಟಕ ರಾಜ್ಯೋದಯವಾಯಿತು. ಕನ್ನಡಿಗರ ಕನಸು ನನಸಾಗುತ್ತದೆಂಬ ಆಸೆ ನನಸಾಯಿತೋ ಇಲ್ಲವೋ ಎಂಬುದು ಹತ್ತು ವರ್ಷಗಳು ಕಳೆದರೂ ಸಮಸ್ಯೆಯಾಗಿಯೇ ಉಳಿದಿರುವುದು ನಮ್ಮ ದುರ್ದೈವ. ಇಂದು ನಮ್ಮ ಕರ್ನಾಟಕ ಹನ್ನೊಂದರಲ್ಲಿ ಕಾಲಿರಿಸುತ್ತಿದೆ. ಈ ಸಂಧಿ ಕಾಲದಲ್ಲಿ ನಾವು 'ಹನ್ನೊಂದರ ಕರ್ನಾಟಕ'ದ ಸಂದೇಶವನ್ನು ಹೊತ್ತು ಸಾಗಬೇಕಾಗಿದೆ. ಆ ಸಂದೇಶ ಇಲ್ಲಿ ಚಿತ್ರಿಸಲಾದೆ.] —ಸಂ

'ಏಳು ! ಹನ್ನೊಂದಾಯ್ತು ಕರ್ನಾಟಕ. ಏಳೂ – ಹನ್ನೊಂದಾದೀತು ಎಚ್ಚರ !'

ಎಚ್ಚರದಿಂದಿದ್ದರೆ ಏಳುತ್ತೇವೆ, ಏದುವುದಿಲ್ಲ. ಆಗ ಎದ್ದು ಬೆಳೆಯುತ್ತೇವೆ; ಬೆಳೆದು ಬೆಳಗುತ್ತೇವೆ. ಬೆಳಗಿ ಬೆಳಕಾಗುತ್ತೇವೆ.

ಮಾಧವಿ

ಎಚ್ಚರವಿಲ್ಲದೆ ಎದ್ದರೆ, ಎದ್ದು ಎಚ್ಚರ ವಹಿಸದಿದ್ದರೆ, ಎದ್ದು ಎಚ್ಚರ ಕಳೆದು ಕೊಂಡರೆ ಬೀಳುತ್ತೇವೆ, ಬಿದ್ದು ಹಾಳಾಗುತ್ತೇವೆ.

ಎದ್ದು ಎಚ್ಚರವಾಗೋಣ. ಎಚ್ಚರವಾಗಿ ನಡೆಯೋಣ; ಎಚ್ಚರದಿಂದ ನುಡಿಯೋಣ; ಎಚ್ಚರವಹಿಸಿ ಬಾಳೋಣ. ಎಚ್ಚರದ ಇರುವಿಕೆಗೆ ಬಾಳಿನ ಸೊಗಸಿನ ಅರಿವಾಗುತ್ತದೆ; ಆ ಬಾಳು ನಾಳಿನ ನಡೆಗೆ ಬೆಳಕಾಗುತ್ತದೆ; ಆ ಬೆಳಕು ನಾಳಿನ ಉಸಿರಾಗುತ್ತದೆ; ಅದು ಜೀವಂತ ಚೈತನ್ಯ ಪ್ರಜ್ಞೆಯನ್ನು ಉಂಟು ಮಾಡುತ್ತದೆ.

ಏಳು ! ಜೀವನ ಏಳು– ಬೀಳು, ನಿಜ. ಆದರೆ ಅದು ಏಳು–ಹತ್ತು ಆಗ ಬೇಕು. ಹತ್ತು–ಹತ್ತು ಆಗಿ ರೂಪುಗೊಳ್ಳಬೇಕು. ಎದ್ದು ಬಿದ್ದು ಏಳದಿದ್ದರೆ ಶಾಶ್ವತವಾಗಿ ಬಿದ್ದೇ ಬಿಡುತ್ತೇವೆ. ಆದರೆ ಬಿದ್ದು ಎದ್ದು ಹತ್ತಿದರೆ ನಡೆಯುತ್ತೇವೆ, ಮುಂದೆ ಸಾಗುತ್ತೇವೆ. ಆದಕ್ಕೇ ಏಳು-ಬೀಳುಗಳ ಬಾಳು ನಮದಾದರೂ ಎದ್ದು–ಬಿದ್ದು ಹತ್ತುವುದನ್ನು ಕಲಿಯಬೇಕು. ಹತ್ತಿ, ಒಬ್ಬರೊಬ್ಬರು ಹತ್ತಿರವಾಗಿ, ಒಬ್ಬರನ್ನೊಬ್ಬರು ಹತ್ತಿಕ್ಕದೆ ಹತ್ತಿರವಾಗುತ್ತಾ, ಹತ್ತುತ್ತಾ ಹೋಗಬೇಕು. ಆಗ ಏಳು – ಹತ್ತು ಸಾಧಿಸಿದಂತಾಗುತ್ತದೆ. ಈ ಸಾಧನೆ ನಿರಂತರವಾಗಿ ಸಾಗಿದರೆ ಆಗ ಅದು ಹತ್ತು-ಹತ್ತರ ಬಾಳಾಗುತ್ತದೆ. ಅಂದು ನಮ್ಮ ಏಳು – ಬೀಳಿನ ಬಾಳು ಹತ್ತು – ಹತ್ತರ ಬಾಳಾಗುತ್ತದೆ.

"ಏಳು ! ಹತ್ತು ! ಹತ್ತಾಗಿ ಹೋಯಿತು. ಹೊತ್ತೂ ಆಗಿ ಹೋಯಿತು. ಹನ್ನೊಂದಾಯ್ತು. ಏಳು !"

ನಮ್ಮ ಬಾಳು ಹತ್ತಾಗಿ ಹೋಯಿತು. ಹತ್ತು ಬಾಳಾಗಿ ಹೋಯಿತು. ಒಂದೊಂದು ಬಾಳು ಹತ್ತು – ಹತ್ತಾಗಿ, ಚೂರು–ಚೂರಾಗಿ ಒಡೆದು ಹೋಯಿತು. ಇದರಲ್ಲಿ ಹೊತ್ತೂ ಹೋಯಿತು. ನಮ್ಮ ಜೀವನವನ್ನೇ ಹೊತ್ತು ಹಾಕಿದ ಹಾಗೇ ಆಯಿತು. ಹೊತ್ತೂ ಹೋಯಿತು; ಹಾಳೂ ಆಯಿತು.

ಇದು ಹನ್ನೊಂದರ ಸಂಧಿ. ಹನ್ + ಒಂದು = ಹನ್ನೊಂದು. ಹತ್ತು ಒಂದಾದರೆ ಹನ್ನೊಂದರ ನೆಲೆ ಸಾರ್ಥಕ. ಹತ್ತು ಬಗೆಯ ಬಾಳು ಒಂದಾಗಬೇಕು. ಒಬ್ಬೊಬ್ಬರೂ ಹತ್ತು ಬಗೆದರೇ ಬಾಳುವುದಾದರೂ ಹೇಗೆ ? ಹತ್ತು ಚೂರು ಒಂದಾಗಿ, ಒಂದರಲ್ಲಿ ಒಂದಾಗಿ, ಒಂದೇ ಒಂದಾಗಿ ಹನ್ನೊಂದರ ಏಕತೆಯನ್ನು ನಿರೂಪಿಸಬೇಕು. ಇದು ಎಲ್ಲರೂ ಒಂದಾಗಬೇಕಾದ ಸಂಧಿ ಕಾಲ.

ಮತ್ತೊಂದು ಮೋಜು. ನವ್ಹಂಬರ್, ೧, ಎಂದರೆ ೧ – ೧೧. ಇದು ಹನ್ನೊಂದನೆಯ ವರ್ಷ. ೧ – ೧೧ – ೧೧. ಈ ಮೂರರ ಸಂಧಿಯ ಸಂದೇಶ.

ಕನ್ನಡಿಗರು ಒಂದು
ಕನ್ನಡವೂ ಒಂದು
ಕರ್ನಾಟಕ ಒಂದು

ಇದೇ "ಹನ್ನೊಂದರ ಕರ್ನಾಟಕ"ದ ಸಂದೇಶ.



# ದೀಪಾವಳಿ



ಮೂವತ್ತು ವರ್ಷಗಳ ಹಿಂದೆಯೇ
ಆತ ಕಳಕೊಂಡಿರುವ
ಬಣ್ಣ ಬಣ್ಣದ ದೀಪಗಳ ಹೂ-ಹಾ-
ರಗಳ.
ನಡುನಡುವೆ
ಮಸಕು ಮಸಕಾಗಿ ಒಂದೆರಡು ಸಲ
ಕನಸಿನಲಿ ಕಂಡಂತೆ ಅವಳ
ಇವಳ ಕಂಗಳಲಿ, ಮಕ್ಕಳ ಹಾ-ಹೂ-ಅಹಾ
ಮಣ್ಣಿನಾಟದಲಿ, ಕಳ್ಳಕಳ್ಳಲೆ
ಮಿಣುಕಿದಾಗ
ಹೊಕ್ಕಳಲಿ ಬೆಂಕಿ ಅರಳಿ ಆಹಾ
ಎಂದು ಕೈತಟ್ಟಿ ನರಳಿರುವ.
ಈಗ
ಸುತ್ತಲೂ ದೀಪಗಳು ಭುಗಿಲೆಂದು ಉರಿವಾಗ
ನಲವತ್ತು ವರ್ಷದ ಕಲ್ಲು ಸ್ತೂಪವನ್ನೇರಿ
ನಕ್ಷತ್ರಗಳ ಮಧ್ಯದಗಾಧ ಕತ್ತಲೆ ನೋಡಿ
ನಗುತಿರುವ
ಹುಚ್ಚ !

—ಶಾಂತಿನಾಥ ದೇಸಾಯಿ

# ಉತ್ತರ ಕುಮಾರ

(ಕುಮಾರ ವ್ಯಾಸನ ಕಾವ್ಯರೂಪಕ)

(ವಿರಾಟರಾಯನ ಅಂತಃಪುರ, ನೃತ್ಯಧ್ವನಿ, ಮಹಿಳೆಯರ ಕಿಲಕಿಲಾಟ)

ಒಬ್ಬಳು: ರಾಯಗುವರರು ನಾಟ್ಯರಂಗ
ದಲಿ
ಪಜ್ಜೆವಿಡಿದು ಪದಾಭಿನಯವ ಮರೆಯ
ಬಲ್ಲರು.
ಉತ್ತರ: ಇದು ವೀರ ಪಜ್ಜೆ, ಬಲ್ಲಾಳ್ತನದ
ಮೊದಲ ಹೆಜ್ಜೆ
ಅರಿಯೆಯಾ ವೀರ ಮೋಹನ ರಮಣಿ?
(ಗೆಜ್ಜೆಗಳ ಶಬ್ದ)
ಇನ್ನೊಬ್ಬಳು: ಎಲ್ಲಿ ರಾಯಗುವರರು
ತೋರಲಿ ಹೆಜ್ಜೆಯ ಬಿಜ್ಜೆಯನು ?
(ಗೆಜ್ಜೆಗಳ ಶಬ್ದ, ಕಿಲಕಿಲನೆ ನಗೆ)
ಇನ್ನೊಬ್ಬಳು: ಓವೋ ! ರಾಯಗುವರರ
ವೀರಾಭಿನಯಕೆ
ಮೈಮುಳ್ಳು ಸಿಡಿದೇಳುವವು.
ಉತ್ತರ: ಎಲ್ಲಿ, ಎಲ್ಲಿ ? ನೋಡುವ ನಿನ್ನ
ಮೈಮುಳ್ಳಪಾಡು ?
ಇನ್ನೊಬ್ಬಳು: ಇಶ್ಶಿ ! ಅಂಗನೆಯ ರಂಗ
ವನು ನೋಡುವಡೆ—
ಒಬ್ಬಳು: (ನಕ್ಕು) ಅನಂಗನೆ ಬರಬೇಕು.
ಉತ್ತರ: ಉಂ ! ಅಂಗವಣೆ ಸಾಲದೆ ?
ಅನಂಗನೇ ಬೇಕೆ ?....ಧೂರ್ತೆ.
(ಓಡುತ್ತ ದಾಸಿಯೊಬ್ಬಳು ಬರುವಳು)
ದಾಸಿ: ಜೀಯ ಹಸಾದ ! ಬೆಗಡುಮುಸು
ಕಿವ, ಭೀತಿ ಹೆಚ್ಚಿದ
ಬೆರಗಿನ ಬೇಹುಗಾರ, ಅಲ್ಲಲ್ಲ
ಹುಯ್ಯಲುಗಾರ—
ಮಹಿಳೆಯರು: (ಬೆರಗಾಗಿ)ಆಂ ? ಅಯ್ಯೋ
ಅದೇನು ವಿಧಿಯಾಟವೊ ಮತ್ತೆ.
ಉತ್ತರ: ಬರಮಾಡು ಆ ಬೆಗಡಿನೋಲೆ
ಕಾರನನು.
ಓಲೆಕಾರ: ದೊರೆ ! ಆ ಕೌರವರಾಯ
ನಮ್ಮ ತುರುಗಳ
ಕೋಳವಿಡಿದನು, ಸೇನೆ ಬಂದುದು
ಧರಣಿಯಗಲದಲಿ.
ಇನ್ನೊಬ್ಬಳು: ಇನ್ನೇನು ಗತಿ ?
ಒಬ್ಬಳು: ಏವೆವು, ಇನ್ನೇವೆವು !
ಮತ್ತೊಬ್ಬಳು: ದೊರೆಗಳೂ ಅರಮನೆ
ಯೊಳಿಲ್ಲ.... ಇನ್ನೇವುದು ?
ಆವ ದೊರೆಯೆಮ್ಮ ಕಾವರು !
ಉತ್ತರ: ಅಬಲೆಯರು ಭೀರುಗಳೆಂಬು
ದಿದಕೇ.
ಎಲೈ ತರಳೆ, ನಾನಿಲ್ಲವೆ ನಿನ್ನ ಕಾಯ
ಕಾಯಲಿಕೆ ?
ದೂತ: ಅಂತೆಯೆ ಒಡೆಯ, ರಾಣಿವಾಸದ
ಗೂಳಿಯವ ತೆಗಿಸಿ,
ಕುದುರೆಯಾಳುಗಳ ಕರೆಯಿಸಿ, ಕಳಕೆ
ಅಣಿಮಾಡಿ.
ಉತ್ತರ: ಎಲವೊ, ನಿನಗೇಕೆ ಭಯ ?....
ನಿನ್ನ ವಾರ್ತೆಯು ದಿಟವೆ ?

ನಿನ್ನಿನ ರಣವ ನೆನ್ನಯ್ಯನು ಗೆಲಿದು
ದೇನಾಯ್ತು ?
ನಿನಗೆ ಭಯ ಬೇಡ, ದಿಟವ ನುಡಿ.
ದೂತ: ದೊರೆ ! ಕುರುಸೇನೆ ಬಂದುದು,
ತುರುವ ಹಿಡಿದುದು
ಬಡಗದಿಕ್ಕಿನಲಿ.... ಕೊಳ್ಳಿ, ಕೈಗೆ ಕರ
ವಾಳ ಕೊಳ್ಳಿ !
ಉತ್ತರ: ನೂಕು ಈ ಕುನ್ನಿಯನಾಚೆ,
ಆಹವದ ಭೀತಾಕುಲನ,
ಹೆಂಡಿರ ಸಾಕಿ ಬದುಕುವ ಲವಲವಿಕೆ
ಯಲಿ ಜಾರಿ ಬಂದಿಹ ಭೀರು !
ಒಬ್ಬಳು: ಎನಿತು ಬಲ ಘನವಾದಡೇನು,
ನಿನಗದು ಗಹನವೇ ಜೀಯ ?
ದಿನಪನಿದಿರಲಿ ದಿಟ್ಟತನವೇ ತಮದ
ಗಾವಳಿಗೆ ?
ಇನ್ನೊಬ್ಬಳು: ಜನಪ, ತೋರಿಸು ನಿನ್ನ
ಕೈಗುಣವ ಕೌರವನ ಥಟ್ಟಿನಲಿ.
ಉತ್ತರ: (Pause) ಹೂಂ ! (ಆಲೋ
ಚನಾ ಮಗ್ನನಾಗಿ) ನಿಜ, ನಿಜ !
ಅಹುದಹುದು ತಪ್ಪೇನು, ಜೂಜಿನ
ಕುಹಕದಲಿ
ಪಾಂಡವರ ಸೋಲಿಸಿ, ಮಹಿಯ
ಕೊಂಡಂತೆ ಎನ್ನ
ಕೆಣಿಕಿದನೇ ಸುಯೋಧನನು ? ಸಹಸ
ದಿಂದವೆ
ತುರುವ ಮರಳಿಚಿ ತಹೆನು ಬಳಿಕಾ
ಕೌರವನ
ನಿರ್ವಹಿಸಲೀವೆನೆ ? ಸೂರೆಗೊಂಬೆನು
ಹಸ್ತಿನಾಪುರವ....
ಕೆಟ್ಟನು, ಕೌರವನು ಎನ್ನ ಕೆಣಕಿ
ಕೆಟ್ಟನು ?

ಎನ್ನ ತೋಳಿನನೂನ ಬಲವನು ಕೇಳಿ
ದರಿಯನೆ ?
ಜವನ ಮೀಸೆಯ ಹಿಡಿದನೊ, ಭೈರ
ವನ ದಾಡೆಯನಲುಗಿದನೊ ?
ಮೃತ್ಯುವಿನ ಮೇಲುದ ಸೆಳೆದನೊ,
ಕೇಸರಿಯ ಕೆಣಕಿದನೊ !
ಒಬ್ಬಳು: ಎನಿತು ವೀರ ವಚನಗಳಿವು !
ಇನ್ನೊಬ್ಬಳು: ವಚನದಲಿ ವೀರರೆಮ್ಮೆಯ
ಅರಸುಗಳು.
ಇನ್ನೊಬ್ಬಳು: ವಚನದಲಿ ಮಾತ್ರವೆ ಅಲ್ಲ
ಬವರ ರಚನೆಯಲು ಕೂಡ.
ಮತ್ತೊಬ್ಬಳು: ಅಂತಾದೊಡೆ ಕ ವ ಚ,
ಕಿರೀಟ, ಖಡ್ಗಗಳ ತಹೆನೆ ?
ಉತ್ತರ: ತಡೆ, ತಡೆ ಚಪಳೆ ಏಕಿನಿತು
ಲಗುಬಗೆ !
ಒಬ್ಬಳು: ಆಲೋಚನೆಯೆ ದೇವ ?
ದೂತ: ಆಲೋಚನೆಗೆ ಅವಸರವೆಲ್ಲಿಯದು?
ಉತ್ತರ: (ದೀರ್ಘ ಉಸಿರು ಬಿಟ್ಟು)
ಆದೊಡೆ, ಆರೊಡನೆ ಕಾದುವೆನು ?
ಕೆಲಬರು ಹಾರುವರು, ಕೆಲರಂತಕನ
ನೆರೆಯೂರವರು
ಕೆಲರಧಮಕಾಲದಲಿ ಜನಿಸಿ ಬಂದವರು
ಇನ್ನೊಬ್ಬಳು: ಭೀಷ್ಮರಿಲ್ಲವೆ ?
ಕೌರವನಿಲ್ಲವೆ ?
ಉತ್ತರ: ಹುಂ ! ಅರಿಯೆನೆ
ಗಾಂಗೇಯನನು ?....ಕುಲದಲಿ
ಕೊರತೆಯಾಗಿಹ ಕರ್ಣನೆಂಬ ನೆನಗೆ
ಸರಿಯ ಹಗೆ ?
ಒಬ್ಬಳು: ಅಂತಾದೊಡೆ ಅರಸುಗಳ
ಸನ್ನಾಹಕ್ಕೆ ಸೂಯವೇಕೆ ?

ಉತ್ತರ: ಬರಿಯ ಬಯಲಾಡಂಬರದಿ
ತುರು ಸೆರೆ ಹಿಡಿದರೆ
ಅವರ ಹೆಂಡಿರ ಸೆರೆಯ ತಾರದೆ
ಮಾಣೆನು !
ಬಲವ ಮುರಿದೆನು, ಹಸ್ತಿನಾಪುರ
ದೊಳಗೆ ಠಾಣಾಂತರವನಿಕ್ಕುಹೆನು
ತೊಲಗಿಸುವೆ ಕೌರವ ಸೇನೆಯನು
ಧೂಳಿಪಟ ಮಾಡಿ.
ಒಬ್ಬಳು: ಸರಿ, ಸರಿ !
ಇನ್ನೊಬ್ಬಳು: ಅಪ್ಪು ದಪ್ಪುದು !
ಮತ್ತೊಬ್ಬಳು: ವೀರಕ್ಷತ್ರಿಯ ಕುವರನಿಗೆ
ಒಪ್ಪುವ ಮಾತಿದು.
ಒಬ್ಬಳು: ಅಂತಾ ದಡೆ ಸೂರಕಾರತಿ
ಯೆತ್ತುವೆವು.
ಉತ್ತರ: (ಆಲೋಚಿಸಿ) ಆದೊಡೇನು !....
ಕೌರವರ ಸಂಹರಿಸಿದ
ದುರ್ಯಶವೆನ್ನತಾಗುವುದು.... ಆ
ಪಾಪಕಂಜುವೆನು.
ದೂತ: ಆದಕೇನು ಕೊನೆಗೆ ಅಶ್ವಮೇಧವ
ಮಾಡಿ ಅಘವನೂಕಬಹುದು.
ಒಬ್ಬಳು: ಅಹುದಹುದು ! ಕ್ಷತ್ರಿಯರ
ಧರ್ಮವದು.
ಉತ್ತರ: (ಆಲೋಚಿಸಿ) ಊಹೂಂ !
ಸಲ್ಲದು, ಸಲ್ಲದು !
ನುಡಿದು ಫಲವೇನು ! ಸಾರಥಿ ಮಾಡಿದ
ನಿನ್ನಿನ ಬವರದಲಿ.
ಶಿವ ಶಿವ ! .... ಗಡಚಿಸುವ ಸಾರಥಿ
ಯೊಬ್ಬನ ಪಡೆದೆನಾದೊಡೆ
ಕೌರವೇಂದ್ರನ ಪಡೆಗೆ ಹಬ್ಬವ ಮಾಡಿ
ಸುವೆ, ತೋರುವೆನು ಕೈಗುಣವ.

ಬೃಹನ್ನಳೆ: (ತನ್ನೊಳಗೆ ನಗುತ್ತ) ಬಾಲ
ಭಾಷೆಯ ವೀರ ಬರಿಗಳುಹುತಿಹನು !
(ಪ್ರಕಾಶವಾಗಿ)
ಇದೇನು ? ಉತ್ತರೆಯಲ್ಲಿ ? ನಾಟ್ಯ
ಶಾಲೆಯಲಿ ಭಾರಿಕಾರ್ಯದ ಬೆರಗು ?
ಒಬ್ಬಳು: ನೆರೆದು ಬಂದರು
ಹಸ್ತಿನಾಪುರದರಸುಗಳು,
ಶತಸಾವಿರದ ತುರುಗಳ ಹಿಡಿದರು,
ಅಳಿದುದು ಗೋಪಪಡೆ.
ಕಾದಿ ಮರಳಿಚುವೊಡೆ ಎಮ್ಮಣ್ಣ
ದೇವನ
ಘುಂಕೆ ಸಾರಥಿಯಿಲ್ಲ ನೀವಾನರನ
ಸಾರೆಥಿಯೆಂದು ಕೇಳಿದೆವು.
ಬೃಹನ್ನಳೆ: ನಿಮ್ಮ ಮಾತನು ಮೀರ
ಬಲ್ಲೆನೆ ? ಸಾರಥಿಯಹೆನು.
ಉತ್ತರ: ಎಲೆ ಬೃಹನ್ನಳೆ ತೆತ್ತುದೆನ
ಗಗ್ಗಳಿಯರೊಳು ವಿಗ್ರಹವು.
ನೀ ಫಲುಗುಣನ ಸಾರಥಿಯೈ, ನೀನೊ
ಲಿದು ಮೆಚ್ಚಲು ಕಾದಿತೋರುವೆನಹಿತ
ಸೇನೆಯಲಿ.
ಬೃ: ಎಲೆ ಕುಮಾರಕ, ನಿನ್ನ ತಂಗಿಗೆ
ಕಲಿಸುವಗ್ಗದ ನಾಟ್ಯ
ವಿದ್ಯೆಗಳೊಳಗೆ ಪರಿಣತಿಯೆನಗೆ; ಅಲ್ಲದೆ
ನಿನ್ನಿದಿರಿನಲಿ ನಿಲಲಂಜುವೆನು.
ಉತ್ತರ: ಛಿ, ಅಂಜಿಕೆಯೆ ? ರಣದೊಳು
ನಾನಿರಲು ಭೀತಿಬೇಡ.
ಭಂಜಿಸುವೆನಹಿತರನು ನಾಕದ
ಕಂಜವದನೆಯರಪ್ಪುವೊಲು
ಇದೆಕೋ ಹೊಂಗೆಲಸದೀ ಕವಚ,
ಹೀಗೆ ತೊಡು,

ಈ ಖಂಡೆಯವ ಹೀಗೆ ಹಿಡಿ—
ಮಹಿಳೆಯರು: (ಕಿಲಕಿಲ ನಗುತ್ತ) ಅದು
ನೋಡಿ ತಲೆ ಕೆಳಗಾಗಿಹುದು ಖಂಡೆಯವು.
ಉತ್ತರ: ನಾನಲ್ಲ, ನಾನಲ್ಲ ! ಈ
ಬೃಹನ್ನಳೆಯೆ ತಲೆ ಕೆಳಗೆ
ಮಾಡಿದವನು.
ಮಹಿಳೆಯರು: (ನಕ್ಕು) ಹೋಗಿ ಬನ್ನಿರಿ.
ವಿಜಯ ವಧು ವರಿಸಿ ಬರಲಿ ನಿಮ್ಮನು.
(Bugle and war effects)

Scene II

(Crowd, ರಥದ ಓಟ ಉತ್ತರನ
ಕಿರುಚುವ ಧ್ವನಿ)
ಉತ್ತರ: ಅಯ್ಯೋ ಆ ಕುರು ಸೇನಾ
ಸಾಗರ !....ಅಯ್ಯೋ ಕರಿಘಟಾವಳಿ !
ಅಲ್ಲಲ್ಲಿ ಪ್ರಳಯ ಮೇಘದ ಮಾಲೆ !....
ಅಯ್ಯೋ ಆ ತುರುನಿಕರ !....
ಅಯ್ಯೋ, ಅಯ್ಯೋ !....
ನಾನೊಲ್ಲೆ, ನಾನೊಲ್ಲೆ....
ನಾನಿಲ್ಲಿಂದಲೇ ಧುಮುಕುವೆನು....
(ಕುದುರೆಗಳ ಹೇಷಾರವ)
ಅಯ್ಯೋ ಕುದುರೆಗಳ ಕಿರುಚಾಟ....
ಧುಮುಕಲೂ ತೆರವಿಲ್ಲ....
ಅಯ್ಯೋ ಹಸಿದ ಮಾರಿಯ ಕಟಕದಲಿ
ಕುರಿನುಸುಳಿ
ಬದುಕುವುದೇ ಬೃಹನ್ನಳೆ! ಎಸಗದಿರು,
ತೇಜಿಗಳ ತಡೆ; ಚಮ್ಮಟಿಗೆಯನು
ಬಿಸುಡು.
ಮಿಸುಕಬಹುದೇ ಪ್ರಳಯ ಕಾಲನ,
ಮುಸುಕನುಗಿವವರಾರು ?

ಕೌರವನಸಮು ಬಳನ್ನೈ, ರಥವ
ಮರಳಿಸು ಪುರಕೆ ಬೇಗ....
(ರಥದ ಶಬ್ದ; ಹೇಷಾರವ)
ಬೃಹನ್ನಳೆ: ಎಲೆ ಕುಮಾರಕ ಮೊದಲ
ಚುಂಬನದೊಳಗೆ
ಹಲು ಹೋದಂತೆ ಕಾಳಗದೊಳಗೆ
ಬೆರಸದಮುನ್ನ ಹಿಡಿದೈ
ಸಮರ ಭೀತಿಯನು ? ....
ಉತ್ತರ: (ಅಳುವ ದನಿಯಲಿ) ಏಕೆ ಸಾರಥಿ
ರಥವ ಮುಂದಕೆ ನೂಕಿ
ಗಂಟಲ ಕೊಯ್ವೆ ? ಸುಡು ಸುಡು;
ಕಣ್ಣೊಡೆಯುತಿದೆ
ಕಾಣಾ ಮಹಾಬಲವ !....ಇದೋ
ನಾನು ಧುಮುಕುವೆನು.
ಧುಮುಕಿ ಧಾವಿಸುವೆನು....ವಾಜಿಗಳ
ತಡೆ ವಾಘೆಯಲಿ.
ಬೃಹನ್ನಳೆ: (ಕೋಪಿಸಿ) ಎಲವೊ, ಅರಿ
ಯೆಯಾ ಅರಿಬಲವು ನಗುವುದನು ?
ನಿಲು, ಹೋದೆಯಾದಡೆ ಕಿತ್ತು ಬಿಸು
ಡುವೆ ನಿನ್ನ ಶಿರವನು, ನಿಲ್ಲು, ನಿಲ್ಲು.
ಉತ್ತರ: ಅಯ್ಯೊ, ಮಿತ್ತುವೋ
ಸಾರಥಿಯೊ ! ಪಾಪಿಯ
ನೆತ್ತಣಂದವೆ ಮಾಡಿಕೊಂಡೆನು,
ಅಕಟಕಟಾ !
ಬೃಹನ್ನಳೆ: ದಿಟ್ಟತನಮುಗೆ, ಹೆಂಗಳಿದಿರಲಿ
ಹೊಚ್ಚುಗುಟ್ಟದೆ,
ಹಗೆಗಳಿದಿರಲಿ ಬಿಚ್ಚುಕೊಂಡೆ;
ದುರಾತ್ಮ, ಮುರಿದೆ ವಿರಾಟಾನ್ವಯವ.
ಉತ್ತರ: ಎಲವೊ ಬೃಹನ್ನಳೆ! ಕೊಳುಗುಳ
ದೊಳೀಯೊಡ್ಡವವ

ಮುರಿವಗ್ಗಳಿಕೆಯುಂಟೇ ಎನಗೆ ?
ಕೊಲುವೊಡೆ
ನೀನೆ ಕೊಲ್, ಲೋಗರಿಂದವೆ
ಕೊಲಸದಿರು; ಇದೊ ಕಠಾರಿ.
ಬೃಹನ್ನಳೆ: (ನಕ್ಕು) ಹಂ ! ವೀರಕೇಸರಿ
ಜೀವಗಳ್ಳರ ಪಥವ ಹಿಡಿವರೆ ?
ನಪುಂಸಕರೆಮ್ಮ ನೋಡು.
ಉತ್ತರ: ಅಪ್ಪ, ನೀವೆ ವೀರರು ನಾವೆ
ನಪುಂಸಕರು ಆಯಿತೆ ?
ಬಿಟ್ಟು ಕಳುಹು !
ಬೃಹನ್ನಳೆ: ಕೊಳಗುಳದೊಳೋಡಿದಡೆ
ಹಜ್ಜೆಗೆ ಫಲ, ಮಹಾ ಪಾತಕವು.
ಒಲಿದು ಮುನ್ನಡಿಯಿಡಲು, ಅಡಿಗಡಿಗೆ
ಅಶ್ವ ಮೇಧಫಲ;
ಅಳವಿಯಲಿ ಅಳಿದೆಯಾದೊಡೆ,
ದೇವಲೋಕದ ಲಲನೆಯರು
ತೊತ್ತಿಗರಹರು.
ಉತ್ತರ: ಅಯ್ಯಾ ಓಡಿದ ಪಾತಕವ
ಭೂಸುರರು
ಕಳೆದಪರು; ಅಶ್ವಮೇಧದ ಫಲವ
ಧರಣಿಯಲಿ
ಪ್ರತ್ಯಕ್ಷವಾಗಿಯೆ ಪಡೆಯಬಹುದು;
ಸುರರ ಸತಿಯರೋ
ಬೇಡ ಬೇಡ ಎಮಗೆ ಎಮ್ಮರಮನೆಯ
ನಾರಿಯರೆ ಸಾಕು.
ಅಂತಃಪುರವನುಳಿದೆಮಗೆ ಇಂದ್ರ
ಪದವಿಯ ಬೇಡ.
ಬೃಹನ್ನಳೆ: ಸುಡಲಿ ಜೀವನದಾಸೆಯನು
ಕಿಡುವೊಡಲ ಭುಕ್ತಿಯ
ಭೋಗಕೋಸುಗ ಕಿಡಿಸಬೇಡಿಹಪರದ
ಗತಿಗಳನು....
ನೀನೆ ನಿಮಿತ್ತ ಸಾರಥಿಯಾಗು;
ಕಾದುವೆನು ಮಾರೊಡ್ಡಿನಲಿ
ಉತ್ತರ: ಈ ನಿನ್ನ ಗನ್ನಗತಕವ ಬಲ್ಲೆ;
ನೀ ನೆನ್ನ ಬಿಟ್ಟು ಕಳುಹು.
ಬೃಹನ್ನಳೆ: ಎಲವೊ ಸಾರಥಿಯಾಗು ಬಾ,
ಬರಿಗಳುಹಿದರೆ
ಗಂಡಲಕೊಯ್ವೆ; ಗೆಲುವೆ ನೀ ಪ್ರತಿ
ಭಟನಿಕಾಯವ ನಿನ್ನ ಸಾಕ್ಷಿಯಲಿ.
ಬಳಿಕ ನೀ ನಗು ನಡೆ;
ಉತ್ತರ: ಅಕಟಕಟಾ ! ಎನ್ನ
ದುರ್ವಿಧಿಯೆ !
ಬೃಹನ್ನಳೆ: ಪೇಡತನ ಬೇಡೆಲವೊ
ರಣದೊಳಗೋಡಿಸುವೆ ಸಹಿತರನು.
ಕೋಡದಿರು, ಕೊಂಕದಿರು....ಇದೆಕೋ
(ರಥವು ನಿಲ್ಲುವುದು)
ಉತ್ತರ: ಅಂ ? .... ಅಯ್ಯೋ ಪೆಣಂ
ಪೆಣ್ಣಲ್ಲ, ಪೆಣಂ !
ಪೆಣಂ ಭೂತ !
ಬೃಹನ್ನಳೆ: ಎಲವೊ ಪೆಣ್ ಭೂತ ! ....
ಇದು ಬನ್ನಿಯ ಮರ !
ಕೈಮುಗಿ ! ಮರನ ನೇರು; ಇದರೊಳಗೆ
ಪಾಂಡವ
ರಿ ರಿಸಿ ಹೋದರು ಕೈದುಗಳ; ನೀ
ಹರಣ ಭರಣ
ಕ್ಷಮೆಗಳಲಿ ತೆಗೆದೆನಗೆ ನೀಡು....ಇದೋ
ಬನ್ನಿ

ಯ ಮುಟ್ಟು; ನಿನ್ನ ಭೀರುತನಪೋಗಿ
ಬೀರತನಬಪ್ಪುದು.

ಉತ್ತರ: (ಮರನೇರಿದ ಸಪ್ಪಳ)....
ಜೈ ಮಹಾಂಕಾಳಿ !....
ಇದೆಂತಹ ಮಾರ್ಪಾಡು ! ....
ಪೊಳ್ಳೆದೆಯು ಎಂಟೆದೆಯಾಗು
ತಿದೆ ! ಮೈ ನವಿರುತಿದೆ ವೀರ
ಸಿರಿಯಾದೆ !....ಉತ್ತರನು
ಅಂತಃಪುರದ ಹೇಡಿಯುತ್ತರನಲ್ಲ—
ವೀರ ವಿರಾಟಗುವರ
ಉತ್ತರ ಕುಮಾರ !....

ಬೃಹನ್ನಳೆ: ಇದೆಕೋ ವೈರಿಗಳ ಗಂಟಲ
ಬಳೆಯ ಮುರಿವಂತೆ ಈ ಬೃಹನ್ನಳೆಯ
ಬಳೆಯ ಮುರಿದಿಡುವೆ ! ....ತಾ, ಎನ್ನ
ಘನತರದ ಗಾಂಡೀವಿಯನು ತಾ !....

ಉತ್ತರ: ಯಾರು ? ಪಾರ್ಥ ?.... ವೀರ
ಪಾಂಡವ ಪಾರ್ಥ ! ಎನ್ನ ಸೈರಿಸಿ
ಕ್ಷಮಿಸು.

ಬೃಹನ್ನಳೆ: ಎದ್ದೇಳು ವೀರ ಉತ್ತರ
ಕುಮಾರ !

(ಕಹಳೆ)



---

# ದೀಪಾವಳಿ ?

ಎಲ್ಲೆಡೆಗು ತುಂಬಿಹುದು ದೀಪಗಳ ಹಾವಳಿ
ಎಲ್ಲಿಹುದು ನಿಜವಾದ ದೀಪಾವಳಿ ||

(೧)

ಮನೆ ಮನೆಗು ಉರುಯುತಿಹ
ಹಣತೆಗಳು ಮಣ್ಣಿನವು
ಜೀವಂತ ಹಣತೆಗಳು ಉರಿಯುವುದೆಂದು ?
ಭಾರತದ ತಾಯಿಗಿದೊ ಕೋಟ್ಯವಧಿ
ಸುತರಿಹರು
ನಿಜವಾದ ದೀವಳಿಗೆ ಬರುವದೆಂದು ?

(೨)

ಬೆಳ್ಳಕ್ಕರಿಗಳ ಸಂಖ್ಯೆ ಕಡಿಮೆಯಾಗಲೆ
ಇಲ್ಲ
ತಿಳುವಳಿಕೆ ಎಂಬುದನು ಕಂಡೆ ಇಲ್ಲ
ಶುದ್ಧ ಚಾರಿತ್ರ್ಯವದು ಎಲ್ಲಿ
ದೊರೆಯುವದಿನ್ನು ?
ರಾಮರಾಜ್ಯದ ಕನಸು,
ಕನಸಿನಲು ಇಲ್ಲ.

"ಜೀವಿ"



# ರಂಗು-ರಂಗೀನ ದೀವಳಿಗೆ

ಆಶ್ವೀನ ಮಾಸದ ನವರಾತ್ರಿಯ ನಾಡ ಹಬ್ಬದ ನಂತರ ವೈಭವಶಾಲಿಯಾಗಿ ಅದೆ ಇಡುವ ಸಂಭ್ರಮದ ಉತ್ಸವ ಎಂದರೆ ದೀಪಾವಳಿಯದೆ. ಸಾಂಕೇತಿಕವಾಗಿ ಅದು ಜ್ಞಾನಸೂಚಿ ಎನ್ನಬೇಕು. ಮನುಷ್ಯನ ಕಜ್ಜಲ ಮಾಲಿನ್ಯವನ್ನು ತೊಡೆದೊಗೆವುದು ಆದರ ಹಿರಿ ಗುರಿ. ಭಾರತದ ಶೋಧನ ಸಂಪತ್ತಿಗೆ ಆಗ ವಿಶೇಷ ಕಳೆ ಕಟ್ಟುವುದು. ಅಳಿಯನ ಸತ್ಕಾರ ಈ ಹಬ್ಬದ ಜೀವಾಳ. ಉಳಿದ ಪರಿವಾರ ಕಡೆಗಣಿಸಲಾಗುವ ದೆಂದೇನೂ ಅಲ್ಲ. ಮನೆಯೆಲ್ಲ ಆಗ ಅಚ್ಚುಕಟ್ಟು. ಮೇಲೆ ನಿರಾಡಂಬರ ಸಿಂಗಾರ ! ಎಲ್ಲಕ್ಕೂ ಕಳಸವಿಡುವಂತೆ ಪಗಡೆ ಆಟದ ಉಜ್ವಲ ಕೋಲಾಹಲ. ಪೌರಾಣಿಕ ಅರ್ಥ ಪೂರ್ಣ ಹಿನ್ನೆಲೆಯ ದೀಪಾವಳಿ ನಾಡಿನಾದ್ಯಂತ ಲೋಕ ಪ್ರಿಯತೆ ಗಳಿಸಿ ಉಳಿಸಿಕೊಂಡರುವದು ಭಾರತೀಯ ಸಾಂಸ್ಕೃತಿಕ ಪರಂಪರೆಯ ಪ್ರತೀಕವೇ ಸೈ. ಲಕ್ಷ್ಮೀ ಪೂಜೆಯ ನಿಮಿತ್ತ ಎಲ್ಲೆಡೆ ಮಾಂಗಲ್ಯ ನೆಲೆಸಿರುವದು. ಇನ್ನೂ ಈ ಹಬ್ಬದ ಹಿರಿಮೆಗೆ ಪೋಷಕವಾಗಿದೆ. ಇಂತಹ ದೀವಳಿಗೆಯ ಬೆಡಗಿನ ಸಂತಸಕ್ಕೆ ಮರುಳಾಗದ ಆ ಬಾಲ ವೃದ್ಧರಾರು ? ಇದೀಗ ದೀವಳಿಗೆಯ ಸಾರ್ವತ್ರಿಕ ಸಂಭ್ರಮ !

ಎಸ್. ಎಸ್. ಗದಗಕರ
ಧಾರವಾಡ




—ಶ್ರೀ ಪಂಚಾಕ್ಷರಿ ಹಿರೇಮಠ

ಆತನನ್ನು ನೆನೆದು- ಆಕೆ........

"....ಪತ್ತೆ ಬೆಳಗಾಯಿತು. ಹೂ ಹಾಗೂ ಎಲೆಗಳ ಮೇಲೆ ಹನಿಗಳಿದ್ದವು. ಬಹುಶಃ ಇವು ನನ್ನ ಅವೇ ಕಣ್ಣೀರಿರ ಬೇಕು........ ನಿನ್ನ ಸ್ಮರಣೆಯಲ್ಲಿ ರಾತ್ರಿ ವಿಡೀ ನಾನು ಉದುರಿಸಿದ ಕಣ್ಣೀರು........

....ನಿದ್ರೆಯಂತೂ ಬರಲೊಲ್ಲದು........ ನಿದ್ರೆಯಾದರೂ ಬಂದಿದ್ದರೆ ನಿನ್ನನ್ನು ಕನಸಿನಲ್ಲಾದರೂ ಕಂಡು ಮಾತನಾಡಬಹುದಿತ್ತು........

....ಸಾವರಿಸಿಕೊಂಡಿರು........ ಮುಖದ ಮೇಲೆಲ್ಲ ಹಾರಾಡುವ ಮುಂಗುರುಳು, ಚಿಂತಿತಗೊಂಡಿರುವ ದೃಷ್ಟಿ- ಏನನ್ನೋ ಕಳೆದುಕೊಂಡ ಹಾಗಿರುವ ನಿನ್ನ ಸ್ಥಿತಿ- ಎದೆಯೊಳಗಿರುವ ರಹಸ್ಯ ಹೊರಮೂಡಿತು....

....ನೀನೋ............ ನೀನು ಕವಿಯ ಸ್ವಪ್ನ.... ಉಹ್ಹೂಂ !....ನೀನು ಸ್ವಪ್ನವೂ ಅಲ್ಲ.... ಹಾಗಿದ್ದರೂ ಅಸಂಖ್ಯಾತ ಸ್ವಪ್ನಗಳ ಸೃಷ್ಟಿ ಮಾತ್ರ........"

ಹೀಗೆಲ್ಲ ಹೇಳಿ ಹೋದ ನೀವು ಮತ್ತೆ ಬರಲೇ ಇಲ್ಲ.

× × × ×

ನಾನು ಎಲ್ಲಿಯ ವರೆಗೆ ನಿಮ್ಮ ಬರ ವನ್ನು ನಿರೀಕ್ಷಿಸಲಿ. ಪ್ರತಿ ಸಲವೂ ಉದ ಯಿಸುವ ಸೂರ್ಯ, ನನಗಾಗಿ ನೂರು ಆಕೆಯ ಕುಸುಮುಗಳನ್ನು ತರುತ್ತಾನೆ.... ಆದರೆ.... ?

ಸಂಜೆಯಾಗುತ್ತ ಬಂದಂತೆಲ್ಲ ಈ ಹೂವುಗಳೆಲ್ಲ ನನ್ನ ಮಂದಸ್ಮಿತದ ಹಾಗೆಯೇ ಬಾಡಿ ಹೋಗುತ್ತವೆ. ಮತ್ತೆ ನಾಳೆ........

ಎರಡನೆಯ ಬೆಳಗು ಬರುತ್ತದೆ. ನೀವು ಬರಬೇಡಿ–

ಮಾತ್ರ ಒಂದು ಸಲ, ಕೇವಲ ಒಂದು ಸಲ ಬಂದು, ಇಷ್ಟು ಮಾತ್ರ ಹೇಳಿ ಹೋಗಿ–

ಈ ನಿರೀಕ್ಷೆಯ ಶಿಕ್ಷೆ ನನ್ನ ಯಾವ ಅಪ ರಾಧಕ್ಕಾಗಿ ? ಓ ಎನ್ನ ಪ್ರಿಯತಮ !

ಮುಚ್ಚಂಜೆಯ ಬಣ್ಣ ಬುವಿಯ ಅಪ್ಪಿ ದಾಗ ನಿಮ್ಮ ನಿರೀಕ್ಷೆಯ ನಿರಾಶೆಯನ್ನು ಹೋಗಲಾಡಿಸುವುದಕ್ಕಾಗಿ ಪ್ರಕೃತಿಯ ಮಡಲಿಗೆ ಶರಣು ಹೋಗುತ್ತೇನೆ.

ನಿರೀಕ್ಷೆಯ ಆ ಕ್ಷಣಗಳನ್ನು ರಂಗುರಂಗಿ ನಲ್ಲಿ ಎದ್ದಲು ಹೂದೋಟದ ಸಮಸ್ತ ಪುಷ್ಪಗಳು ನನ್ನನ್ನು ತಮ್ಮ ಸುಗಂಧದಲ್ಲಿ ಮೀಯಿಸುತ್ತವೆ.

ತೀಡುವ ತಂಗಾಳಿಯ ಮದೋನ್ಮತ್ತ ತೆರೆಗಳು ನನ್ನ ಸುಂದರ ತುಟಿಗಳ ಮೇಲೆ ಗೀತಗಳಿಗೆ, ನೂರು ಗೀತಗಳಿಗೆ ಜನ್ಮ ನೀಡುತ್ತವೆ, ಆದರೆ ಅವೆಲ್ಲ ಬರೀ ವಿರಹ ಗೀತಗಳು, ನೀವಿಲ್ಲದ ಯಾತನೆ ಹೆಚ್ಚಿಸುವ ಗೀತಗಳು........

....ನನ್ನದೊರೆ, ನನ್ನ ಈ ಬಟ್ಟಲುಗಣ್ಣು ಗಳಲ್ಲಿ ರಾತ್ರಿಯ ಕಾಡಿಗೆ ಹಬ್ಬುತ್ತಲಿದೆ....

ಯೌವನ ನನ್ನ ಅಂಗ ಅಂಗದಲ್ಲಿ ಮಾದ ಕತೆ ತಂದಿದೆ. ನನ್ನ ನರ ನರಗಳಲ್ಲಿ ಹರಿ ಯುವ ರಕ್ತ ನಿಮ್ಮ ನಾಮಸ್ಮರಣೆಯ ಜಪ ಗೈಯುತಿದೆ....

ಆದರೆ ಯಾವಾಗ !....

ರಾತ್ರಿಯ ನಿಶ್ಶಬ್ದತೆಯಲ್ಲಿ, ನಿರೀಕ್ಷೆ ನಿರಂತರ ಸಮಯದಲ್ಲಿ ಪರಿವರ್ತನೆ ಹೊಂದಿ ನನ್ನ ಕಣ್ಣಿನಿಂದ ಕಣ್ಣೀರಿನ ನಕ್ಷತ್ರಗಳು ಉದುರಿ ಬೀಳಲಾರಂಭಿಸಿದಾಗ !....

ಮೊದಲು....

ನೀವು ನನಗೆ ಜೀವದಾನ ಮಾಡಿದಿರಿ ....ಸಂತಸ ನೀಡಿದಿರಿ....

ಮತ್ತೆ—

ನೋವು, ದುಃಖ ನೀಡಿದಿರಿ....ಆದರಿಂ ದಾಗಿ ತಳಮಳಿಸಿ ಹೋದೆ....

ಆದರೆ—

ಇಂದೂ ನೀವು ಅಷ್ಟೇ ಪ್ರಿಯರಾಗಿ ದ್ದೀರಾ....

ಯಾಕೆಂದರೆ—

ಈ ನೋವುಗಳಿಂದಾಗಿಯಾದರೂ ಸ್ಮರ ಣೆಗಳು ಜೀವಂತವಾಗಿವೆ....

ದೊರೆ....

ನಿರಾಶಮಯವಾಗಿರುವ ಈ ವಾತಾ ವರಣ,

ಅಚೈತನ್ಯವಾಗಿರುವ ಈ ದೃಶ್ಯಗಳು,
ಅಸಹನೀಯವಾದ ಈ ನಿಃಶ್ಯಬ್ಧತೆ
ಉಸಿರು ಹಾಕುವ ಈ ಆಶೋತ್ತರಗಳು
ಉರಿಯುತ್ತಿರುವ ಈ ಪ್ರೇಮ

ಇದುವೇ ಜೀವನವೆನ್ನುವುದಾದರೆ ಸಾವು ಏನಾಗಿರಬೇಕು ?....

ನೀವಿಲ್ಲದೆ ಒಂದು ರಾತ್ರಿ ಕೂಡ ಕಳೆಯದಿರುವಾಗ, ನನ್ನೆದುರಿಗೆ ಬೃಹದಾಕಾರ ತಾಳಿ ನಿಂತಿರುವ, ಈ ಜೀವನ ಹೇಗೆ ಕಳೆಯಬೇಕು....

ನಕ್ಷತ್ರಗಳ ನೆರಳಿನಲ್ಲಿ ಬರುವ ದೊರೆ, ಒಂದು ವೇಳೆ ಇಡೀ ರಾತ್ರಿ ನಕ್ಷತ್ರಗಳೇ ಬಾರದೆ ಹೋದರೆ ?....

ಯೋಚಿಸುತ್ತೇನೆ....ಮತ್ತೂ ಯೋಚನೆ ಮಾಡುತ್ತೇನೆ....ಯೋಚನೆ ಮಾಡುತ್ತ ಮಾಡುತ್ತ ನಾನೇನು ಯೋಚನೆ ಮಾಡುತ್ತಿದ್ದೆಯೆಂಬುದನ್ನು ಮರೆತು ಬಿಡುತ್ತೇನೆ....ಮತ್ತೆ ನನ್ನ ಯೋಚನೆ ಮೊದಲಿನಿಂದ ಪ್ರಾರಂಭ ಮಾಡಲು ಯತ್ನಿಸುತ್ತೇನೆ. ಮತ್ತೂ ಮರೆತು ಬಿಡುತ್ತೇನೆ....

ಅಯ್ಯೋ ದೇವರೆ ! ನನಗೆ ಎಲ್ಲಿಯಾದರೂ ನೆನಪಿನ ಶಕ್ತಿ ಹಾಳಾಗುವುದರಲ್ಲಿದೆಯೇನೊ....

× × ×

ದೀಪ ಉರಿಯುತ್ತಲೇ ಇದೆ. ನಿಮ್ಮ ಬರುವನ್ನು ಕುರಿತೇ ಚಿಂತನಶೀಲಳಾಗಿ ಕುಳಿತ ನನ್ನೆದೆಯಲ್ಲಿಯೂ ಉರಿ....

ರಾತ್ರಿ ಮತ್ತೆ ಮತ್ತೆ ದೀವಿಗೆ ತನ್ನ ಸುತ್ತಿ ಬಂದ ಪ್ರೇಮಿ ಹುಳಗಳನ್ನು ಸುಡುತ್ತದೆ, ಇಲ್ಲವೆ ಅವೇ ಸುಟ್ಟುಕೊಳ್ಳುತ್ತವೆ. ಬೆಳಗಾಗುತ್ತಲೇ ದೀಪ ತಾನೂ ಅವುಗಳ ಹೊದಿಕೆಯಾಗುತ್ತದೆ. ದೀಪ-ಹುಳುಗಳ ಪ್ರೇಮ–ಸಾವುಗಳ ಕ್ರಮ ಸಾಗಿಯೇ ಇದೆ. ದಿನಾಲು ಅವೇ ದೃಶ್ಯ. ನಾನು ಯೋಚನೆಗೆ ಈಡಾಗುತ್ತೇನೆ—

ಸೋಲು ಯಾರದಾಯ್ತು ಎನ್ನುವಲ್ಲಿ ಪ್ರೇಮದ್ದೋಅಥವಾ ಸೌಂದರ್ಯದ್ದೋ?....

....ಜೀವನ–ಹುಟ್ಟು ಹಾಗೂ ಸಾವಿನ ನಡುವೆ ಬೆಳಕಿನ ಬಹು ಸೂಕ್ಷ್ಮವಾದ ಒಂದು ರೇಖೆ ಮಾತ್ರ ಅಲ್ಲವೇ....

ನೀವು ಬರಬೇಕು........ಹೊಸವರುಷದೊಂದಿಗೆ ನಾವು ನೂರು ಭರವಸೆಗಳ ಮಂದಿರಕಟ್ಟೋಣ,ಅದರಲ್ಲಿ ಆಶೆ-ಆಕಾಂಕ್ಷೆಗಳ ಸುಂದರ ದೀಪ ಉರಿಸೋಣ....

ನೀವು, ಅಪಾರ ಪ್ರೇಮಮಯಿಯಾದ ನೀವು ನನ್ನ ಶಕ್ತಿ ಸಾಮರ್ಥ್ಯ ಅರಿಯಲಾರಿರಾ....?

ಜಗತ್ತು ಆಟಂ ಬಾಂಬಿನಿಂದಾಗುವ ನಾಶಕ್ಕಾಗಿ ಹೆದರುತ್ತದೆ. ಹೈಡ್ರೋಜನ ಬಾಂಬಿನ ರಾಕ್ಷಸೀ ಶಕ್ತಿ ನೆನೆದು ನಡಗುತ್ತದೆ. ಆದರೆ ನಾನು ಲಜ್ಜೆ ಹಾಗೂ ಗೌರವದ ಜೀವಂತ ಪ್ರತೀಕವಾಗಿ ಸದು ವಿನಯದ, ಅಭಯದ ಕೈ ಎತ್ತಿದಾಗ ಈ ರಾಕ್ಷಸೀ ಶಕ್ತಿಯೆಲ್ಲ ಹಾಳಾಗುತ್ತದೆ. ಯಾಕೆಂದರೆ ನಾನು ಜಗತ್ತಿನ ತಾಯಿ....

....ನಾನು ನಿಮ್ಮ ಕೋಣೆಯಲ್ಲಿ

ಸೂರ್ಯನ ಪ್ರಥಮ ಕಿರಣವಾಗಿ ಬರುತ್ತೇನೆ. ಬಾಯಿಂದ ಹೇಳದೆ ಹೋದರೂ ಏನಂತೆ ನನ್ನೆದೆಯ ಈ ಬಡಿತ ಹೊಸ ವರುಷದ ಶುಭಾಶಯ ಹೇಳದಿರಲಾರದು........

– ೨ –

ಆಕೆಯನ್ನು ನೆನೆದು— ಆತ........

....ನೀನಿರುವ ವರೆಗೂ ನಾನಿರುತ್ತೇನೆ; ಅನಂತರ ಒಂದು ಕ್ಷಣವೂ ನಾನಿರುವು ದಿಲ್ಲ........

ನೀನು ಅಂದು ಉರಿಸಿ ಹೋಗಿರುವ ಪ್ರೇಮ-ಜ್ಯೋತಿಯ ಬಳಿ ಶಾಂತ ಮನಸ್ಕ ನಾಗಿ ಕುಳಿತು ಪ್ರಾರ್ಥನೆ ಸಲ್ಲಿಸುತ್ತೇನೆ, ಹಗಲು–ರಾತ್ರಿ. ಏನೆಂದು ಗೊತ್ತೆ? ಕಳೆದು ಹೋದ ದಿನಗಳ ಸ್ಮರಣೆ ನನ್ನ ಪಾಲಿಗೆ ಎಂದೂ ಇರಲಿ. ಅವುಗಳನ್ನು ಮರೆಯುವಂತಹ ದುರ್ದೈವ ನನಗೆ ಬರ ದಿರಲಿ........

....ಬಿರುಗಾಳಿ ಬೀಸುತಿದೆ ಆಚೆ ದಿಕ್ಕಿ ನಿಂದ, ನುಗ್ಗುತಿದೆ ಒಳಗೆ. ನೀನಂದು ಉರಿಸಿ ಹೋದ ದೀಪ, ನುಗ್ಗಿ ಬರುವ ಬಿರುಗಾಳಿಗೆ ಹೊಯ್ದಾಡುತಿದೆ. ಇಗೋ.... ಅದು ಆರದಂತೆ ನಿರ್ಮಲ ಚಿತ್ತನಾಗಿ ನಿನ್ನ ಪ್ರೀತಿಯಿಂದ ಸಿಂಚನಗೊಂಡಿರುವ ನನ್ನ ಎದೆ ಮರೆ ಮಾಡಿದ್ದೇನೆ. ಮತ್ತೆ ಈಚೆಯಿಂದ ತಂಪಾದ ಹವೆ, ಬಹುಶಃ ಸಮುದ್ರದ ತೆರೆಗಳ ಮೇಲೆ ಹಾದು ಬರು ತ್ತಿರಬಹುದು, ಈ ಹವೆ............ ಬರಲಿ ಬಿಡು. ನಾನು, ನಾನು ಮರೆಮಾಡಿರುವ ಈ ಎದೆ ಸುಟ್ಟರೂ ಸರಿ, ಈ ದೀಪ ಆರದಂತೆ ನೋಡಿಕೊಳ್ಳುತ್ತೇನೆ........

....ದಿನವೂ ಮರಳುವ ಬೆಳಗಿನಲ್ಲಿ ನಾವು ಮತ್ತೆ ಮತ್ತೆ ಹೊಸ ಜನ್ಮ ಪಡೆಯು ತ್ತೇವೆಂದು ಹೇಳಲಾಗುತ್ತಿದೆ. ಆದರೆ ಈ ದುಃಖ, ದುಮ್ಮಾನ, ಈ ಯಾತನೆ ಕಳೆದ ಜನ್ಮದೊಂದಿಗೇನೇ ಏಕೆ ಹೋಗುವುದಿಲ್ಲ. ಇದೆಂತಹ ಹೊಸ ಜನ್ಮ, ದೇವಿ........

....ನನ್ನ ಬದುಕಿನಲ್ಲಿ ಒಬ್ಬಳೇ ಒಬ್ಬಳು ಬಂದಳು. ಆ ಒಬ್ಬಳೇ ನೀನು. ನಿನ್ನನ್ನು ನಾನು ಪ್ರೀತಿಸಿದೆ, ಪೂಜಿಸಿದೆ. ನೀನು, ನನ್ನ ಎಲ್ಲವೂ ಆದ ನೀನು ಒಂದು ದಿನ ನನ್ನ ಪಾಲಿಗೆ ಬರೀ ಸ್ವಪ್ನ, ಬರೀ ಸ್ಮರಣೆ, ಬರೀ ನೋವು– ಆಗುವೆಯೆಂದು ಭಾವಿಸಿರ ಲಿಲ್ಲ, ಆದೇಕೆ ಕಲ್ಪಿಸಿರಲಿಲ್ಲ........

....ಎಲ್ಲೋ ಓದಿದ ನೆನಪು........

Here's to love, a thing
divine,
Description makes it but
the loss
This what we feel but
can't define,
This what we know but
can't express....

....ಇದೋ ದೇವಿ—

ಇಲ್ಲಿ ಪ್ರೀತಿಯ ಕಣ್ಣೀರಿವೆ. ಅದು ಬೀಳುತ್ತಿರುವಂತೆಯೇ ಸ್ಫಟಿಕವಾಗಲಿ ! ಮುತ್ತುಗಳಾಗಲಿ; ಹಲವು ಕಾಲ ಗತಿಸಿದ

ನಂತರವೂ ನಾನು ಪ್ರೇಮಿಸಿದ ಪ್ರಿಯತಮಳ ಸ್ಮರಣಾರ್ಥವಾಗಿ ಅವು ಅವಶೇಷವಾಗಿರಲಿ........

ಸ್ಮರಣೆಗಳೆಲ್ಲ ದುಃಖವನ್ನೇ ಉಮ್ಮಳಿಸುತಿವೆ.... ನೋವನ್ನೇ ಹೆಚ್ಚಿಸುತಿವೆ....

ಕಳೆದು ಹೋದುದೆಲ್ಲ ಕನಸು ಎನ್ನುತ್ತಾರೆ ಜನ........... ಹಾಗಾದರೆ ನಾವು ಎಂದೂ ಕೂಡಿ ಬಾಳಲೇ ಇಲ್ಲವೇ? ಹಾಗೆಂದು ಹೇಳಿ ನಮ್ಮ ಆತ್ಮಕ್ಕೆ ನಾವೇ ವಂಚನೆಗೈಯಬೇಕೆ?....

ದೇವಿ! ಕಳೆದುದು ಕನಸು ಎನ್ನುವುದಾದರೆ, ಭವಿಷ್ಯ ಬರೀ ಲವಲವಿಕೆ, ಆಶೆ ತಾನೇ? ಬದುಕಿರುವ ಇಂದು, ಒಂದೇ ಸತ್ಯವೇನು? ಇದೂ ಇನ್ನೆಯ ಸಾಲಿನಲ್ಲಿ ಸೇರಬೇಕಲ್ಲ........ ಹಾಗಾದಾಗ ಅದೂ ಕನಸು! ಅಯ್ಯೋ ದೇವರೆ, ಈ ಜೀವನಕ್ಕೆ ಈ ಬದುಕಿಗೆ ಏನು ಅರ್ಥ? ಏನು ಬೆಲೆ? ಏನೆಷ್ಟು ವಿಚಾರ........ ಓ! ತಲೆಸಿಡಿದು ಹೋಗುವುದೇನೋ ಎನ್ನುವಂತಾಗಿದೆ....

....ನಿನ್ನ ನೆನಕೆಯಿಂದಾಗಿ ಬಂದ ನೋವು........ ವಿರಹಯಾತನೆ........... ನಿನ್ನನ್ನು ದೇವಿಯೆಂದು ಪೂಜಿಸಿದೆ........ ನೀನೇಕೆ ಹೀಗೆ ಮಾಡಿದೆ........ ಇದೆಂತಹ ಮೌನ ನಿನ್ನದು........... ಓ! ನೀನು ಬರಬೇಕು........

....ಇದೋ ಇಲ್ಲಿವೆ ಕಣ್ಣೀರು.... ನಿನ್ನ ಸ್ಮರಣೆಯಲ್ಲಿ ಉದುರಿಸಿದ ಕಣ್ಣೀರು........



# ಕುರುಡು ಹಣತೆ !

ಎಲವುಗಳ ಜೋಪಡಿಯಲಿ

ಕುರುಡು ಹಣತೆ !

ಉಸಿರೆಳೆಯುತಿದೆ

ಸುತ್ತೆಲ್ಲ ರಂಗುರಂಗಿನ

ವಿದ್ಯುತ್ ಬಲ್ಬುಗಳ ಮಾಲೆ

ನಗ್ನ ನಾಗರಿಕತೆಯ ದೀವಳಿಗೆ ಶೃಂಗಾರ

ಲಕ್ಷ್ಮೀಜಲೋದರರ

ಪೂಜೆ—

ಮಾನವತೆಯ ಹಣೆಗೆ

ದೀವಳಿಗೆ ಇಟ್ಟ ಅಂಗಾರ

ಸಮಯ ಸವಿಸಿದ ದಾರಿಯಲಿ

ಇಂದಿಗೂ ಕುರುಡು ಹಣತೆ !

ಎಲವುಗಳ ಜೋಪಡಿಯಲಿ

ಉಸಿರೆಳೆಯುತಿದೆ.

—ಶ್ರೀ ಶ್ರೀನಿವಾಸ ಕುಲಕರ್ಣಿ
ಆಕಾಶವಾಣಿ, ಧಾರವಾಡ

# ದೀಪಾವಳಿ

ಶರತ್ಕಾಲದಲ್ಲಿ ದೀಪಾವಳಿಯು ಬರುತ್ತದೆ. ಮಳೆಗಾಲದಿಂದ ಬೇಸತ್ತ ಜನಕ್ಕೆ– ಶುಭ್ರವಾದ ನೀಲಾಕಾಶ – ನಕ್ಷತ್ರಗಳ ಶೋಭೆ – ಸಂತೋಷ ತರದೆ ಏನು ಮಾಡೀತು? ಸೃಷ್ಟಿಯಲ್ಲಿಯ ಪ್ರತಿಯೊಂದು ಬದಲಾವಣೆಯೂ ಮಾನವನ ಜೀವನದ ಮೇಲೆ ಆಗಲೇಬೇಕಲ್ಲ! ಸೂರ್ಯನು ದಕ್ಷಿಣಾಪಥಕ್ಕೆ ಹೋದಂತೆ– ಹಗಲು ತೀರ ಚಿಕ್ಕವಾಗಹತ್ತುತ್ತವೆ— ಕತ್ತಲು ಬಹುಬೇಗ ವ್ಯಾಪಿಸಿ ಬಿಡುತ್ತದೆ. ತಮಸ್ಸನ್ನು ಹೊಡೆದೋಡಿಸಲು ದೀಪಗಳು ಬೇಡವೇ? ಅದರ ಸಂಕೇತವಾಗಿಯೇ ದೀಪಾವಳಿ ಹಬ್ಬ ಬಂದಿರಬೇಕು! ದೀಪವು ಜ್ಞಾನದ ಸಂಕೇತವು– ಅಂತೆಯೇ ನಮ್ಮ ಜೀವನಕ್ಕೆ ಪ್ರಕಾಶ ಬೇಡವೆ? ಕತ್ತಲೆಂಬ ನರಕಾಸುರನನ್ನು ಕೊಂದು ಬುವಿಯನ್ನು ಬೆಳಕಿನ ಲೋಕಕ್ಕೆ ಶ್ರೀ ಮಹಾವಿಷ್ಣು ತಂದನೆಂಬುವ ಪೌರಾಣಿಕ ಕಥೆ ಸುಂದರವಾಗಿದೆ ಹಾಗೂ ಅರ್ಥಪೂರ್ಣವಾಗಿದೆ! ಹಿತವಾಗಿ ಬೀಸುವ ಚಳಿಗಾಳಿ– ಶುಭ್ರವಾದ ಆಕಾಶ– ಬೆಳೆಗಳಿಂದ ತುಂಬಿ ನಿಂತಿರುವ ಭೂಮಿ, ಒಟ್ಟಾಗಿ ಆನಂದದ ಜ್ಯೋತಿಯನ್ನು ಹೊತ್ತಿಸುವುದರಲ್ಲಿ ಅಚ್ಚರಿ ಏನು? ಕತ್ತಲು– ಬೆಳಕಿನ ಮಾನವನ ಜೀವನಕ್ಕೆ ದೀಪಾವಳಿಯು– ಒಂದು ದಿವ್ಯ ಸಂಕೇತವಾಗಿದೆ!

—ಬಿ. ಆರ್. ವಾಡಪ್ಪಿ, ಧಾರವಾಡ




**ಶ್ರೀಮತಿ ಯಮುನಾ ಮೂರ್ತಿ**

ಹ ಹ ಹ ಹ! ಹಾಗ್ಯಾಕೆ ನೋಡ್ತೀರಿ ನನ್ನ? ನುಂಗ್ಹಾಕ್ಬಿಡೊ ಹಾಗೆ? ಥೂ, ಹೋಗಿಪ್ಪ ನಂಗೆ ನಾಚ್ಕೆ ಆಗುತ್ತೆ. ನಿಜ, ನಾನು ನನ್ನ ಅಕ್ಕ-ತಂಗೀರ್ಗಿಂತ ಮೈ-ಕೈ ತುಂಬ್ಕೊಂಡಿದ್ದೀನಿ. ಆದ್ರೆ ನೀವು ಹಾಗೆ ಒಂದೇ ಸಮನೆ ನೋಡ್ತಿದ್ರೆ, ನಂಗೆ ದೃಷ್ಟಿ ಆದ್ರೆ ಏನ್ಮಾಡ್ಡೋದು? ........ ಹೂಂ.... ದೃಷ್ಟಿ ತೆಗೆಯೋದು ಅಷ್ಟು ಸುಲಭ ಅಲ್ಲ. ನಮ್ಮ ಅಜ್ಜೀರ್ಗಂತೂ ಯಾರಿಗೆ ದೃಷ್ಟಿ ಆದ್ರೂ ಬಹಳ ಹೆದರ್ಕೆ........ ಯಾಕಂದ್ರೆ, **ನಮಗೆ** ದೃಷ್ಟಿ ಆದ್ರೆ, **ಅವರು** ಮೈ-ಕೈ ಸುಟ್ಕೋಬೇಕಾಗುತ್ತಂತೆ. ಯಾಕೊ, ಏನೋ?!

ಅಲ್ಲಾರೀ, ಒಂದು ಆಶ್ಚರ್ಯ ಏನೂಂತೀರಾ? ನಾವು, ಈಗ, ಸಣ್ಣವರಾಗಿದ್ದಾಗ, ಹೀಗಿದ್ದೀವಲ್ಲಾ, ವಯಸ್ಸು ಆಗ್ತಾ ಆಗ್ತಾ, ಒಳ್ಳೆ ಫಿರಂಗಿಯವರ ಹಾಗೆ, ಕಾಶ್ಮೀರಿ ಸೇಬನ್ನೂ ಮೀರ್ಸೊ ಅಷ್ಟು, ಕೆಂಪಗೆ ಆಗ್ಬಿಡ್ತೀವಿ.... ನಮ್ಮ ಜಾತೀಲೆ ಹೀಗಂತೆ.... ಖಂಡಿತ.... ನಿಮ್ಗೆ ನಂಬ್ಕೆ ಆಗದಿದ್ದರೆ ನಮ್ಮ ಅಜ್ಜೀನ ನೋಡಿ. ಆದ್ರೆ ಹುಷಾರು! ದೂರದಿಂದಾನೆ ನೋಡಿ ಮಾತಾಡಿಸ್ಬೇಕು! 'ವಯಸ್ಸಾಗಿದೆ ಪರವಾಗಿಲ್ಲ' ಅಂತ ಏನಾದ್ರೂ ಹತ್ರ ಹೋದ್ರೊ, ಅದರ ಸಂಕಟ ನೀವೇ ಅನುಭವಿಸ್ಬೇಕು. ಬಹಾಳ ಘಾಟಿ ಅವಳು. ಘಾಟೀಂದ್ರೆ ಘಾಟಿ! ನಾವೇನಾದ್ರೂ ಜಂಭದಿಂದ ಅವಳ್ಹತ್ರ ಹೋಗಿ, "ಅಜ್ಜಿ,

ಅಜ್ಜಿ, ನಿನ್ನ ಮೈಯೆಲ್ಲಾ ಸುಕ್ಕಾಗ್ಬಿಟ್ಟಿದೆ, ಥೂ! ನಿನ್ನ ಬಣ್ಣ ನೋಡು ಫಿರಂಗಿಯವರ ತರಹ" ಅಂತ ಹಾಸ್ಯ ಮಾಡಿದ್ರೆ, ಅವಳ್ಗೆ ತುಂಬಾ ಸಿಟ್ಟು ಬಂದ್ಬಿಡುತ್ತೆ. ಮೈಕಾದು, ಬಿಸಿ ಬಿಸಿ ಆದಳು ಅಂದ್ರೆ, ಅಕ್ಕಪಕ್ಕದವರ ಮನೆಯವರೂ ಕೂಡ ಹೆದರ್ಕೊಂಡು ಓಡ್ಹೋಗ್ಬೇಕು. ಅವಳು ತಣ್ಣಗಾಗಿ ಎಷ್ಟೋ ಹೊತ್ತಿನವರ್ಗ್ಗೆ, ಮನೆಯೋರೆಲ್ಲಾ ಅಳ್ತಿರ್ತಾರೆ, ಕಣ್ಣುಮೂಗ್ನಲ್ಲಿ ಜಲಪಾತ ಹರಿಸ್ತಾ ... ಹ ಹ ಹ ಹ!

ಹಾಂ! ಹಾಂ! ಕೈ ಹಾಕ್ಬೇಡಿ.... ಹಾಗೆಲ್ಲಾ ಸಿಕ್ಕಿದವರ ಮೈಮೇಲೆ ಕೈ ಹಾಕ್ಬಾರ್ದು. ಬೇರೆಯವರೆಲ್ಲಾ ಎಷ್ಟೋ ದಡ್ಡರಾದರೂ, ನಾವು ಬಹಳ ಚುರುಕು ಅನ್ನೋದನ್ನ ಮರೀಬೇಡಿ! ನಮಗೆ ಸಿಟ್ಟು ಮೂಗಿನ ತುದೀಲೇ ಇರುತ್ತೆ. ನಮ್ಮ ತಂಟೇಗೆ ಹೋಗ್ಬಾರ್ದು ಅಂತ ನಿಮ್ಗೆ ಯಾರೂ ಹೇಳೇ ಇಲ್ವೇನು? ಇನ್ನೂ ಚಿಕ್ಕೋಳು, ಛೋಟುದ್ದ ಇದ್ದೀನಿ, ನನ್ನ ಹತ್ರ ಚೇಷ್ಟೇ ಮಾಡಿದ್ರೆ ಪರವಾಗಿಲ್ಲ ಅಂತ ನಿಮ್ಮ ಅಭಿಪ್ರಾಯ ಇರಬಹುದು. ಆದ್ರೆ ಅದು ತಪ್ಪು ಅಂತ ನಿಮ್ಗೆ ಹೇಳೋಕೆ, ನನಗೆ ತುಂಬಾ ವಿಷಾದವಾಗುತ್ತೆ. ನಾನು ಇಷ್ಟೇ ಉದ್ದ ಇದ್ರೂ, ನನ್ನ ಸಾವಿರದಷ್ಟು, ಲಕ್ಷದಷ್ಟು ಎತ್ತರ, ಗಾತ್ರ ನೀವಿದ್ರೂ, ನಾನು ಮನಸ್ಸು ಮಾಡಿದ್ರೆ, ಒಂದೇ ಸೆಕೆಂಡ್ನಲ್ಲಿ, ನಿಮ್ಮ ಜುಟ್ಟು ಎಗರಿಸಬಿಡಬಲ್ಲೆ, ನಿಮ್ಮ ಕಣ್ಣಲ್ಲಿ ಧಾರಾಕಾರವಾಗಿ ನೀರು ತರಿಸಬಲ್ಲೆ, ನೀವು ಬಾಯಿ ಬಾಯಿ ಬಿಡ್ತಾ ನೀರು ಕೇಳೊ ಹಾಗೆ ಮಾಡಬಲ್ಲೆ! ಇದು ನನಗೊಬ್ಬಳಿಗೇ ಅಲ್ಲ, ನಮ್ಮ ಇಡೀ ಮನೆತನದಲ್ಲೆ, ಪ್ರತಿಯೊಬ್ಬರಿಗೂ ಇರೋ ಶಕ್ತಿ ಸಾಮರ್ಥ್ಯ. ನಮ್ಮ ಅಜ್ಜಿ ಯಾವಾಗ್ಲೂ ಹೇಳ್ತಿರ್ತಾಳೆ, 'ಹುಟ್ಟು ಗುಣ ಸುಟ್ಟರೂ ಹೋಗೋಲ್ಲ' ಅಂತ. ಹಹಹಹ ನಿಜ ಹೇಳೋದಾದ್ರೆ, ನಮ್ಮ ವಿಷಯದಲ್ಲಿ, ಸುಟ್ಟರೆ, ಇನ್ನೂ ಹೆಚ್ಚಾಗಬಹುದು.

ಯಾಕ್ರಿ ಸುಮ್ಮನಾಗ್ಬಿಟ್ರಿ? ನಾನು ಹೆದರಿಸ್ದೆ ಅಂತ ಸಿಟ್ಟು ಬಂತಾ? ನೋಡಿ ನಿಮ್ಮ ಒಳ್ಳೇದಕ್ಕೇ ನಾನು ಹೇಳೋದು. ಮೊನ್ನೆ ಏನಾಯ್ತು ಅಂತೀರಾ? ನನ್ನ ತಂಗಿ ಇಲ್ಲೇ ಮಲಗಿದ್ಳು; ಅಮ್ಮನ ಹತ್ತಿರ, ರೆಸ್ಟು ತೊಗೊಳ್ತಾ. ಯಾರೊ ಒಬ್ಬರು ಬಂದ್ರು, ಸಾಧಾರಣ ನಿಮ್ಮ ಹಾಗೆ ಇದ್ರು. ನೆಟ್ಟಗೆ ಬಂದು ಕುರ್ಚಿ ಎಳ್ಕೊಂಡು ಕೂತ್ಕೊಂಡ್ರು. ನಾವೆಲ್ಲಾ ಕುತೂಹಲದಿಂದ ಅವರ್ನೇ ನೋಡ್ತಾ ಇದ್ವಿ. ಸುಮ್ನೆ ಮರ್ಯಾದೆಯಾಗಿ ಇರ್ಬೇಕೊ ಬೇಡವೊ? ನಮ್ಮ ಅಮ್ಮನ ಹಿಂದೆ ಮಲಗಿದ್ದ ನನ್ನ ತಂಗಿ ಜುಟ್ಟು ಹಿಡ್ದು ಹತ್ತಿರ ಎಳ್ಕೊಂಡ್ರು, ಮುಂಚೇನೆ ಮುಂಗೋಪಿ ಈಗ ಕೇಳ್ಬೇಕಾ? ಅವರ ಕೈಗೆ ಬಿಸಿ ತಗಲಿಸಿದ್ಳು, ಸಿಟ್ಟನಿಂದ. ಅಲ್ಲೆ ಏನೊ ಕೆಲಸ ಮಾಡ್ತಾ ಕೂತಿದ್ದ ಒಬ್ಬ ಹೆಂಗ್ಸು, "ಭಕ್ರಿ ಜೊತೆ ಬೆಲ್ಲ ತುಪ್ಪ ಹಾಕ್ಲೇನೊ?" ಅಂತ ಕೇಳ್ತಾ ಇದ್ರೂ, ಅವರ ಮಾತಿಗೆ ಕಿವಿಗೊಡದೆ, ನನ್ನ ತಂಗೀನ, ಆ ಪಶು ಒರಟೊರಟಾಗಿ ಹತ್ರ ಎಳ್ಕೊಂಡು, ಮೂಗು ಕಚ್ಚಿಡೋದೆ?

ಮಾಧವಿ

ಥೂ! ಪ್ರೀತಿ ತೋರ್ಸ್ನೋದು ಹೀಗೇನೆ? ಇದು ಮೂರ್ಖತನದ ಪರಮಾವಧಿ ಅಲ್ದೆ ಮತ್ತೇನು ಅಂತೀನಿ....ಆದ್ರೆ ಕಚ್ಚೋದೇನೊ ಕಚ್ಚಿದ್ರು, ಆಮೇಲೆ ನೋಡ್ಬೇಕಾಗಿತ್ತು ಅವಸ್ಥೆ. ಹಹಹಹ! ಠಣ್ ಅಂತ ಕುರ್ಚಿ ಬಿಟ್ಟು ನೆಗೆದ್ರು, 'ಹಾ! ಹಾ! ನೀರು ನೀರು' ಅಂತ ಹಾರಾಡ್ತಾ ಒಂದು ತಂಬಿಗೆ ನೀರು ಗಟಗಟ ಕುಡಿದು, ಕಣ್ಣು ಕಣ್ಣು ಬಿಟ್ರು! ಕುಡಿದ ನೀರೆಲ್ಲಾ, ಕಣ್ಣಲ್ಲಿ ಮೂಗಲ್ಲಿ ವಾಪಸ್ ಬಂದ್ಬಿಡ್ತು. ನಾವೆಲ್ಲಾ ನಕ್ಕದ್ದೂ ನಕ್ಕದ್ದೆ. ಹಹಹಹ! ಆಗ ನಮ್ಮ ಅಜ್ಜಿ ಹೇಳಿದ ಮಾತು ನೆನಪಿಗೆ ಬಂತು 'ಮೂರ್ತಿ ಚಿಕ್ಕದಾದ್ರೂ ಕೀರ್ತಿ ದೊಡ್ಡದು' ಅಂತ.

ಅದಕ್ಕೆ ನಾನು ಹೇಳಿದ್ದು, ದೂರದಿಂದ ಬೇಕಾದಷ್ಟು ಮಾತಾಡಿ ಹತ್ತಿರ ಬರ್ಬೇಡಿ ಅಂತ ನಿಮ್ಮ ಕ್ಷೇಮಕ್ಕೆ. ಹೋಗ್ಲಿ, ನಿಮ್ಗೆ ನಮ್ಮ ಮೇಲೆ ಅಷ್ಟು ಪ್ರೀತಿ ಇದ್ರೆ, ನಮ್ಮಿಂದ ದೂರವಾಗಿ, ನಮ್ಮನ್ನ ಬಿಟ್ಟು ಬದುಕಿರೋಕೆ ಸಾಧ್ಯವೇ ಇಲ್ಲ ಅನ್ನೋ ಹಾಗಿದ್ರೆ, ಒಂದು ಪ್ಲ್ಯಾನ್ (Plan) ಹೇಳ್ಕೊಡ್ತೀನಿ. ಅಲ್ಲಿ, ಮೂಲೇಲಿ ಗೊರಕೆ ಹೊಡೀತಾ ಕೂತಿದ್ದಾಳಲ್ಲಾ, ಆ ದೊಣ್ಣೆ, ಅವಳೂ ನಮ್ಮ ಜಾತೀನೆ, ಪಂಗಡ ಬೇರೆ ಅಷ್ಟೆ. ಅವಳನ್ನ ಭೆಟ್ಟಿ ಆಗಿ, ಏನೂ ಭಯವಿಲ್ಲ. ನೋಡೋಕೆ ಅಷ್ಟು ದಪ್ಪಗೆ ಪೊಗದಸ್ತಾಗಿ ದೇಹ ಬೆಳೆಸಿದ್ರೂ, ತುಂಬಾ ಸಾಧು. ಸಿಟ್ಟು ಅಂದ್ರೆ ಏನು ಅಂತಾನೆ ಗೊತ್ತಿಲ್ಲ ಆಕೆಗೆ ಹಹಹಹ! ಮೂಗಿದ್ರೆ ಅಲ್ಲವೆ ಸಿಟ್ಟು ಬರೋದೂ? ಮೂಗೂ ಇಲ್ಲ ಸಿಟ್ಟೂ ಇಲ್ಲ. ಶುದ್ಧ ಎಮ್ಮೆತಮ್ಮಣ್ಣ! ಏನೇನೂ ಚುರುಕಿಲ್ಲ. ದೇಹ ನೋಡಿ ಹೆದರ್ಕೊ ಬೇಡಿ, ಬರೀ ಥೊಸ್ಸೆ....... ಟೊಳ್ಳು. ಗಾಳಿ ತುಂಬ್ಕೊಂಡ ಬಲೂನ್ ತರಹ ಊದಿದಾಳೆ ಅಷ್ಟೆ.

ಅವಳ ಹೊಳಪು ಚರ್ಮ, ತುಂಬ್ಕೊಂಡ ಮೈ ನೋಡಿ ಯಾರಾದ್ರು ಮೋಹಿಸೇ ಮೋಹಿಸ್ತಾರೆ ಅಂತ. ಎಲ್ಲೂ ಇಲ್ಲದ ಅಹಂಕಾರ. ಅದಕ್ಕೆ ಸರಿಯಾಗಿ, ಜನಗಳೂ ಅಷ್ಟೆ. ಎಷ್ಟು ಪೆದ್ದುಗಳು ಅಂತೀರಾ? ನಮ್ಮಲ್ಲಿರೊ ನೂರಲ್ಲಿ ಒಂದು ಭಾಗ ಸಾಮರ್ಥ್ಯ ಇಲ್ದೆ ಇದ್ರೂ, ಅವರ ಪಂಗಡದವರ್ಗೆ ಹೆಚ್ಚು ವಧು-ದಕ್ಷಿಣೆ ಕೊಡ್ತಾರೆ. ಅದೇನ್ ಟೇಸ್ಟೊ (taste ಓ) ಏನೊ! ಹುಂ! ಆದ್ರೆ ಅವಳಂಥವು ಹತ್ತು ಜನ ಸೇರಿದ್ರೂ, ನನ್ನಂಥವಳು ಒಬ್ಬಳಿದ್ರೆ ಸಾಕು. ಅವರಿಲ್ಲ ಅನ್ನಿಸ್ಬಿಡಬಲ್ಲೆ. ಜಂಭಕ್ಕೆ ಹೇಳ್ತೀನಿ ಅಂತ ತಿಳ್ಕೋಬೇಡಿ. ಮೊನ್ನೆ ಯಾರೊ ಅಮೇರಿಕನ್ಸ್ ಬೆಂಗ್ಳೂರ್ಗೆ ಬಂದಿದ್ರು. ನಮ್ಮನ್ನ ಅಂದ್ರೆ, ನನ್ನ ಬಳಗ, ನಮ್ಮ ಮುತ್ತಾತನ ಮರಿಮಗಳನ್ನ ನೋಡಿ, ಮೂಗಿನ್ಮೇಲೆ ಬೆರಳಿಟ್ರಂತೆ. [ತಮ್ಮ ಮೂಗಿನ್ಮೇಲೆ ಅನ್ನಿ. ನನ್ನ (cousin) ಕಸಿನ್ ಮೂಗು ಮುಟ್ಟೋಕೆ ಅವರ್ಗೆ ಧೈರ್ಯ ಎಲ್ಲಿ ಬರ್ಬೇಕು?] "ಅಬ್ಬ! ಈ ಮೆಣಸಿನಕಾಯೀನ ಆಟಂ ಬಾಂಬ್ (atom bomb) ತಯಾರಿಸೋಕೆ ಉಪಯೋಗಿಸಬಹುದೊ ಏನೋ" ಅಂತ ಉದ್ಗಾರ ಎತ್ತಿದ್ರು.

ಈಗ್ಲಾದ್ರೂ ತಿಳೀತಾ; ನಮ್ಮ ಕೀರ್ತಿ ಶಿಖರ ಎಲ್ಲಿಗೆ ಮುಟ್ಟಿದೆ ಅಂತ? 

# ದೀಪಾವಳಿ

( ೧ )

ವರುಷ-ವರುಷಕೆ ಆರತಿ ! ನೋಡು
ದೀಪಾವಳಿಯ
ಸಂಭ್ರಮವು ಮೈದುಂಬಿದೋಲೆಸೆವುದು !
ಮಣ್ಣ ಹಣತೆಯ ಸಾಲುಗಳಲಿ
ಎಣ್ಣೆಯ ಹುಯ್ದು
ಜನವು ರೊಕ್ಕವ ಸೂರೆಗೊಳುತಲಿಹುದು !

( ೨ )

ಮನೆಮನೆಗೆ ಬಂದ ದೀಪಾವಳಿಯ
ಬೆಳ್ಬೆಳಗು
ಮನಮನಕೆ ಇನ್ನು ಹಾ ! ಬರಲೆ ಇಲ್ಲಾ !
ಯುಗಯುಗದ ಘೋರತಮವೊಟ್ಟೈಸಿ
ದಟ್ಟೈಸಿ
ಒಳಜಗದ ಬಗೆಯ ಕಂಗೆಡಿಪುದಲ್ಲಾ !

( ೩ )

ಬಡನೆತ್ತಿ ಮಸೆಗಲ್ಲ ಮೇಲೆಯ್ಯೆಸಿರಿಗತ್ತಿ
ಮಸೆದಾಡಿ ಸ್ವಾರ್ಥವನೆ ಮೊನೆಗೊಳಿಸಿತು !
ತತ್ಕ್ಷಣತ್ಕಾರವದು ತಿಳಿವಿನಾ ಒಸಗೆವರೆ
ಕರುಣೆಯಾ ಇಂಚರವನೆಲ್ಲಳಿಸಿತು !

( ೪ )

ಹಾಲಿಲ್ಲ ಹಸುಗೂಸಿಗಿಲ್ಲೆಣ್ಣೆ ಎಳೆನೆತ್ತಿ
ಗೋದುತಿಹ ಬಡಮಗುವಿಗಿಲ್ಲ ದೀಪಾ !
ಕೂಳಿಲ್ಲ ಹಸಿದವಗೆ ! ಬಿಡುವಿಲ್ಲ
ದುಡಿವವಗೆ !
ಗುಡಿಗುಡಿಲುಗಳಲೆಲ್ಲ ತಮದ ವ್ಯಾಪಾ !

( ೫ )

ಎದೆಎದೆಯ ಹಣತೆಗಳು ಬತ್ತಿ,
ನೇಹವು ತೀರಿ,
ಪ್ರಾಣಜ್ಯೋತಿಯು ಆರಿಹೋಗುತಿಹುದು!
ಅದರ ಗೋರಿಯ ಮೇಲೆ ಐಸಿರಿಯ
ಗುಡಿಯೆದ್ದು
ಕಟು-ಕಠಿಣತೆಯ ಪೂಜೆ ಸಾಗುತಿಹುದು !

( ೬ )

ಕಲ್ಲ ದೇವರ ಮುಂದೆ ಲಕ್ಷ ನಂದಾದೀಪ !
ಬಡ ಜೀವವೆಸಗಿತೇನೆಂಥ ಪಾಪ ?
ಮಣ್ಣ ಹಣತೆಗಳಲ್ಲಿ ಎಣ್ಣೆ ಸುರಿಯುವ
ಭೂಪ,
ನಿನಗಾಯ್ತೆ ಹಾ ! ದಯಾ-ಜ್ಞಾನ-
ಲೋಪ ?

( ೭ )

ವರು-ವರುಷಕಿಂತು ದೀಪಾವಳಿಯು
ಸಾಗುತಿದೆ
ಒಳಜಗದ ತಮವಂತೆ ಬೀಗುತಿಹುದು !
ಮಣ್ಣ ಹಣತೆಯ ದೀಪವುರಿದುರಿದು
ಕೆಲಕಾಲ
ಕೊನೆಜಾವದಲಿ ಬೆಳಕ ನೀಗುತಿಹುದು !

( ೮ )

ಪರಿಶುದ್ಧ–ಸ್ನೇಹ–ಪರಿಪೂರ್ಣ–
ಹೃತ್ಪ್ರಣತಿಯಲಿ
ತ್ಯಾಗನಂದಾದೀಪ ತೊಳಗಿ ಬೆಳಗೆ,
ಬಾಹ್ಯಾಂತರಂಗಳಲಿ ನಿತ್ಯದೀಪಾವಳಿಯ-
ನಾಚಲಿಪ ಮಹಿಮರೆಂದೊಗೆವರಿಳೆಗೆ ?

( ೯ )

ಮನೆಮನೆಗೆ ಬಂದ ದೀಪಾವಳಿಯ
ಬೆಳ್ಬೆಳಗು
ಮನಮನಕೆ ಇನ್ನು ಹಾ ! ಬರಲೆಯಿಲ್ಲಾ !
ಯುಗಯುಗದ ಘೋರತಮವೊಟ್ಟೈಸಿ
ದಟ್ಟೈಸಿ !
ಒಳಜಗದ ಬಗೆಯ ಕಂಗೆಡಿಪುದಲ್ಲಾ !

—ಈಶ್ವರ ಸಣಕಲ್ಲ

## ದೀಪಾವಳಿ

ಪ್ರೊ॥ ವಿ. ಜಿ. ಕುಲಕರ್ಣಿ

ಮತ್ತೊಂದು ದೀಪಾವಳಿ ಬಂದಿತು. ಮನೆಮನೆಗಳಲ್ಲಿ ಹಣತೆಯ ಸಾಲುಗಳು ಬೆಳಗುವವು. ಆದರೆ ನಮ್ಮ ನಾಡಿನ ಜನತೆಯ ಹೃದಯ ಮಂದಿರದಲ್ಲಿ ದೀಪಾವಳಿ ಬೆಳಕು ವಿಶೇಷವಾಗಿ ಕಾಣುವದಿಲ್ಲ; ಕತ್ತಲೆಯೇ ಕವಿದಂತೆ ಕಾಣುತ್ತದೆ. ಕೆಲ ವರ್ಷಗಳ ಹಿಂದೆ ಕಾಣುತ್ತಿದ್ದ ಉತ್ಸಾಹ, ಸಂತಸದ ವಾತಾವರಣ ಈಗಿಲ್ಲದಾಗಿದೆ. ಬೆಲೆ ಏರಿಕೆ ಗಗನವನ್ನು ಮುಟ್ಟಿದೆ; ನೀತಿಧರ್ಮದ ವಿಚಾರಗಳು ನಮ್ಮ ಸಾರ್ವಜನಿಕ ಜೀವನದಿಂದ ದೂರವಾಗಹತ್ತಿವೆ; ಗಲಭೆಗೆ ಪ್ರಚೋದನೆ, ಅಸತ್ಯವಿಧಾನಗಳ ಪ್ರಚಾರ, ವೈಯಕ್ತಿಕ ಟೀಕೆ, ಸ್ವಾರ್ಥಿಕ ದೃಷ್ಟಿ ಇವೇ ನಮ್ಮ ಸಾರ್ವಜನಿಕ ಜೀವನದ ಪ್ರಧಾನ ಚಟುವಟಿಕೆಗಳಾಗಿವೆ.ಎಲ್ಲೆಲ್ಲಿಯೂ ನಿರಾಶಾಮಯವಾದ ವಾತಾವರಣವು ಪಸರಿಸುತಿದೆ.

ಆದರೆ ಇಂಥ ನಿರಾಶೆಯ ಪ್ರವೃತ್ತಿ, ಎಲ್ಲವೂ ವ್ಯರ್ಥವೆಂಬ ಮನೋಭಾವನೆ, ಭವಿಷ್ಯವು ಇನ್ನೂ ಕಷ್ಟಕರವಾಗುವದೆಂಬ ವಿಚಾರ– ಇವೆಲ್ಲವೂ ನಮ್ಮ ರಾಷ್ಟ್ರವನ್ನು ಎಂದರೆ ನಮ್ಮನ್ನೂ ಎಂದೂ ಒಳ್ಳೆಯ ಸ್ಥಿತಿಗೆ ಮುಟ್ಟಿಸಲಾರವು. ಒಂದು ಹಿರಿದಾದ ಆಶೆ, ಮಹತ್ತಾದ ಆದರ್ಶವನ್ನಿಟ್ಟುಕೊಂಡು ಶ್ರಮಿಸಿದರೆ ಮಾತ್ರ ಜೀವನಕ್ಕೆ ಒಂದು ಪ್ರಕಾರದ ಸಾರ್ಥಕತೆ ಬರುವುದೆಂದು ನಾವೆಲ್ಲ ಮನಗಾಣಬೇಕು. ಈ ವರ್ಷದ ದೀಪಾವಳಿ ನಮ್ಮ ಜನತೆಯಲ್ಲಿ– ವಿಶೇಷವಾಗಿ,ಸುಶಿಕ್ಷಿತವೆಂದು ಹೇಳಿಕೊಳ್ಳುವ ವರ್ಗದಲ್ಲಿ ಉತ್ಸಾಹವನ್ನೂ ಆಶೆಯನ್ನೂ ಆದರ್ಶ ಸಾಧನೆಯ ಹಂಬಲವನ್ನೂ ಬೆಳಕಿಸಲಿ.

## ಗುಬ್ಬಿಯ ಗೂಡು

[ಮಕ್ಕಳ ಕವಿತೆ]

ಸಿಮೆಂಟು ಬೇಡ, ಇಟ್ಟಿಗೆ ಬೇಡ
ನಾವೇ ಮನೆಯನು ಕಟ್ಟುವೆವು;
ಋಣ ಋಣ ರೊಕ್ಕವು ಸಿಕ್ಕರೂ ಬೇಡ
ಮಣ್ಣೂ ಉಸುಕೂ ಒಟ್ಟುವೆವು. ೧

ಕಟ್ಟಿಗೆ ಬೇಡ, ಕಬ್ಬಿಣ ಬೇಡ
ಆಳುಗಳೊಬ್ಬರು ಬೇಡಣ್ಣ;
ಕಣ್ಣು ಮುಚ್ಚಿ ಕಣ್ ತೆರೆದರೆ ಸಾಕು
ತಯಾರಾಗುವದು ನೋಡಣ್ಣ. ೨

ಬಡಿಗರು ಕಮ್ಮಾರುಪ್ಪಾರೇತಕೆ ?
ಬಡಬಡ ನಾವೇ ಕಟ್ಟುವೆವು;
ಎಲ್ಲಿ ಹುಡುಕಿದರು ಸಿಗಲಾರದ ಮನೆ–
ಒಂದೇ ಚಣದಲ್ಲಿ ಮುಗಿಸುವೆವು. ೩

ಕಪಾಟು, ಕಿಡಕಿಯು, ಕಿಂಡಿಗಳಿಲ್ಲ
ಸುಣ್ಣ ಬಣ್ಣಗಳ ಬಳಿದಿಲ್ಲ
ಕಳ್ಳರುಗಿಳ್ಳರು ನುಗ್ಗಲು ಸಾಧ್ಯವೆ ?
ಯಾರೂ ಚಿಂತಿಸಬೇಕಿಲ್ಲ. ೪

ಚಿಲಕವು, ಕೊಂಡಿಯು, ಕೀಲಿಗಳೇತಕೆ ?
ಅಗುಳಿಯ ರಗಳೆಯ ತೆಗೆದಿಲ್ಲ;
ಖರ್ಚಿನ ಮಾತೇ ಬಾರದು ಇಲ್ಲಿ
ನಗರ ಸಭೆಯು ಕರ ಹೇರಿಲ್ಲ. ೫

ಸಾಲದ ಚಿಂತೆಯು, ಆಳಿನ ಗೋಳು
ಆ, ಈ ಕೊರತೆಗೆ ಎಲ್ಲಿ ಕೊನೆ?
ಅಪ್ಪಟ ಮಳಲಲಿ ಕಟ್ಟಿದೆವಿದನು
ಬಾಡಿಗೆಯಿಲ್ಲದ ಸ್ವಂತ ಮನೆ ೬

—ಚೆನ್ನವೀರ ಕಣವಿ



# ದೀಪಾವಳಿ ನಡೆದು ಬಂದ ದಾರಿ

ಡಾ|| ವಾ. ದ. ಬೇಂದ್ರೆ

ದೀಪಾವಳಿ, ಸಾರ್ವತ್ರಿಕವಾಗಿ ಆಚರಿಸಲ್ಪಡುವ ಒಂದು ಮಹತ್ತ್ವದ ಹಬ್ಬ. ದೀಪಾವಳಿಯಲ್ಲಿ ದೀಪಕ್ಕೆ- ಜ್ಯೋತಿಗೆ- ಬೆಳಕಿಗೆ ಪ್ರಾಧಾನ್ಯ. 'ತಮಸೋ ಮಾ ಜ್ಯೋತಿರ್ಗಮಯ' ಎಂಬ ಪ್ರಾರ್ಥನೆ, ಭಾರತೀಯರ ಬೆಳಕಿನ ಉಪಾಸನೆಯ ಮಂತ್ರ. ವೇದಕಾಲದಿಂದಲೂ ನಾವು ಸೂರ್ಯ, ಚಂದ್ರ, ಅಗ್ನಿ ಈ ಬೆಳಕುಗಳ ಆರಾಧನೆಯನ್ನು ಮಾಡುತ್ತ ಬಂದಿದ್ದೇವೆ. ಈ ಆರಾಧನೆ ಪಾಪವಿಮೋಚನೆ ಹಾಗೂ ಆತ್ಮ ಪವಿತ್ರೀಕರಣಕ್ಕೆ ಸಾಧನ.

ವೇದೋಪನಿಷತ್ ಕಾಲದಲ್ಲಿ ಪ್ರಚಾರದಲ್ಲಿದ್ದ ಅನೇಕ ಗೃಹ್ಯ ಸಂಸ್ಕಾರಗಳು ರೂಪಾಂತರಗೊಳ್ಳುತ್ತ ವಿವಿಧ ಹಬ್ಬಗಳಾಗಿ ರೂಢಿಗೆ ಬಂದಿವೆ. ಆ ಕಾಲದಲ್ಲಿ ಪ್ರತಿಯೊಬ್ಬ ಗೃಹಸ್ಥನು ಪ್ರತಿ ವರ್ಷ ಏಳು ಪಾಕ ಯಜ್ಞಗಳನ್ನು ಆಚರಿಸುತ್ತಿದ್ದನು. ದಾನ-ಧರ್ಮ, ಪದೀಪ್ತ ಅಗ್ನಿಯಲ್ಲಿ ಆಹುತಿ, ಸತ್ಪಾತ್ರ ವಿದ್ವಾಂಸರಿಗೆ ಅನ್ನ-ವಸ್ತ್ರಾದಿಗಳ ದಾನ ಇವು ಪಾಕ ಯಜ್ಞದಲ್ಲಿ ಸೇರಿಕೊಂಡಂತಹ ಅಂಶಗಳಾಗಿರುತ್ತಿದ್ದವು. ಅಷ್ಟಕ, ಪಾರ್ವಣ, ಶ್ರಾದ್ಧ, ಶ್ರಾವಣಿ, ಆಗ್ರಯಣ, ಚೈತ್ರಿ ಮತ್ತು ಆಶ್ವಯುಜಿ ಈ ಏಳು ಪಾಕ ಯಜ್ಞಗಳನ್ನು ಗೃಹಸ್ಥನು ವರ್ಷದ ಬೇರೆ ಬೇರೆ ತಿಂಗಳಲ್ಲಿ ಆಚರಿಸುತ್ತಿದ್ದನು. ಪಾರ್ವಣ, ಆಶ್ವಯುಜಿ ಮತ್ತು ಆಗ್ರಯಣ ಈ ಮೂರು ಪಾಕ ಯಜ್ಞಗಳ ಏಕೀಕರಣ ಹಾಗೂ ರೂಪಾಂತರ ದೀಪಾವಳಿ ಮಹೋತ್ಸವದಲ್ಲಿ ಆದಂತಿದೆ.

ಪೌರಾಣಿಕ ಕಾಲದಲ್ಲಿ ಶಿವ ಮತ್ತು ವಿಷ್ಣುವಿನ ಮಹತ್ತ್ವ ಹೆಚ್ಚುತ್ತ ಹೋದಂತೆ, ಪೂರ್ವದ ವಿಧಿಗಳ ಹಾಗೂ ಹಬ್ಬಗಳ ಸಂಬಂಧವನ್ನು ಆ ಆ ದೇವತೆಗಳಿಗೆ ಅನ್ವಯಿಸುವ ರೂಢಿ ಪ್ರಚಾರಕ್ಕೆ ಬಂದಿತು. ದೀಪಾವಳಿಯ ಸಂಬಂಧವನ್ನು ವಿಷ್ಣುವಿನ ಅವತಾರವಾದ ಶ್ರೀ ಕೃಷ್ಣನಿಗೆ ಹೊಂದಿಸುತ್ತಾರೆ.

ಆಶ್ವಿನ ಪೌರ್ಣಿಮೆಯಿಂದ ಕಾರ್ತಿಕ ಪೌರ್ಣಿಮೆಯ ವರೆಗೆ ದೀಪದ ಪೂಜೆ ಮಾಡುವ ಪರಿಪಾಠವಿತ್ತು. ಅದರಲ್ಲಿಯೂ ಆಶ್ವಿನ ವದ್ಯ ತ್ರಯೋದಶಿಯಿಂದ ಕಾರ್ತಿಕ ಶುಕ್ಲ ದ್ವಿತೀಯಾ ವರೆಗೆ ಆಚರಿಸಲ್ಪಡುವ ದೀಪೋತ್ಸವವೇ ದೀಪಾವಳಿ. ಧನತ್ರಯೋದಶಿ, ನರಕಚತುರ್ದಶಿ ಹಾಗೂ ಲಕ್ಷ್ಮೀ ಪೂಜನ ಇವು ದೀಪಾವಳಿಯ ಅತೀ ಮಹತ್ತ್ವದ ದಿವಸಗಳು. ವರ್ತಕರು ಲಕ್ಷ್ಮೀ ಪೂಜನ ದಿವಸವನ್ನು ಅತಿ ಭಕ್ತಿಯಿಂದ ಆಚರಿಸುತ್ತಾರೆ. ಈ ಮೂರು ದಿವಸ

ಗಳೊಡನೆ ಬಲಿಪ್ರತಿಪದಾ ಹಾಗೂ ಯಮ ದ್ವಿತೀಯಾ ಸೇರಿಸುತ್ತಾರೆ. ಧನತ್ರಯೋದಶಿ, ನರಕ ಚತುರ್ದಶಿ, ಲಕ್ಷ್ಮೀಪೂಜನ ಬಲಿಪ್ರತಿಪದಾ, ಭಾವೂಬಿದಿಗಿ, ಅಕ್ಕನ ತದಿಗಿ ಹಾಗೂ ಅಮ್ಮನ ಚವತಿಯ ವರೆಗೆ ದೀಪಾವಳಿಯ ಹಬ್ಬದ ವಿಸ್ತಾರ ವಿಲಾಸವೂ ಉಂಟು.

## ಧನತ್ರಯೋದಶಿ (ಗೋಧನ ತ್ರಯೋದಶಿ)

ಯಮನೆಂದರೆ ಸೂರ್ಯಪುತ್ರ. ಸೂರ್ಯೋದಯ–ಸೂರ್ಯಾಸ್ತದೊಂದಿಗೆ ಸಕಲ ಪ್ರಾಣಿಮಾತ್ರದ ಆಯುಷ್ಯ ಕಡಿಮೆಯಾಗುತ್ತದೆ. ಆಯುಷ್ಯ ಮುಗಿದೊಡನೆ ಯಮನು ತನ್ನ ದೂತರಿಗೆ, ಆ ಪ್ರಾಣಿ ಮಾತ್ರವನ್ನು ಯಮ ಸದನಕ್ಕೆ ತರಲು ಆಜ್ಞೆಯನ್ನು ವಿಧಿಸುತ್ತಾನೆ. ಇಂತಹ ಯಮನು ಒಂದು ದಿವಸ ತನ್ನ ದೂತನಿಗೆ 'ನೀನು ಮಾಡುವ ಕಾರ್ಯದಲ್ಲಿ ನಿನಗೆ ಎಂದಾದರೂ ದಯೆ ಉಂಟಾಗಿದೆಯೇ ? ಎಂದು ಕೇಳಿದನು. ಅದಕ್ಕೆ ದೂತನು ಕೊಟ್ಟ ಉತ್ತರ ಈ ರೀತಿಯಾಗಿದೆ– "ಹಿಂದೊಮ್ಮೆ ಹಂಸರಾಜನು ಹೈಮರಾಜನ ಕಡೆಗೆ ವಿಶ್ರಾಂತಿಗೆ ಹೋಗಿದ್ದನು. ಹೈಮರಾಜನಿಗೆ ಪುತ್ರನಾಗಿದ್ದರಿಂದ, ಆ ಸಂತಸದಲ್ಲಿ ಅವನು ಹಂಸರಾಜನ ಕ್ಷೇಮ ಸಮಾಚಾರವನ್ನು ಚೆನ್ನಾಗಿಯೇ ನೋಡಿಕೊಂಡನು. ಷಷ್ಟೀ (ಶಿಟಗ್ಯೆವ್ವಾ) ದೇವಿಯು ಸ್ತ್ರೀ ರೂಪವನ್ನು ಧರಿಸಿ "ಹೈಮರಾಜನೇ, ನಿನ್ನ ಈ ಮಗನು ಅವನ ವಿವಾಹದ ನಾಲ್ಕನೆಯ ದಿವಸ ಸರ್ಪದಂಶದಿಂದ ಮಡಿಯುವನು" ಎಂದು ನುಡಿದಳು. ಹೈಮರಾಜನು ದುಃಖದಲ್ಲಿ ಮುಳುಗಿದನು, ಅಪಮೃತ್ಯು ಪರಿಹಾರಕ್ಕಾಗಿ ಉಪಾಯಗಳನ್ನು ಮಾಡಿಸಿದನು, ಹಂಸರಾಜನಿಗೆ ತನ್ನ ಅಳಲನ್ನು ಹೇಳಿಕೊಂಡನು. ಯಮುನಾ ನದಿಯ ಹತ್ತಿರ ರಾಜಕುಮಾರನು ಇರುವ ಮಹಲನ್ನು ಕಟ್ಟಿಸಿದ್ದಾಯಿತು. ರಾಜಕುಮಾರನು ಪ್ರಾಪ್ತ ವಯಸ್ಕನಾದಾಗ ಅವನ ವಿವಾಹವೂ ಸುಂದರ ರಾಜ್ಯಕನ್ಯೆಯೊಡನೆ ಆಯಿತು. ಎಲ್ಲರೂ ಆನಂದದಲ್ಲಿರುವಾಗ ರಾಜಕುಮಾರನಿಗೆ ಸರ್ಪದಂಶದಿಂದ ಮರಣ ಬಂತು. ಆ ರಾಜಕುಮಾರನನ್ನು ತರುವಾಗ ನನ್ನಲ್ಲಿ ದಯೆ ಮೂಡಿತು." ಇಂತಹ ಅಪಮೃತ್ಯುವಿನ ಪ್ರಸಂಗ ಯಾರ ಮೇಲೆಯೂ ಬರದಂತೆ ಉಪಕಾರ ಮಾಡಬೇಕಾಗಿ ದೂತನು ಯಮನಲ್ಲಿ ಕೇಳಿಕೊಂಡನು. ಆಗ ಯಮನು "ಆಶ್ವಿನ ತ್ರಯೋದಶಿಯಿಂದ ಐದು ದಿವಸಗಳವರೆಗೆ ಪ್ರತಿನಿತ್ಯ ಪ್ರಾತಃಕಾಲ ಯಾವನು ಎಲ್ಲೆಡೆಗೆ ದೀಪಗಳನ್ನು ಹಚ್ಚುವನೋ ಅವನಿಗೆ ಅಪಮೃತ್ಯು ಬರಲಾರದು" ಎಂದು ಆಶೀರ್ವದಿಸಿದನು.

ಇದೇ ಕಾರಣದಿಂದ ಧನತ್ರಯೋದಶಿ ದಿವಸ ಪ್ರತಿಯೊಬ್ಬ ಪುರುಷನು ದಕ್ಷಿಣಕ್ಕೆ ದೀಪವನ್ನು ಬೆಳಗಿ ನಮಸ್ಕರಿಸುವ ರೂಢಿ ಬಂದಿದೆ.

## ನರಕ ಚತುರ್ದಶಿ

ಪ್ರಾಗ್‌ಜ್ಯೋತಿಷಪುರದಲ್ಲಿ ನರಕಾಸುರನು ರಾಜ್ಯವಾಳುತ್ತಿದ್ದನು. ಇವನು ಇಂದ್ರನ ಛತ್ರ, ಅದಿತಿಯ ಕುಂಡಲ ಮತ್ತು ಅಮರ ಪರ್ವತದ ಮೇಲಿನ ಮಣಿ ಪರ್ವವನ್ನು ಅಪಹರಿಸಿದನು. ದೇವ, ಮಾನವರನ್ನು ಅವನು ಪೀಡಿಸತೊಡಗಿದನು. ತನ್ನ ರಾಜಧಾನಿಯ ಸುತ್ತಲೂ ಪರ್ವತ ಮತ್ತು ಶಸ್ತ್ರಗಳ ಕೋಟೆ ನಿಲ್ಲಿಸಿದನು. ಹದಿನಾರು ಸಾವಿರ ಉಪವರ ಕನ್ಯೆಯರನ್ನು ಬಂಧಿಸಿದನು. ಅವರೊಡನೆ ವಿವಾಹ ಮಾಡಿಕೊಳ್ಳುವ ವಿಚಾರವೂ ಅವನದಿತ್ತು. ಈ ವಿಚಾರವು ಶ್ರೀ ಕೃಷ್ಣನಿಗೆ ತಿಳಿದಾಗ ಅವನು ಸತ್ಯಭಾಮೆಯೊಂದಿಗೆ ಕೂಡಿಕೊಂಡು ನರಕಾಸುರನ ಮೇಲೆ ದಾಳಿಯನ್ನು ಮಾಡಿ ಅವನನ್ನು ಸಂಹರಿಸಿದನು. ಅವನ ರಕ್ತದ ತಿಲಕವನ್ನಿಟ್ಟುಕೊಂಡು ಶ್ರೀ ಕೃಷ್ಣನು ಮರಳಿದನು. ನರಕಾಸುರನನ್ನು ಸಂಹರಿಸಿದ ಉಷಃಕಾಲವೇ ನರಕಚತುರ್ದಶಿ. ಈ ದಿವಸ ಶ್ರೀ ಕೃಷ್ಣನಿಗೆ ನಂದರು ಮಂಗಲಸ್ನಾನವನ್ನು ಮಾಡಿಸಿದಂತೆ ಎಲ್ಲರೂ ನರಕ ಚತುರ್ದಶಿಯ ದಿವಸ ಉಷಃಕಾಲಕ್ಕೆ ಮಂಗಲ ಸ್ನಾನವನ್ನು ಮಾಡುವ ಪದ್ಧತಿ ನಡೆದು ಬಂದಿದೆ.

## ಲಕ್ಷ್ಮೀಪೂಜನ

ಬಲಿಯು ತನ್ನ ಪರಾಕ್ರಮದ ದುರಹಂಕಾರದಿಂದ ದೇವಾದಿಗಳನ್ನು ಕಾರಾಗೃಹದಲ್ಲಿ ಬಂಧಿಸಿದನು. ಲಕ್ಷ್ಮಿಗೂ ಬಲಿಯ ಬಂಧನದಲ್ಲಿ ಇರಬೇಕಾಗಿ ಬಂತು. ಆಗ ವಿಷ್ಣು ವಾಮನನ ಅವತಾರವನ್ನು ತಾಳಿ, ಬಲಿಯ ಕಡೆಗೆ ಬಂದು, ತ್ರಿಪಾದ ಭೂಮಿಯ ದಾನವನ್ನು ಬೇಡಿ ಅವನನ್ನು ಪಾತಾಳಕ್ಕೆ ತಳ್ಳಿದನು. ಇದರಿಂದ ಲಕ್ಷ್ಮಿ ಹಾಗೂ ದೇವತೆಗಳ ಬಂಧ ವಿಮೋಚನೆ ಆಯಿತು. ಎಲ್ಲರಿಗೂ ಆನಂದವಾಯಿತು. ಲಕ್ಷ್ಮಿಯು ಎಲ್ಲರ ಮನೆಯಲ್ಲಿ ವಾಸಿಸಲಿ ಎಂಬ ಅರ್ಥದಿಂದ ಎಲ್ಲರೂ ಈ ದಿವಸ ಲಕ್ಷ್ಮಿಯನ್ನು ಭಕ್ತಿಯಿಂದ ಪೂಜಿಸುವ ಪರಿಪಾಠವಿದೆ.

## ಬಲಿಪ್ರತಿಪದಾ

ಈ ದಿವಸ ಎಲ್ಲರೂ ಆನಂದದಿಂದ ಆಟ, ವಿನೋದಗಳಲ್ಲಿ ಕಾಲಕಳೆಯುತ್ತಾರೆ.

## ಯಮದ್ವಿತೀಯಾ (ಭಾವೂಬಿದಿಗೆ)

ಯಮಾ, ಯಮಿ ಇವರ ಭೆಟ್ಟಿಯಾದ ದಿವಸವಿದು. ಯಮನು ಪ್ರತಿನಿತ್ಯದ ತನ್ನ ಕಾರ್ಯದಲ್ಲಿ ಸಹೋದರಿಯಾದ ಯಮಿಯನ್ನು ಕಂಡಿರಲಿಲ್ಲ. ಇಂದು ಭೆಟ್ಟಿಯಾದಾಗ ಯಮಿಗೆ ಆನಂದವಾಗಿ ಅವಳು ಯಮನಿಗೆ ಆರತಿಯನ್ನು ಬೆಳಗಿದಳು. 'ಸಹೋದರಿಯು ಸಹೋದರನಿಗೆ ಆರತಿಯನ್ನು ಬೆಳಗುವುದರಿಂದ ಅವಳು ಪಾಪ ಮುಕ್ತಳಾಗುತ್ತಾಳೆ' ಎಂದು ಯಮನು ನುಡಿದನು.

ಈ ದಿವಸ ಸಹೋದರಿಯರು ಸಹೋದರರನ್ನು ಮನೆಗೆ ಕರೆದು, ಆರತಿ ಬೆಳಗಿ, ರುಚಿಯಾದ ಭೋಜನವನ್ನು ಬಡಿಸುವ

ಪದ್ಧತಿ ಇದೆ. ಸಹೋದರರೂ ತಮ್ಮ ಪ್ರೀತಿಯ ದ್ಯೋತಕವೆಂದು ಸಹೋದರಿಯರಿಗೆ ಕಾಣಿಕೆ ಸಲ್ಲಿಸುವುದುಂಟು.

**ಅಕ್ಕನ ತದಿಗೆ**

ಈ ದಿವಸ ಅಕ್ಕನಿಗೆ, ಅಣ್ಣ–ತಮ್ಮಂದಿರು ತಮ್ಮ ಮನೆಗೆ ಕರೆದು ಆನಂದದಲ್ಲಿ ಕಾಲ ಕಳೆಯುತ್ತಾರೆ.

**ಅಮ್ಮನ ಚವತಿ**

ಅಜ್ಜಿ, ತನ್ನ ಮಕ್ಕಳು, ಮೊಮ್ಮಕ್ಕಳೊಂದಿಗೆ ಕೂಡಿಕೊಂಡು ಆರತಿಯನ್ನು ಮಾಡಿಸಿಕೊಂಡು ಎಲ್ಲರನ್ನೂ ಆಶೀರ್ವದಿಸುತ್ತಾಳೆ. 'ಇಂದೇನು ಅಮ್ಮನ ಚವತಿ?' ಎಂಬ ವಿನೋದಕ್ಕೂ ಇದು ಎಡೆಮಾಡಿದೆ. ಇದು ಕೌಟುಂಬಿಕ ರೂಢಿಯ ಹಬ್ಬ.

ಈ ರೀತಿ ದೀಪಾವಳಿ ಮಹೋತ್ಸವವು ಸ್ನೇಹ, ಆದರ, ಆನಂದದ ಪ್ರತೀಕವಾಗಿ ನಡೆದು ಬಂದಿದೆ. ರಂಗೋಲಿಯ ಸ್ಪರ್ಧೆ, ಕಾವ್ಯಗಾಯನ ಸ್ಪರ್ಧೆ, ವಿವಿಧ ಆಟಗಳನ್ನು ಏರ್ಪಡಿಸಿ ಬಾಲಕರಲ್ಲಿಯ ಗುಣ ಸಂವರ್ಧನೆಯನ್ನೂ ಮಾಡುವ ಕಾರ್ಯವೂ ದೀಪಾವಳಿ ಮಹೋತ್ಸವದ ಅಂಗವಾಗಿ ಇತ್ತೀಚೆ ಸೇರಿಕೊಂಡಿತು.

ಈಗೀಗ, ದೀಪಾವಳಿ ಮಹೋತ್ಸವದ ಹಿನ್ನೆಲೆಯಲ್ಲಿರುವ ಧಾರ್ಮಿಕ ಭಾವನೆ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳ ಉತ್ಸಾಹ ಕಡಿಮೆಯಾಗುತ್ತ ನಡೆದಿದೆ. ಈ ಹಬ್ಬದ ನಿಮಿತ್ತವಾಗಿ ಬಟ್ಟೆ, ವಿವಿಧ ವಸ್ತುಗಳನ್ನು ಕೊಳ್ಳುವುದು ಇತ್ಯಾದಿದುಂದು ವೆಚ್ಚದತ್ತ ಜನರ ಮನಸ್ಸು ಹರಿಯುತ್ತಿದೆ.

ಹಿಂದಿನ ಕಾಲದಲ್ಲಿ ಯಾವುದೇ ಹಬ್ಬ, ಜನರನ್ನು ಅಂತರ್ಮುಖರನ್ನಾಗಿ ಮಾಡಿ ಈಶ ಚಿಂತನೆಯತ್ತ ಎಳೆಯುತ್ತಿತ್ತು. ಈ ಕಾಲದಲ್ಲಿ ಜನರನ್ನು ಬಹಿರ್ಮುಖಗೊಳಿಸುವ ಎಳೆತ–ಸೆಳೆತಗಳು ಹೆಚ್ಚಾಗುತ್ತಿವೆ.

**ಬೃಹದಾರಣ್ಯಕೋಪನಿಷತ್ತಿನಲ್ಲಿ—**

ಯಾಜ್ಞವಲ್ಕ್ಯ ಮತ್ತು ಜನಕರ ಒಂದು ಸಂವಾದ ಬರುತ್ತದೆ.

ಜನಕ:– ನಮಗೆ ಬೆಳಕು ಎಲ್ಲಿಂದ ಬರುತ್ತದೆ?

ಯಾಜ್ಞವಲ್ಕ್ಯ:– ಸೂರ್ಯನಿಂದ.

ಜನಕ:– ಸೂರ್ಯನಿಲ್ಲದಾಗ?

ಯಾಜ್ಞವಲ್ಕ್ಯ:- ಚಂದ್ರನಿಂದ.

ಜನಕ:– ಇಬ್ಬರೂ ಇಲ್ಲದಾಗ?

ಯಾಜ್ಞವಲ್ಕ್ಯ:– ಅಗ್ನಿಯಿಂದ.

ಜನಕ:– ಮೂವರೂ ಇಲ್ಲದಾಗ?

ಯಾಜ್ಞವಲ್ಕ್ಯ:– ವಾಕ್ ಶಕ್ತಿಯಿಂದ.

ಜನಕ:– ವಾಕ್ ಶಕ್ತಿ ಇಲ್ಲದಾಗ?

ಯಾಜ್ಞವಲ್ಕ್ಯ:– ಸ್ವಾತ್ಮಜ್ಯೋತಿಯಿಂದ.

ಸ್ವಾತ್ಮಜ್ಯೋತಿ ಎಂಬುದೇ ದೀಪ. ಅದರ ದರ್ಶನವಾದ ದಿವಸವೇ ದೀಪೋತ್ಸವ– ದೀಪಾವಳಿ. ಸ್ವಾತ್ಮಜ್ಯೋತಿ– ಅಭಯಜ್ಯೋತಿ. ಅದು ಮಾರ್ಗದರ್ಶಕ

ಗುರು. ಆ ಗುರುವನ್ನು ಕಾಣುವ ಅಂತ-ರ್ಮುಖತೆ ನಮ್ಮಲ್ಲಿ ಉದಿಸಲಿ ಎಂಬುದೇ ಪ್ರತಿಯೊಬ್ಬನ ಆಶೆಯಾಗಿರಬೇಕು. ಈ ಆಶೆಗೆ 'ತಮಸೋಮಾ ಜ್ಯೋತಿರ್ಗಮಯ' ಎಂಬುದೇ ಇಂದಿಗೂ ಮಂತ್ರ.

ಗೋತ್ರಿರಾತ್ರಿ ವ್ರತ:— ಗೋ ಎಂಬ ಶಬ್ದಕ್ಕೆ ಪ್ರಕಾಶ ಕಿರಣ, ನಕ್ಷತ್ರ, ಚಂದ್ರ, ಆಕಳು ಇತ್ಯಾದಿ ೨೯ ಅರ್ಥಗಳನ್ನು ಆಪಟೆ ಕೋಶದವರು ಕೊಟ್ಟಿದ್ದಾರೆ. ಕಿಟೆಲ್ ಕೋಶದಲ್ಲಿಯೂ ೨೧ ಅರ್ಥಗಳು ಇವೆ.

ಧನತ್ರಯೋದಶಿ, ನರಕ-ಚತುರ್ದಶಿ ಮತ್ತು ಲಕ್ಷ್ಮೀಪೂಜನ ಇವು ಗೋತ್ರಿ ರಾತ್ರಿ ವ್ರತದಲ್ಲಿ ಸಮಾವೇಶಗೊಳ್ಳುತ್ತವೆ. ಆಕಳು ಎಂದರೆ ದೇವರು ಎಂಬ ಪೂಜ್ಯ ಭಾವನೆ ಭಾರತೀಯರಲ್ಲಿದೆ. ಆದರ ಹೊಟ್ಟೆಯಲ್ಲಿ ಮೂವತ್ತುಮೂರು ಕೋಟಿ ದೇವತೆಗಳು ಇರುತ್ತವೆ ಎಂಬ ಶ್ರದ್ಧೆ ಇದೆ. ಗೋ-ಗೃಹಸ್ಥನ ಮನೆಗೆ ಹೈನವನ್ನು, ಕೃಷೀವಲರಿಗೆ ಹೋರಿಯನ್ನು ಕೊಟ್ಟು, ಮಾನವನ ಐಹಿಕ ಹಾಗೂ ಪಾರಮಾರ್ಥಿಕ ಜೀವನಕ್ಕೆ ಸಹಾಯಕವಾಗಿದೆ.

ಶ್ರೀ ಕೃಷ್ಣ-ಗೋಪಾಲಕ ಗೋವಿಂದ. ಇವನು ಯುಗಾವತಾರಿ. ನರಕಚತುರ್ದಶಿಯ ನರಕಾಸುರವಧವನ್ನು ಇವನೇ ಮಾಡಿದನು.

ಗೋ ಎಂಬುದು ದೇವರು ಹಾಗೂ ಧನ. ದುಡ್ಡೇ ದೇವರಲ್ಲ; ದುಡ್ಡು ದೇವರದು ಎಂಬ ಭಾವನೆ ನಮ್ಮಲ್ಲಿ ಸ್ಥಿರವಾಗಬೇಕು.

ದೀಪಾವಳಿ ಇದು ಗೊ-ವೀನ ಹಬ್ಬ, ಎಂದರೆ ದೀಪದ ಪ್ರಕಾಶದ ಹಬ್ಬ. ದೀಪವನ್ನು ಶ್ರದ್ಧಾ ತೈಲದಿಂದ ಯಾವಾಗಲೂ ಜಾಜ್ವಲ್ಯವಾಗಿ ಕಾಯ್ದುಕೊಳ್ಳಬೇಕು. ಈ ಹಬ್ಬಕ್ಕೆ, ವ್ರತಕ್ಕೆ ದೈವತ-ಶ್ರೀಕೃಷ್ಣ.

ಈ ದೀಪ ಈ ಬೆಳಕು ಈ ಜ್ಯೋತಿ ಈ ಮಿಂಚು
ಮನೆಬೆಳಗಿ ಮನಬೆಳಗಿ ನಾಡಬೆಳಕಾಗಲಿ. —ಸಾಧಕ



# ಮಾಧವಿ

ಮಾಸಿಕ ರಸಗಂಗೆ

ವಿಚಾರ * ವಿನೋದ * ವಿಜ್ಞಾನ

ಆಗಸ್ಟ ೧೯೬೭

*

ಸಂಚಾಲಕರು :
ವ್ಹಿ. ಆರ್. ಪಾಟೀಲ. ಬಿ.ಎ., ಎಲ್‌ಎಲ್.ಬಿ.

*

ವ್ಯವಸ್ಥಾಪಕ ಸಂಪಾದಕರು :
ಕೃಷ್ಣಮೂರ್ತಿ, ಎಂ.ಎ.

*

ಉಪಸಂಪಾದಕರು :
ಕುವಲಯ, ಎಂ.ಎ.

*

ಉತ್ಪಾದನೆ :
ಕೃಷ್ಣ ಪೋತದಾರ

*

ಮುದ್ರಣ :
ರವೀಂದ್ರ ಮುದ್ರಣಾಲಯ, ಧಾರವಾಡ

*

ಚಂದಾವಿವರ :
ದ್ವಿವಾರ್ಷಿಕ : ರೂ. ೧೫ ೦೦
ವಾರ್ಷಿಕ : ರೂ. ೮-೦೦
ಅರ್ಧವಾರ್ಷಿಕ : ರೂ. ೪-೫೦
ಬಿಡಿ ಸಂಚಿಕೆ : ರೂ. ೦-೭೫

*

ಪ್ರತಿ ತಿಂಗಳು ೧ನೇ ತಾರೀಖು ಪ್ರಕಟನೆ

ವಿಶ್ವದರ್ಶನಕ್ಕೆ ಎಷ್ಟೋ ದೂರದರ್ಶಕಗಳಿದ್ದರೂ ಅವುಗಳ ಒಂದೊಂದರಲ್ಲಿ ಒಂದೊಂದು ಕೊರತೆ ಇಲ್ಲದಿಲ್ಲ. ಸಮಗ್ರ ವಿಶ್ವದರ್ಶನದ ಆಳ-ವಿಸ್ತಾರಗಳ ಅರಿವು ಜ್ಞಾನ ಪರಿಪೂರ್ಣತೆಗೆ ಅವಶ್ಯವೆಂಬ ದೃಷ್ಟಿಯಲ್ಲಿ ವಿಶ್ವಾಸವಿದ್ದಾಗ ಅಂತಹ ದರ್ಶನಕ್ಕೆ ಒಂದು ಸಾಧನೆ ಬೇಡವೆ? 'ಮಾಧವಿ'ಯು ಈ ಸಾಧನೆಯ ಮಾರ್ಗದಲ್ಲಿ ಶ್ರದ್ಧೆಯುಳ್ಳವರಿಗೆ ಸಹಕರಿಸಬೇಕೆಂಬ ಮಹದಾಸೆಯಿಂದ 'ಮಾಸಿಕ ರಸಗಂಗೆ'ಯಾಗಿ ರೂಪ ತಾಳಿದೆ. ನಮ್ಮ 'ರಸ ಗಂಗೆ' ಮನೆಮನೆಗೂ ಹರಿದು ಕನ್ನಡಿಗರ ಮನರಂಜನೆಗೂ, ಮಿಗಿಲಾಗಿ ಬುದ್ಧಿವಿಕಾಸಕ್ಕೂ ನೆರವಾದರೆ 'ಮಾಧವಿ'ಯ ಹುಟ್ಟು ಸಾರ್ಥಕವಾದೀತು. ವಿದ್ವಾಂಸರ ಹಾಗೂ ರಸಿಕ ಓದುಗರ ನೆರವು ನಮಗೆ ರಕ್ಷೆಯಾಗಿರುವಾಗ ನಮ್ಮ ಧ್ಯೇಯ ಫಲಿಸುವುದೆಂಬ ನಂಬಿಕೆ ನಮಗಿದೆ.

ಪತ್ರಿಕಾರಂಗದಲ್ಲಿ "ಮಾಧವಿ ಕೇವಲ ಇನ್ನೊಂದು ಮಾಸಿಕ" ಎಂದೆನಿಸಿಕೊಳ್ಳದೆ, "ಇದು ಒಂದು ವಿಶಿಷ್ಟ ಮಾಸಿಕ" ಎಂಬ ವೈಶಿಷ್ಟ್ಯ ಪಡೆದಾಗ ನಮ್ಮ ಶ್ರಮ ಸಾರ್ಥಕ.

* * *

# ವಿ ಷ ಯ ಸೂ ಚಿ

★

## ಕನ್ನಡಿಗರ ಕರ್ತವ್ಯ

"ಗ್ರಂಥಕಾರನಾಗಿ ತೊಡಗಿದಂದಿನಿಂದ ಸಾಲದಲ್ಲಿಯೇ ಬೆಳೆದೆನು; ಸಾಲಗಳನ್ನು ಕಣ್ಣೀರ ಕಷ್ಟಗಳಿಂದಲೇ ತುಂಬಿಸಿದವನು. ಆದುದರಿಂದಲೇ ಸಾಲವನ್ನು ಪಡೆಯದೇ ನನ್ನ ಕೆಲಸ ಮುಂದುವರಿಯುವಂತಿದ್ದರೆ ಮನಸ್ಸಿನ ಕೊರಗು ಕಡಿಮೆಯಾಗುತ್ತಿತ್ತು; ಆ ಧೈರ್ಯವನ್ನು ಕನ್ನಡದ ಜನರು ಪುಸ್ತಕ ಕೊಳ್ಳುವದರಿಂದಲೆ ತೋರಿಸಬೇಕೇ ಹೊರತು, ಬರಿದಾದ ಪ್ರಶಂಶೆಯಿಂದ, ಬೆನ್ನು ಚಪ್ಪರಿಸುವದರಿಂದ ಏನಾದೀತು ?

ಸರಕಾರವೇ ಹಣಕೊಟ್ಟೀತು ಅನ್ನೋಣ. ನನ್ನ ಕಷ್ಟ ಅದರಿಂದ ಪರಿಹಾರ ಆಯಿತು ಎಂದೂ ತಿಳಿಯೋಣ. ಇದು ನನ್ನ ಮಟ್ಟಿಗಾಯಿತು. ಇಂಥ ಗ್ರಂಥಗಳು ವಿವಿಧ ರೂಪಗಳಲ್ಲಿ ದಾನ ಧರ್ಮದಿಂದಲೇ ಪ್ರಕಟವಾಗ ಬೇಕೆಂದಾದರೆ ನಮ್ಮಂಥ ದರಿದ್ರದಾಶೆ ಇನ್ನೊಂದಿಲ್ಲ – ಎಂದು ನಾನು ತಿಳಿಯುತ್ತೇನೆ. ಬರಹಗಾರರು ಬೇಡದೇ ಬದುಕಬೇಕು – ಪ್ರಕಾಶಕರು ಸ್ವಶಕ್ತಿಯಿಂದಲೇ ಬದುಕಬೇಕು – ಇಂಥ ಸ್ಥಿತಿ ಉಂಟಾಗುವದು ಓದುಗರಿಂದ! ಕೊಳ್ಳಬಲ್ಲ ಸಂಸ್ಥೆಗಳು ಕೊಳ್ಳುವದರಿಂದ!! ಕೊಳ್ಳಬಲ್ಲ ವ್ಯಕ್ತಿಗಳು ಕೊಂಡು ಓದುವದರಿಂದ, ಸರಕಾರ ಕೊಟ್ಟನೆಂದಿಗೆ ನಾನು ಋಣಿಯಾಗಿದ್ದೆನಾದರೂ ಅಂಥ ಸ್ಥಿತಿಯನ್ನು ನಾನು ಸಂತೋಷದಿಂದ ಸ್ವೀಕರಿಸುತ್ತಲಿಲ್ಲ! ಸ್ವೀಕರಿಸಿದ್ದರೆ ಕೇವಲ ಅನಿವಾರ್ಯದಿಂದ. ಕನ್ನಡನಾಡು ತನ್ನ ಈ ಸ್ಥಿತಿಯನ್ನು ಮೀರಿಸಿ ತನ್ನ ಕಾಲಮೇಲೆ ನಿಲ್ಲಲು ಕಲಿತರೆ ಅಲ್ಲಿ ಬಾಳಿ ಬದುಕುವ ಪ್ರಜೆಗೆ ಒಂದು ಹೆಮ್ಮೆ ಇದೆ. ಅಂಥ ಆತ್ಮ ಪ್ರತಿಷ್ಠೆಯು ಆದರು ಕಲ್ಪಿತನಾದರೆ ಮಾತ್ರ ಕನ್ನಡದ ಜನರೂ ಪಾಶ್ಚಾತ್ಯರಂತೆ ಸ್ವಸಹಾಯದಿಂದ ಬದುಕಿ ಬಾಳಬಹುದು. ಅಂಥ ಶಕ್ತಿ-ಪ್ರತಿಷ್ಠೆಗಳನ್ನು ಗಳಿಸದೆಯೇ ಬಾಳಿದರೆ, ಆ ಬಾಳು ಪೌರುಷದ ಬಾಳಾಗಲಾರದು. ಕರ್ತವ್ಯದ ಬುದ್ಧಿ ನಮ್ಮ ನಾಡನ್ನು ನಡೆಯಿಸಿಕೊಂಡು ಹೋಗಲಿ: ನಮ್ಮ ದೇಶ ಹಿರಿದಾಗಿ ಬಾಳಲಿ."

**ಶಿವರಾಮ ಕಾರಂತ**

ವಿಜ್ಞಾನ ಪ್ರಪಂಚ ಭಾಗ ೨ [ಜೀವ ಜೀವನ]
ಸಂಪುಟ ಮುನ್ನುಡಿಯಿಂದ

# ತೆರೆದ ಪುಟ

"ನಮ್ಮ–ನಿಮ್ಮ 'ಮಾಧವಿ'ಯ ಬಗ್ಗೆ ನಿಮ್ಮ ಅಭಿಪ್ರಾಯ, ಸಲಹೆ, ಸೂಚನೆಗಳಿಗಾಗಿ ಈ ಪುಟ ತೆರೆದಿಡಲಾಗಿದೆ. ನಿಮ್ಮ ವಿಚಾರಗಳಿಗೆ ಆಹ್ವಾನವಿದೆ; ಯೋಗ್ಯ, ಉಪಯುಕ್ತ, ಕ್ರಿಯಾತ್ಮಕ, ರಚನಾತ್ಮಕ ಸಲಹೆಗಳಿಗೆ ಸ್ವಾಗತವಿದೆ. ಈ **ತೆರೆದ ಪುಟ** ನಮ್ಮ–ನಿಮ್ಮ ವಿಚಾರ ವಿನಿಮಯದ ವೇದಿಕೆಯಾಗಲಿ. ನಿಮ್ಮ ಪ್ರತಿಕ್ರಿಯೆಗಳನ್ನು ಇಲ್ಲಿ ಪ್ರಕಟಿಸುವ ಸುಯೋಗ ನಮಗೆ ಲಭಿಸಲಿ."

**—ಸಂಪಾದಕರು**

---

## ಲೇಖಕರಿಗೆ ಆಹ್ವಾನ

'ಮಾಧವಿ'ಯ ಉದ್ದೇಶವು ಸಾಮಾನ್ಯರಿಗೂ ವಿವಿಧ ರಂಗಗಳಲ್ಲಿ ಆಗುತ್ತಿರುವ ಪ್ರಗತಿಯ ಬಗ್ಗೆ ಮಾಹಿತಿ ಒದಗಿಸಬೇಕೆಂದಿರುವುದರಿಂದ ವೈಜ್ಞಾನಿಕ ಕ್ಷೇತ್ರದಲ್ಲಿ ಇತ್ತೀಚಿನ ಸಂಶೋಧನೆಗಳು–ಪ್ರಗತಿ; ಸಾಹಿತ್ಯ ರಂಗದಲ್ಲಿ ಮುನ್ನಡೆ; ಚರಿತ್ರೆ, ಸಮಾಜ ಶಾಸ್ತ್ರ, ರಾಜಕೀಯ ಶಾಸ್ತ್ರ, ಮನಶ್ಶಾಸ್ತ್ರ ಮುಂತಾದವುಗಳಲ್ಲಿಯ ವಿಶ್ಲೇಷಣೆ ಬಗ್ಗೆ ಲೇಖನಗಳಿಗೆ ನಮ್ಮ ಸ್ವಾಗತವಿದೆ. ಹಾಸ್ಯ–ವಿನೋದಗಳು ಹಾಗೂ ಜೀವನದಲ್ಲಿ ರಸಮಯ ಘಟನೆಗಳನ್ನು ಚಿತ್ರಿಸಿದರೂ ನಾವು ಸಂತೋಷದಿಂದ ಸ್ವೀಕರಿಸುತ್ತೇವೆ. ಲೇಖಕರಿಗೆ ಯೋಗ್ಯ ಗೌರವಧನ ನೀಡುವ ಉದ್ದೇಶವೂ ಇದೆ. ಲೇಖಕರು ತಮ್ಮ ಸಹಕಾರ ನೀಡಬೇಕಾಗಿ ವಿನಂತಿಸುತ್ತೇವೆ.

## ಚಂದಾದಾರರಿಗೆ ಸ್ವಾಗತ

'ಮಾಧವಿ'ಯ ಚಂದಾದಾರರಾಗುವುದು ಒಂದು ಹೆಮ್ಮೆಯೆಂಬ ಭಾವನೆ ಸಾರ್ಥಕವಾಗುವಂತೆ ನಾವು ಈ ಮಾಸಿಕವನ್ನು ತಯಾರು-ಮಾಡಲು ಬಯಸಿದ್ದೇವೆ. ಚಂದಾದಾರರಿಗೆ ಕೆಲವು ವಿಶೇಷ ಅನುಕೂಲತೆಗಳನ್ನು, ಸೌಲಭ್ಯಗಳನ್ನು ಕೊಡುವ ಇಚ್ಛೆಯೂ ನಮಗಿದೆ. ನೀವು ಚಂದಾದಾರರಾಗಿರಿ; ನಿಮ್ಮ ರಸಿಕ ಮಿತ್ರರನ್ನೂ ಚಂದಾದಾರರನ್ನಾಗಿ ಮಾಡಿರಿ. ನಿಮಗೆ ನಮ್ಮ ಹಾರ್ದಿಕ ಸ್ವಾಗತ.

---

## ಗ್ರಂಥ ವಿಮರ್ಶೆ

'ಮಾಧವಿ'ಯು ತನ್ನ 'ಗ್ರಂಥಮಂಥನ' ಶೀರ್ಷಿಕೆಯಲ್ಲಿ ತನ್ನ ವಿಮರ್ಶೆಯ ಕೃಪೆಗಾಗಿ ಕಳುಹಿದ ಪ್ರತಿ ಪುಸ್ತಕವನ್ನು ವಿಮರ್ಶಿಸುವ ನಿರ್ಧಾರ ಕೈಗೊಂಡಿದೆ. ಈ ಶೀರ್ಷಿಕೆಯು ಕನ್ನಡ ವಿಮರ್ಶಾಭಾಂಡಾರಕ್ಕೆ ಒಂದು ಕೊಡುಗೆಯಾಗುವಂತೆ ಮಾಡುವ ವಿಚಾರವಿದೆ. ಗ್ರಂಥಕರ್ತರು ಪ್ರಕಾಶಕರು ಪುಸ್ತಕದ ೨ ಪ್ರತಿಗಳನ್ನು ಕಳುಹಿದಲ್ಲಿ ವಿಮರ್ಶೆಗೆ ತೆಗೆದುಕೊಳ್ಳಲಾಗುವುದು.

# ಮಾಧವಿ

ಸಂಚಿಕೆ ೧ :: ಮಾಧವಿ, ಅಗಸ್ಟ ೧೯೬೭ :: ಸಂಪುಟ ೧

## ವನಮಾನವ



ಡಾ॥ ದ. ರಾ. ಬೇಂದ್ರೆ, ಎಂ. ಎ., ಡಿ. ಲಿಟ್.

[ಮಾನವನು ಈಗ ಹೀನ ಸ್ಥಿತಿಯಲ್ಲಿದ್ದಾನೆಂಬ ಮಾತು ನಿರ್ವಿವಾದವಾದಾಗ, ಈ ಪಾಪಕೂಪದಲ್ಲಿರುವ ಮಾನವನು ಹೊರಬರುವುದು ಹೇಗೆ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಈ ಲೇಖನದಲ್ಲಿ ವರಕವಿ ಡಾ॥ ದ. ರಾ. ಬೇಂದ್ರೆಯವರು ಈ ವಿಚಾರವನ್ನು ವಿಶ್ಲೇಷಣಾತ್ಮಕವಾಗಿ ಪ್ರತಿಪಾದಿಸಿದ್ದಾರೆ. ಇವರು ರೂಪಿಸಿರುವ 'ವನಮಾನವ', ಆದಿ ಮಾನವನೂ ಅಲ್ಲ ಕಾಡು ಮಾನವನೂ ಅಲ್ಲ; ಅವನು ನವಮಾನವನು – ದೈವೀಮಾನವನು. —ಸಂ.]

ನವ ಮಾನವನ ವಿಶೇಷವೇ ವನ ಮಾನವ. ವಾದಕ್ಕಾಗಿ 'ವನಮಾನವ' ಎಂಬ ಪದವನ್ನು ತಿರುವು ಮುರುವು ಓದಿದರೂ ಅದು ಮತ್ತೆ ವನಮಾನವವೇ. ನವ ಎಂದರೆ ಹೊಸತಷ್ಟೇ ಅಲ್ಲ; ಒಂಬತ್ತರ ಅಂಕಿ ಪ್ರಕಟಿಸುವ ವೈಚಿತ್ರ್ಯವೆಲ್ಲ ಅದರಲ್ಲಿ ಬರುತ್ತದೆ. ಅದು ನವೋನವ–'ನವೋ ನವೋ ಭವತಿ ಜಾಯಮಾನಃ'. ಆದ ಆವಂತೆ ಹೊಸಹೊಸಬನಾಗಿ ಹೊಳೆಯುತ್ತಾನೆ ಆತ–ಆತ್ಮ. ಈ ನವೋನವದ ಶಮನವಾದಾಗಲೇ ದಶಮ ಪದವಿ ಬರುತ್ತದೆ. ದಶದಿಕ್ಕುಗಳನ್ನು ತುಂಬುವ ಭೂಮಾತ್ವ, ಆತನ ಸತ್ತ್ವವಾಗುತ್ತದೆ–ತತ್ತ್ವವಾಗುತ್ತದೆ. ಈ ತತ್ತ್ವ, ಸತ್ತ್ವ ಮತ್ತು ಸ್ವತ್ವ ಈ ಮೂರನ್ನೂ ಒಂದುಗೂಡಿಸುವ ತಂತ್ರವೇ ವನ ಮಾನವನ ನವಮಾನವತೆ. ಮೂರರ ಮೂರು; ಕ್ಷೇತ್ರ ಒಂಬತ್ತು. ಅದನ್ನು ಒಂದಾಗಿ ಅಂಗೈಯಲ್ಲಿ ಹಿಡಿಯುವುದು ಹತ್ತು. ಈ ಹತ್ತರ ಹತ್ತಿರ ಹೋಗಲು ಕಲಿಸುವವನೇ ಗುರು. ಇದನ್ನು ಕಲಿಯುವವ ಶಿಷ್ಯ. ಈ ಗುರು ಶಿಷ್ಯ ಸಂಬಂಧ ವನದಲ್ಲಿ ಕೂಡುವುದಂ. ಅಲ್ಲಿ 'ನವೋ ನವೋಃ' ಎಂಬುದೇ ಮಂತ್ರ. ನಾಗರಿಕತೆಯಲ್ಲಿ ಹೊಕ್ಕ ಮಾನವನ ಮನದ ಮಂಗಾಟ 'ನಮ' ಎಂಬ ಪದವನ್ನು 'ನ ಮಮ' ಎಂಬ ಪದವನ್ನು ಸುಲಭವಾಗಿ ತಿಳಿಯದು. ಮನಕ್ಕೆ ಮಮಕಾರವೇ ಪ್ರತಿಷ್ಠೆ. ನಗರದ ನಾಗರಿಕತೆ ಅರ್ಥ ದಾಸ್ಯವನ್ನು ಮಹಾ ಉಪಾಸನೆ ಎಂಬಂತೆ ಪರಿಪಾಲಿಸುತ್ತದೆ. ಅಲ್ಲಿ ರಸಕ್ಕೆ ವಿರಸವೇ ಇದಿರು. ಅದು ನಿತ್ಯ ಮರಣ.

"In India it was in the forests that our civilisation had its birth"

—**'Sadhana Tagore'**

ವನವೆಂದರೆ ಅರಣ್ಯ, ಕಾಡು, ಕಾನು ಎಂದಷ್ಟೇ ಅರ್ಥವಲ್ಲ. 'ತದ್ವನಮಿತ್ಯುಪಾಸಿತವ್ಯಂ' (ಕೇನೋಪನಿಷತ್ ೪.೬) ಶ್ರೀ. ಅರವಿಂದರು 'ತದ್ವನ' ಈ ಪದವನ್ನು That Delight ಎಂದು ಅನುವಾದಿಸಿದ್ದಾರೆ. ಅರಣ್ಯ ಎಂಬ ಪದವನ್ನು ಕೂಡ ಹೀಗೆಯೆ ವನಾರ್ಥದಲ್ಲಿ ಎಂದರೆ ಸತ್, ಚಿತ್ ಆನಂದ ಸಾಧನಾರ್ಥದಲ್ಲಿ ಬಳಸಿದ್ದಾಗಿದೆ. 'ಅರ' 'ಣ್ಯ' ಹೀಗೆ ಪದ ಬಿಡಿಸಿ ನಿರುಕ್ತಿಯನ್ನು ಹೇಳಿದ್ದರೂ, 'ಅರಣ್ಯಸ್ಯವತ್ಸೋಸಿ ವಿಶ್ವನಾಮಾ' ಎಂದು ಜೈಮಿನೀಯೋಪನಿಷತ್ತು ಹೇಳುವಾಗಲೂ ಅದೇ ಅರ್ಥಕ್ಕೆ ತಳಹದಿ ಹಾಕುತ್ತದೆ. ನಗರ ಜೀವನ, ಅರ್ಥ ಕಾಮ ಪ್ರಧಾನ. ಅದು ಶ್ರಮಿಕರದು. ವನಜೀವನ ಆಶ್ರಮಿಕರದು, ಮುಕ್ತಿ ಭಕ್ತಿ ಪ್ರಧಾನವಾದದ್ದು. ಶ್ರಮಿಕರನ್ನು ಮತ್ತು ಆಶ್ರಮಿಕರನ್ನು ಸಂಧಿಗೊಳಿಸುವುದೇ ನವ ಮಾನವ ಧರ್ಮ. ಇದನ್ನು ಹೆಚ್ಚೆಚ್ಚು ಸಂಕ್ಲೇಶಕ್ಕೆ ತುತ್ತು ಮಾಡುವುದು ಅನಾದಿ ಬರ್ಬರತೆ. ಶಾಬರ ರೀತಿ; ಕಿರಾತಮಾರ್ಗ; ವ್ಯಾಧರ ವ್ಯಾಧಿ; ಈ ಅನಾದಿ ಮೂರಾಬಟ್ಟೆಯೇ ತಾಪಗಳ ತ್ರಿವಿಧಿ. ಇದನ್ನು ನಿವಾರಿಸುವ ತಪಸ್ಯೆ ವನ ಮಾನವನ

ಹೃದಯಾಂತಸ್ಥ ಪ್ರದೀಪ್ತ ಜ್ಯೋತಿಯ ದೀಕ್ಷೆ.

ಅರ್ಥಕಾಮದ ಶುದ್ಧಿ, ಮುಕ್ತಭಕ್ತಿಯ ಬುದ್ಧಿ ಇವು ಹದವಾದ ಯುಕ್ತಿಯಿಂದ ಕೂಡಿದರೆ ಮಾತ್ರ ಶಮಸ್ಥಾಯಿಯಾದ ಆನಂದಕ್ಕೆ, ರಸಕ್ಕೆ, ಸುಖಕ್ಕೆ ನೆಲೆಯಾಗುವುದು. ಇತ್ತೀಚಿನ ಜೈವ ರಾಸಾಯನೀಕ ( Bio-chemic ) ತಂತ್ರವೇತ್ತರು :– ' Four is Twenty, Twenty is infinite ' ( The coil of Life, By–Ruth Moore. Chapter–18 ) ಎಂಬ ಒಂದು ಸೂತ್ರ ಹೇಳಿ ಹೊಸದೊಂದು ತ್ರಿನಾಡಿ ಸೋಪಾನ ಮಾರ್ಗವನ್ನು 'ಬಣ್ಣಿಸುತ್ತಿದ್ದಾರೆ. 'One is four' ಎಂಬ ಮಹಾನ್ ಉಕ್ತಿಯೊಂದನ್ನು 'The hour of God' ಎಂಬ ಗ್ರಂಥದಲ್ಲಿ (P. 25) ಶ್ರೀ. ಅರವಿಂದರು ಒಡೆನುಡಿದಿದ್ದಾರೆ. ಬ್ರಹ್ಮ, ವಿಷ್ಣು, ಶಿವ ಮತ್ತು ಕೃಷ್ಣ ಈ ನಾಲ್ಕರ ಐಕ್ಯವಾಗದೇ ನಾಳಿನ ಭವಿಷ್ಯದ ಬಾಗಿಲ ತೆರೆಯುವು ಎಂದು ಅವರು ಸೂಚಿಸುವರು. ದ್ವಾದಶಾದಿತ್ಯರಲ್ಲಿ ಮಿತ್ರ – ವರುಣ – ಆರ್ಯಮಾ-ಭಗ ಈ ಚತುರ್ಮುಖೈಕ್ಯವೇ ವಿಜ್ಞಾನ ಪ್ರಕಾಶ ಸಿದ್ಧಿಗೆ ಮೂಲ ಎಂದು ' On The Vedas ' ಎಂಬ ತಮ್ಮ ಗ್ರಂಥದಲ್ಲಿ ಶ್ರೀ. ಅರವಿಂದರು ಪ್ರತಿಪಾದಿಸಿದ್ದಾರೆ. ಅಧಿಯಾಜ್ಞಿಕ ದೇವತೆಗಳ ಈ ಐಕ್ಯ ಒಂದು ತುದಿಯಿಂದ ಮಾನವನ ಪ್ರಾಣ ಪಿಂಡಕ್ಕೆ ಮೂಲಭೂತವಾದ ಚತ್ವಾರಿ ತತ್ತ್ವಗಳು ಹೊಂದಿಸಿಕೊಳ್ಳುವ ಇನ್ನೊಂದು ಯೋಗ. ಮಾನವನ ಬೀಜ, ಬಿಂದು, ಸಂಘಟನೆಯಲ್ಲಿ ತಲೆ ಎತ್ತದಿದ್ದರೆ ಸರ್ಗ ವಿಸರ್ಗ ದೇವತೆಗಳಿಗೂ, ಅಂತರಾತ್ಮನಿಗೂ ಹೊಂದಿಕೆಯಾಗುವ ರಂಗಭೂಮಿಯೇ ಸಿದ್ಧವಾಗಲಾರದು. ಪ್ರತಿಯೊಬ್ಬ ವ್ಯಕ್ತಿ ತನ್ನ ಅರಿವಿನ–ಗುರುವಿನ ಜ್ಯೋತಿರ್ಲಿಂಗವನ್ನೇ ತನ್ನ ಸಖಸನ್ನಾಗಿ ಮಾಡಿಕೊಳ್ಳದಿದ್ದರೆ ವನ ಮಾನವತೆ ವನ್ಯ ಮಾನವತೆಯಾದೀತು, ನಾಗರಿಕತೆ ವಿಟ ವಿದೂಷಕತೆಯಲ್ಲಿ ಮುಳಗೀತು, ಭೂಮಿ ಎಲ್ಲಾ ನಿ ಷಾ ದ ರ ಸ್ಮಶಾನಭೂಮಿಯಾದೀತು. ಅಣು ಬಾಂಬಿನ ಪ್ರಯೋಗ ಸಿದ್ಧ ತಾಂತ್ರಿಕರಿರುವ ಈ ಜಗತ್ತಿನಲ್ಲಿ ರಾಜಕೀಯ ಕೌಟಿಲ್ಯಕ್ಕೆ ಯಾವುದು ಅಸಾಧ್ಯ?

**ಸಂಸ್ಕೃತಿ ಶೇಷನ ಸಹಸ್ರ ಹಣೆಗಳು**
**ಹೊತ್ತಿವೆ ಉದ್ಭವ ಭಾಗ್ಯ**
**ಯೋಗ ನಿದ್ರೆ ಆರೋಗ್ಯವಲ್ಲ-ಬಿಡು**
**ಅಪಕ್ವವಾ ವೈರಾಗ್ಯ.**

ಇಮರಸನ್, ಗೈಟೆ, ಪ್ಯಾಟ್ರಿಕ್ ಜಿಡ್ಡಿಸ್, ಪೀಟರ ಕ್ರೊಕೋಟ್ಕಿನ್, ಆಲ್ಬರ್ಟ ಸ್ಕ್ವಿಟ್‌ಝರ ಮೊದಲಾದವರು 'The possibility of actualising a unified personality, ಇಂದಿಲ್ಲ ನಾಳೆ ಸಾಧ್ಯ ಎನ್ನುತ್ತಾರೆ.

"Awakened to the meaning
of my heart
That to feel love and
oneness is to llve
And thus the magic of
our golden change

[ ** ಪುಟ ನೋಡಿರಿ ]






# ಮಹಾನುಭಾವರು ಕಂಡ ಹೆಣ್ಣಿನ ಮುಖಗಳು

ತಾರೆಗಳು ಆಕಾಶದ ಕವಿತೆಯಾದರೆ, ಸ್ತ್ರೀಯರು ಪೃಥ್ವಿಯ ಕವಿತೆ, ಜಗತ್ತಿನ ಭಾಗ್ಯವು ಇವರ ಕೈಯಲ್ಲಿಯೇ ಇದೆ. —ಹಾರಗ್ರೆವ್ಜ

* * * * *

ಸೌಂದರ್ಯದಿಂದ ಸ್ತ್ರೀ ಸದರ್ಪಳಾಗುತ್ತಾಳೆ, ಉತ್ತಮ ಗುಣಗಳಿಂದ ಆಕೆಯ ಪ್ರಶಂಸೆಯಾಗುತ್ತದೆ; ಮತ್ತು ಲಜ್ಜಾವತಿಯಾಗಿ ಅವಳು ದೇವಿಯಾಗುತ್ತಾಳೆ.

—ಶೆಕ್ಸಪಿಯರ

* * * * *

ನಾರಿಯು ಕಾಡನ್ನು ರಾಜಮಹಲಿಗಿಂತಲೂ ಸುಂದರವಾಗಿ ಮಾಡುತ್ತಾಳೆ.

—ರಾಮಾಯಣ

* * * * *

ಸ್ತ್ರೀಯು ಪ್ರೇಮದ ಬಳ್ಳಿ; ಅವಳ ಮೇಲೆ ಕ್ರೋಧದ ತಪ್ತ ನೀರನ್ನು ಸಿಂಪಡಿಸಬೇಡ; ಹಾಗಾದಲ್ಲಿ ಅವಳು ಒಣಗಿ ಹೋಗುವಳು. —ಸಂತೋಷ್

* * * * *

ಮಾಯೇ ಮೈವೆತ್ತು ನಟಿಸುವಳೋ ಹೆಣ್ಣಲಿ ನಿಂತು. —ದ. ರಾ. ಬೇಂದ್ರೆ

# ಕನ್ನಡ ರಾಜ್ಯ

**ಪ್ರೊ. ಗ. ಸ. ಹಾಲಪ್ಪ,** ಎಂ. ಎ. (ಕೋಲಂಬಿಯಾ)

---

[ಕರ್ನಾಟಕ ವಿಶ್ವವಿದ್ಯಾಲಯದ ಸ್ನಾತಕೋತ್ತರ ರಾಜಕೀಯ ಶಾಸ್ತ್ರ ವಿಭಾಗದ ಮುಖ್ಯಸ್ಥರಾದ ಪ್ರೊ. ಗ. ಸ. ಹಾಲಪ್ಪನವರು ಈ ಲೇಖನದಲ್ಲಿ ಕನ್ನಡ ರಾಜ್ಯದಲ್ಲಿ ಹತ್ತು ವರ್ಷಗಳಲ್ಲಿ, ಆದ ಸಾಧನೆ, ಆಗಬೇಕಾದ ಕಾರ್ಯ ನಿರೂಪಣೆ ಮಾಡಿದ್ದಾರೆ. ಬೆಳಗಾವಿ, ಗೋವೆ ಮುಂತಾದ ಸಮಸ್ಯೆಗಳ ಬಗ್ಗೆ ವಿಚಾರಪೂರಿತ ವಿವೇಚನೆಯನ್ನು ಇಲ್ಲಿ ಮಾಡಿದ್ದಾರೆ. ಪ್ರೊ. ಹಾಲಪ್ಪನವರು ಕನ್ನಡ ಹಾಗೂ ಇಂಗ್ಲೀಷುಗಳಲ್ಲಿ ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. ಇವರು ಇತ್ತೀಚೆಗೆ "ರಾಷ್ಟ್ರ ದ್ರಷ್ಟಾರ ಹರ್ಡೇಕರ ಮಂಜಪ್ಪ" ಎಂಬ ಬೃಹದ್ ಗ್ರಂಥವನ್ನು ರಚಿಸಿ, ಕನ್ನಡಕ್ಕೆ ಒಂದು ಕೃತಿರತ್ನವನ್ನು ಅರ್ಪಿಸಿದ್ದಾರೆ. —ಸಂ.]

---

ಕನ್ನಡ ರಾಜ್ಯವು ಅಸ್ತಿತ್ವದಲ್ಲಿ ಬಂದು ಹತ್ತು ವರ್ಷಗಳಾದವು. ಈ ಅವಧಿಯು ಯಾವುದೇ ರಾಜ್ಯದ ಚರಿತ್ರೆಯಲ್ಲಿ ಹೆಚ್ಚೇನಲ್ಲ. ಈ ರಾಜ್ಯದ ಸಾಧನೆ ಮತ್ತು ಕೊರತೆಗಳನ್ನು ಚರ್ಚಿಸುವಾಗ ಇಡೀ ಭರತ ಖಂಡದ ಚಿತ್ರವನ್ನು ನಾವು ಮುಂದಿಟ್ಟುಕೊಳ್ಳಬೇಕು. ಸ್ವತಂತ್ರ ಭಾರತದ ಇತರ ರಾಜ್ಯಗಳೊಡನೆ ನಮ್ಮ ರಾಜ್ಯವನ್ನು ಹೋಲಿಸಿದರೆ ಕೆಲವು ಮಹತ್ವದ ಸಂಗತಿಗಳು ಬೆಳಕಿಗೆ ಬರುತ್ತವೆ.

ಕನ್ನಡ ರಾಜ್ಯದ ಸಾಧನೆಗಳನ್ನು ಅಳೆಯುವಾಗ ಇಂದಿನ ಕನ್ನಡ ಜನರ ಗುಣಸ್ವಭಾವಗಳನ್ನು ನಾವು ಗಮನವಲ್ಲಿಟ್ಟುಕೊಳ್ಳಬೇಕು. ಕನ್ನಡ ಜನರು ಶಾಂತ ಸ್ವಭಾವದವರಾದರೂ ಇವರಲ್ಲಿ ಸಾರ್ವಜನಿಕ ಪ್ರಜ್ಞೆ, ಪರಸ್ಪರ ಸಹನೆ ಮತ್ತು ಒಕ್ಕಟ್ಟು ಇವುಗಳು ಕಡಿಮೆ; ಸ್ವಹಿತ ಪ್ರಜ್ಞೆ ಅಸೂಯೆಗಳೇ ಹೆಚ್ಚು. ಕನ್ನಡಿಗರಲ್ಲಿ ಸಾಹಸ ಪ್ರವೃತ್ತಿ ಅಷ್ಟಾಗಿ ಕಂಡು ಬರುವದಿಲ್ಲ. ನೆರೆಯ ಕೆಲವು ರಾಜ್ಯಗಳಲ್ಲಿ ಭಾಷಾ ಹಾಗೂ ರಾಜ್ಯದ ದುರಭಿಮಾನ ಹೆಡೆ ಎತ್ತಿ ನಿಂತಿದೆ. ಇಲ್ಲಿ ಅಭಿಮಾನದ ಕೊರತೆ ಎದ್ದು ಕಾಣುತ್ತಿದೆ. ಸ್ವಾರ್ಥಪರಾಯಣ ರಾಜಕಾರಣದ ಇ...ವುದೆಂದರ

ಪ್ರಭುತ್ವ ಯುಗದಲ್ಲಿ ಸ್ವಹಿತಕ್ಕಾಗಿ ವ್ಯಕ್ತಿ ಮತ್ತು ಗುಂಪುಗಳು ಹೋರಾಡುವುದರಿಂದ ರಾಜಕೀಯ ಜೀವನದಲ್ಲಿ ಘರ್ಷಣೆ ಮತ್ತು ಕೋಲಾಹಲಗಳ ಅಲೆ ಏಳುವುದು ಸ್ವಾಭಾವಿಕ. ಆದರೆ ನೆರೆರಾಜ್ಯಗಳಲ್ಲಿ ರಾಜ್ಯಹಿತದ ಪ್ರಶ್ನೆ ಬಂದಾಗ ವೈಯಕ್ತಿಕ, ರಾಜಕೀಯ ಹಾಗೂ ಪಕ್ಷಗಳ ಭಿನ್ನಾಭಿಪ್ರಾಯಗಳು ಮಂಜಿನಂತೆ ಕರಗಿ ಎಲ್ಲರೂ ಒಂದುಗೂಡಿ ಹೋರಾಡುವ ರಾಜ್ಯನಿಷ್ಠೆ ಹಾಗೂ ಪ್ರಜಾನಿಷ್ಠೆಯನ್ನು ನೋಡಬಹುದು. ಕನ್ನಡ ನಾಡಿನ ಸ್ಥಿತಿಯೇ ಬೇರೆ. ಹೊರಗಿನಿಂದ ನಮ್ಮ ರಾಜ್ಯದ ಮೇಲೆ ಆಕ್ರಮಣ ನಡೆಯುತ್ತಿರುವಾಗ ಕೂಡ ಎಲ್ಲರೂ ಕೂಡಿ ಪ್ರತಿಭಟಿಸುವ ಗುಣ ನಮ್ಮಲ್ಲಿ ಅಷ್ಟಾಗಿ ಪ್ರಕಟವಾಗಿಲ್ಲ. ಕೇಂದ್ರ ಸಚಿವ ಬೆಳಗಾವಿಯ ಪ್ರಶ್ನೆಯನ್ನು ಬಗೆಹರಿಸಲು ಬೆಂಗಳೂರಿಗೆ ಬಂದಾಗ ಮಂತ್ರಿಮಂಡಲದ ಮೇಲೆ ಆರೋಪಗಳನ್ನು ಹೊರಿಸುವ ಆತುರ ನಮ್ಮವರಿಗೆ; ರಾಜ್ಯದ ಹಿತಕ್ಕಾಗಿ ಒಕ್ಕಟ್ಟಾಗಿ ನಿಲ್ಲುವ ವೇಳೆಯಲ್ಲಿ ಕೂಡಾ ಒಳಜಗಳಗಳನ್ನು, ಪಕ್ಷರಾಜಕಾರಣವನ್ನು ಪ್ರದರ್ಶಿಸುವುದು ನಾಡಿನ ಹಿತದ ದೃಷ್ಟಿಯಿಂದ ಆರೋಗ್ಯಕರವೆನಿಸದು.

ಇಷ್ಟಾದರೂ ಕನ್ನಡಿಗರು ಮನಸ್ಸು ಮಾಡಿದರೆ ಒಕ್ಕಟ್ಟಿನಿಂದ ಹೋರಾಡಬಲ್ಲೆವೆಂಬುದನ್ನು ತೋರಿಸಿದ್ದಾರೆ. ಕೆಲವೊಮ್ಮೆ ಈ ಐಕ್ಯ ಮನೋಭಾವನೆಯು ರಾಜ್ಯದ ಬೆಳವಣಿಗೆಯ ಬಗ್ಗೆ ಆಶೆ ಇಟ್ಟುಕೊಳ್ಳಲು 'ನವಾಗಿದೆ. ಕನ್ನಡ ರಾಜ್ಯದಲ್ಲಿ ಕನ್ನಡಿಗರನ್ನು ಒಡೆದು ಹಾಳುಮಾಡುವ ಅನೈಕ್ಯ ಶಕ್ತಿಗಳು ಹಲವಾರು ಇರುವಂತೆಯೇ ಎಲ್ಲರನ್ನು ಒಂದಾಗಿ ಬೆಸೆಯುವ ಅಂಶಗಳೂ ಇವೆ. ಕನ್ನಡ ರಾಜ್ಯ ನಮ್ಮದು, ನಾವೆಲ್ಲರೂ ಕನ್ನಡಿಗರು ಎಂಬ ಅಭಿಮಾನ ನಮ್ಮನ್ನು ಒಂದುಗೂಡಿಸುತ್ತದೆ. ರಾಜ್ಯದಲ್ಲಿ ತಲೆ ಎತ್ತಿರುವ ಗಡಿಸಮಸ್ಯೆಗಳು ಕನ್ನಡ ಜನತೆಯಲ್ಲಿ ಅಪೂರ್ವವಾದ ಒಕ್ಕಟ್ಟನ್ನೂ, ಚೈತನ್ಯವನ್ನೂ ಉಂಟುಮಾಡಿವೆ. ಕನ್ನಡಿಗರು ಆಕ್ರಮಣ ಪ್ರವೃತ್ತಿಯವರಲ್ಲ, ಮೃದು ಸ್ವಭಾವದವರು ಎಂಬುದು ಎಲ್ಲರಿಗೂ ಗೊತ್ತಿರುವ ವಿಷಯ. ಇದರ ದುರುಪಯೋಗವನ್ನು ಮಹಾರಾಷ್ಟ್ರದ ನಾಯಕರು ಮಾಡಿಕೊಂಡು ಕನ್ನಡ ನೆಲವನ್ನು ಕಬಳಿಸುವ ತಂತ್ರದಲ್ಲಿ ತೊಡಗಿ ಈ ಎರಡೂ ರಾಜ್ಯಗಳ ಮಧುರ ಬಾಂಧವ್ಯವನ್ನು ಕೆಡಿಸಿದ್ದಾರೆ. ಮಹಾರಾಷ್ಟ್ರದವರು ತಮ್ಮ ನೆರೆಹೊರೆಯವರೊಡನೆ ಉತ್ತಮ ಸಂಬಂಧ, ಮಧುರ ಬಾಂಧವ್ಯಗಳನ್ನು ಉಳಿಸಿಕೊಂಡು, ಅವುಗಳನ್ನು ಹೇಗೆ ಅಭಿವೃದ್ಧಿ ಗೊಳಿಸಿಕೊಳ್ಳಬೇಕೆಂಬುದರ ಪ್ರಜ್ಞೆಯೇ ಇಲ್ಲದಂತೆ ವರ್ತಿಸುತ್ತಾರೆ. ಕೇಂದ್ರದ ಮುಖಂಡರು ಪ್ರಜಾಪ್ರಭುತ್ವದ ಎಳೆತ ಸೆಳೆತಗಳಿಗೆ ಸಿಕ್ಕು ಮಹಾರಾಷ್ಟ್ರದವರ ನ್ಯಾಯವಲ್ಲದ ಬೇಡಿಕೆಗಳಿಗೆ ಮೊದಲಿನಿಂದಲೂ ಮಣಿಯುತ್ತಾ ಬಂದಿದ್ದಾರೆ. ಮಹಾರಾಷ್ಟ್ರೀಯರು ಮುಂಬಯಿ ನಗರವನ್ನು, ನಾಗವಿದರ್ಭವನ್ನು ಕೇವಲ ಚಳ

ವಳಿಯ ಮಾರ್ಗದಿಂದಲೇ ಪಡೆದರು. ಇಷ್ಟರಿಂದ ಅವರಿಗೆ ತೃಪ್ತಿ ಇಲ್ಲ. ಅವರಿಗೆ ಗೋವಾ ಬೇಕು; ಕನ್ನಡ ರಾಜ್ಯದ ನೆಲ ಬೇಕು. ಅವರು ಇವುಗಳನ್ನು ದೊರಕಿಸಿ ಕೊಂಡ ಮೇಲೆ ಮಧ್ಯಪ್ರದೇಶದ ಗಡಿಗಳ ಮೇಲೆ ದಾಳಿಮಾಡುವ ಸನ್ನಾಹ ಇವರ ದಾಗಿದೆ ಇಷ್ಟಾದರೂ ಇವರು ತಮ್ಮ ಗಡಿ ವಿಸ್ತರಣೆಗೆ ಪೂರ್ಣವಿರಾಮ ಹಾಕಿ ವಂತೆ ತೋರುವುದಿಲ್ಲ. ಉತ್ತರ ಪ್ರದೇಶದ ಮೇಲೆ ಹಾದು ಪಾಣಿಪಟ್ಟದ ಯುದ್ಧ ವನ್ನು ಮುಗಿಸಿ ದೆಹಲಿಯ ಸಿಂಹಾಸನ ವನ್ನು ಆಕ್ರಮಿಸುವ ಕನಸು ಕೆಲವು ಮಹಾ ರಾಷ್ಟ್ರೀಯರಿಗಿದೆಯೋ ಏನೋ ! ಭಾರತ ಪಾಕಿಸ್ತಾನಗಳಿಗೆ ಸ್ವಾತಂತ್ರ್ಯವನ್ನು ಕೊಡು ವಾಗ ಗಡಿರೇಖೆಗಳನ್ನು ಗೊತ್ತುಪಡಿಸಿ ದರು. ರಾಡ್‌ಕ್ಲಿಫ್ ಆಯೋಗವು (ಈ ಆಯೋಗದಲ್ಲಿ ಶ್ರೀ ಎಂ.ಸಿ ಮಹಾಜನರೂ ಸದಸ್ಯರಾಗಿದ್ದರು) ನೀಡಿದ ತೀರ್ಪನ್ನು ಭಾರತ ಪಾಕಿಸ್ತಾನಗಳೆರಡೂ ಒಪ್ಪಿ ಕೊಂಡಿದ್ದು ಮಾತ್ರವೇ ಅಲ್ಲ, ಇಂದಿಗೂ ಅದನ್ನು ಪ್ರಶ್ನಿಸಿಲ್ಲ. ಆದರೆ ಮಹಾ ರಾಷ್ಟ್ರದವರು ನಮ್ಮದೇ ಸಂಸತ್ತಿನಲ್ಲಿ ರಾಜ್ಯಗಡಿಗಳ ಬಗ್ಗೆ ತೆಗೆದುಕೊಂಡ ನಿರ್ಣಯವನ್ನು ಒಂದೇಸವನೆ ತಿರಸ್ಕರಿಸು ತ್ತಿರುವುದು ತೀರ ವಿಚಿತ್ರವಾಗಿ ತೋರು ತ್ತದೆ. ಫಜಲ್‌ಆಲಿ ಸಮಿತಿಯು ಕೂಲಂ-ಕುಷವಾಗಿ ಪರಿಶೀಲಿಸಿ, ಸಂಸತ್ತಿನಲ್ಲಿ ಅಧಿಕೃತವಾಗಿ ಅಂಗೀಕರಿಸಿದ ಪುನರ್ರಚಿತ ರಾಜ್ಯಗಳ ರೇಖೆಗಳನ್ನು ಇತರ ರಾಜ್ಯಗಳು ಮನ್ನಿಸಿ ತಂತಮ್ಮ ರಾಜ್ಯಗಳ ಪ್ರಗತಿ ಕಾರ್ಯದಲ್ಲಿ ತೊಡಗಿರುವಾಗ ಮಹಾ ರಾಷ್ಟ್ರದವರು ಮಾತ್ರ ಗಡಿಯ ಭೂತ ವನ್ನು ನೆರೆಹೊರೆಯವರ ಮೇಲೆ ಬಿಡು ತ್ತಲೇ ಇದ್ದಾರೆ. ಮಹಾರಾಷ್ಟ್ರದ ಗಡಿ ಗಳು ಮಾತ್ರ ಸದಾ ಚಲಿಸಲು ಪ್ರಯತ್ನಿ ಸುತ್ತಿವೆ. ಬಲಿಷ್ಠವಾದ ಆಂಧ್ರ ಪ್ರದೇ ಶವೋ, ಬಂಗಾಲವೋ ಮಹಾರಾಷ್ಟ್ರದ ನೆರೆ ರಾಜ್ಯವಾಗಿದ್ದರೆ ಗಡಿ ಪ್ರಶ್ನೆಯ ಮಾತೇ ಖಂಡಿತವಾಗಿಯೂ ಕೇಳಿ ಬರು ತ್ತಿರಲಿಲ್ಲ ! ಕನ್ನಡ ನಾಡಿನ ಹಾಗೂ ಕನ್ನಡಿಗರ ದುರ್ದೈವದಿಂದಲೂ ಮಹಾ ರಾಷ್ಟ್ರ–ಮೈಸೂರಿನ ಗಡಿಸಮಸ್ಯೆ ತಲೆ ಎತ್ತಿವೆ; ಇದರಿಂದ ನಮ್ಮ ರಾಜ್ಯದ ಬೆಳವಣಿಗೆಯ ಮೇಲೆ ಅನಿಷ್ಟ ಪರಿಣಾಮ ವಾಗಿದೆ. ಕನ್ನಡಿಗರು ಜಾಗೃತರಾಗಿ, ಸತತವಾಗಿ ತಮ್ಮ ಗಡಿ ರಕ್ಷಣೆಗಾಗಿ ಹೋರಾಡುವ ಪ್ರಸಂಗ ಬಂದಿದೆ. ಗಡಿ ಪ್ರಶ್ನೆ ಒಮ್ಮೊಮ್ಮೆ ರಾಜ್ಯದ ರಾಜಕೀಯ ಮಲ್ಲಯುದ್ಧ ತಂತ್ರವಾಗಿ ಬಳಸಲ್ಪಟ್ಟು ರಾಜ್ಯದ ರಾಜಕೀಯ ನೆಮ್ಮದಿಗೆ ಭಂಗ ತಂದ ಪ್ರಸಂಗಗಳೂ ಉಂಟು. ರಾಷ್ಟ್ರ ದಲ್ಲಿಹೆಚ್ಚಿನ ರಾಜಕೀಯ ವರ್ಚಸ್ಸನ್ನು, ರಾಜ್ಯದಲ್ಲಿ ಪ್ರಬಲವಾದ ನಾಯಕತ್ವ ವನ್ನು ಮತ್ತು ಐಕ್ಯಮತ್ಯವನ್ನು ಹೊಂದಿ, ಕೇಂದ್ರದಲ್ಲಿ ಹೆಚ್ಚಿನ ಪ್ರಭಾವವನ್ನು ಬೀರಬಲ್ಲ ಬೃಹತ್ ರಾಜ್ಯವಾದ ಮಹಾ ರಾಷ್ಟ್ರದೊಡನೆ ಚಿಕ್ಕ ರಾಜ್ಯವಾದ ಮೈಸೂರು ಹೋರಾಡುವುದೆಂದರೆ

ಸಾಮಾನ್ಯ ಮಾತಲ್ಲ. ಕನ್ನಡ ರಾಜ್ಯವು ಅಸ್ತಿತ್ವದಲ್ಲಿ ಬಂದಾಗಿನಿಂದಲೂ ಒಂದು ವ್ಯವಸ್ಥಿತವಾದ ಯೋಜನೆಯನ್ನು ರೂಪಿಸಿಕೊಂಡು ಕಾರ್ಯೋನ್ಮುಖರಾಗಿದ್ದರೆ, ಮಹಾರಾಷ್ಟ್ರದ ತಂತ್ರಗಳಿಗೆ ಹೆಚ್ಚಿನ ಯಶಸ್ಸು ದೊರೆಯುತ್ತಿರಲಿಲ್ಲ. ಗಡಿಸಮಸ್ಯೆ ಉಲ್ಬಣಗೊಳ್ಳುತ್ತಲೂ ಇರಲಿಲ್ಲ. ಜನ ಮತ್ತು ಸರಕಾರ ಇನ್ನಾದರೂ ಜಾಗರೂಕರಾಗಿ ಸೂಕ್ತ ಕಾರ್ಯಕ್ರಮಗಳನ್ನು ಕೈಗೊಳ್ಳುವರೆಂದು ಆಶಿಸೋಣ. ಇತ್ತೀಚೆಗೆ ಕೇಂದ್ರ ಸರಕಾರವು ಆಡಳಿತ ಜಾಣ್ಮೆಯನ್ನು ತೋರದಿದ್ದುದರಿಂದಲೂ, ಸಾರ್ವಜನಿಕ ಚುನಾವಣೆಗಳನ್ನು ಗಮನದಲ್ಲಿರಿಸಿಕೊಂಡು ಕೆಲ ಮಹಾರಾಷ್ಟ್ರದ ರಾಜಕಾರಣಿಗಳು ಸ್ವಾರ್ಥ ರಾಜಕೀಯ ಪ್ರಯೋಗಗಳಲ್ಲಿ ತೊಡಗಿದುದರಿಂದಲೂ, ಕನ್ನಡ ಜನತೆಯು ಒಕ್ಕಟ್ಟಿನಿಂದ ಪ್ರತಿಭಟಿಸಿ ಕೇಂದ್ರದವರನ್ನು ಎಚ್ಚರಿಸಬೇಕಾಯಿತು. ನಿವೃತ್ತ ಶ್ರೇಷ್ಠ ನ್ಯಾಯಾಧೀಶ ಮಾನ್ಯ ಶ್ರೀ ಮಹಾಜನ ಅವರನ್ನು ಗಡಿ ವಿವಾದದ ಇತ್ಯರ್ಥ ಮಾಡಲು ನೇಮಿಸಲಾಗಿದೆ. ಒಬ್ಬ ನ್ಯಾಯಾಧೀಶರು (ಶ್ರೀ ಫಜಲ್‌ಆಲಿ) ಗಡಿಗಳ ವಿಷಯದಲ್ಲಿ ನಿರ್ದೇಶಕ ತತ್ವಗಳನ್ನು ಅನುಸರಿಸಿ ತೀರ್ಪನ್ನು ಕೊಟ್ಟರು. ಅದೇ ತತ್ವಗಳ ಆಧಾರದ ಮೇಲೆ ಗಡಿ ವಿವಾದವನ್ನು ಕುರಿತು ನಿರ್ಣಯವನ್ನು ಕೊಡಲು ಮತ್ತೊಬ್ಬ ನ್ಯಾಯಾಧೀಶರನ್ನು ಕೇಳಿಕೊಳ್ಳಲಾಗಿದೆ. ಇವರ (ಶ್ರೀ ಮಹಾಜನರ) ತೀರ್ಮಾನವು ಮೊದಲಿನ ತೀರ್ಮಾನದ ವಿರುದ್ಧವಾಗುವುದು ಅಸಂಭವನೀಯವೆಂದು ಸಾಧಾರಣವಾಗಿ ಊಹಿಸಬಹುದಾಗಿದೆ. ಅದರಂತೆ ಬೆಳಗಾವಿಯು ಕನ್ನಡ ರಾಜ್ಯದಿಂದ ಬೇರ್ಪಡುವುದು ಸಾಧ್ಯವಿಲ್ಲ. ಹಾಗಾದರೆ ಕಾಸರಗೋಡು ನಮಗೆ ದೊರಕುವುದು ಸಾಧ್ಯವೇ ಎಂದು ಕೇಳಬಹುದು. ಆಡಳಿತ ಸೌಕರ್ಯ ಮತ್ತು ಆರ್ಥಿಕ ಅಭಿವೃದ್ಧಿಯ ಆಧಾರಗಳ ಮೇಲೆ ಕಾಸರಗೋಡ ತಾಲೂಕನ್ನು ನಾವು ಕೇಳಬಹುದಾಗಿದೆ. ಶ್ರೀ ಮಹಾಜನ ಅವರಿಗೆ ಕಾಸರಗೋಡಿನ ಬಗ್ಗೆ ಮನವರಿಕೆ ಮಾಡುವ ಹೊಣೆ ಕನ್ನಡಿಗರ ಮೇಲಿದೆ. ಶ್ರೀ ಮಹಾಜನ ಅವರಿಗೂ, ಅಂತಿಮವಾಗಿ ಪಾರ್ಲಿಮೆಂಟಿಗೂ ನಾವು ನಮ್ಮ ನಿಲುಮೆಯನ್ನು ಚೆನ್ನಾಗಿ ವಿವರಿಸಬೇಕು.

ಗಡಿ ಸಮಸ್ಯೆಗಳು ಕನ್ನಡಿಗರಲ್ಲಿ ವಿಶೇಷ ಒಕ್ಕಟ್ಟನ್ನುಂಟು ಮಾಡಿದ್ದು, ಕನ್ನಡರಾಜ್ಯದಲ್ಲಿ ಐಕಮತ್ಯಸಾಧಕವಾದ ಇನ್ನೂ ಕೆಲ ಅಂಶಗಳಿವೆ. ಇದರಂತೆ ಅನೈಕಮತ್ಯವನ್ನುಂಟು ಮಾಡುವ ಅಂಶಗಳೂ ಇವೆ. ಇವುಗಳಲ್ಲಿ ರಾಜ್ಯದ ಹೆಸರಿನ ಬದಲಾವಣೆಯ ಪ್ರಶ್ನೆ ಹಾಗೂ ಅಧಿಕಾರಿಗಳ ಅಂತರರಾಜ್ಯ ಸೀನಿಯಾರಿಟಿಯ ಪ್ರಶ್ನೆಗಳು ರಾಜ್ಯದಲ್ಲಿ ಒಡಕನ್ನು ಹುಟ್ಟಿಸಲು ಅವಕಾಶವಾಗಿವೆ. ರಾಜ್ಯದ ಹೆಸರಿಗಾಗಿ ನಡೆದಿರುವ ಘರ್ಷಣೆಯು ಪ್ರಾದೇಶಿಕ ಮನೋಭಾವವನ್ನು ಸೂಚಿಸುತ್ತದೆ. ರಾಜ್ಯದ ಹೆಸರಿನ ಪ್ರಶ್ನೆಯು ಅನೇಕ ವೇಳೆ ಒದೆಯುವ ಚೆಂಡಿನ ಆಟವಾಗಿ ಪರಿಣಮಿಸಿದೆ. ಒಂದು

ಗುಂಪು ಮೈಸೂರು ಪರವಾಗಿಯೂ, ಇನ್ನೊಂದು ಗುಂಪು ಕರ್ನಾಟಕದ ಪರವಾಗಿಯೂ ಉಗ್ರವಾಗಿ ವಾದಿಸುತ್ತಿದ್ದರೆ, ಮಿತವಾದಿಗಳಾದ ಕೆಲವರು 'ಕನ್ನಡ ನಾಡು' ಎಂಬ ಹೆಸರನ್ನು ಇಟ್ಟು ಕೊಳ್ಳೋಣವೆಂಬ ಅಭಿಪ್ರಾಯಪಡುತ್ತಿದ್ದಾರೆ. ರಾಜ್ಯದಲ್ಲಿ ಭಾವೈಕ್ಯತೆಯು ಪೂರ್ಣವಾಗಿ ಉಂಟಾಗಿಲ್ಲ ಎಂಬುದನ್ನು ಇದು ಸೂಚಿಸುತ್ತದೆ. ಬೇರೆ ಬೇರೆ ಆಡಳಿತ ಮತ್ತು ಸಂಪ್ರದಾಯಗಳಲ್ಲಿ ನೂರಾರು ವರ್ಷ ಬಾಳಿ ಬಂದ ಬೇರೆ ಬೇರೆ ಭಾಗದ ಜನರು ಹೊಂದಿಕೊಳ್ಳಲು ಇನ್ನೂ ಹಲವಾರು ವರ್ಷಗಳು ಬೇಕಾಗಬಹುದು. ನಿರಂಕುಶ ಪ್ರಭುತ್ವದಲ್ಲಿ ತಂತಮ್ಮ ಅಭಿಪ್ರಾಯಗಳನ್ನು ಪ್ರಕಟಿಸುವುದಕ್ಕೆ ಅವಕಾಶವಿರಲಿಲ್ಲ. ಆದರೆ ಪ್ರಜಾಪ್ರಭುತ್ವದಲ್ಲಿ ಈ ರೀತಿ ಭಿನ್ನಾಭಿಪ್ರಾಯ ಪ್ರಕಟವಾಗುವುದು ಸ್ವಾಭಾವಿಕವಾದುದು. ಹಿಂದೆ ಹೈದರಾಲಿಯು ೧೭೬೩ ರಲ್ಲಿ ಶಿವಮೊಗ್ಗ ಮತ್ತು ಚಿತ್ರದುರ್ಗ ಭಾಗಗಳನ್ನು ಗೆದ್ದನು. ಈ ಪ್ರದೇಶಗಳು ಮುಂದೆ ಮೈಸೂರಿನ ಅರಸರ ಆಳಿಕೆಯ ಕೆಳಗೆ ಬಂದ ಎಷ್ಟೋ ವರ್ಷಗಳ ವರೆಗೆ ಅಲ್ಲಿಯ ಜನ ಮೈಸೂರಿನ ಆಳಿಕೆಗೆ ಹೊಂದಿಕೊಳ್ಳದೆ ಹೋದರು. ಇಷ್ಟೇ ಅಲ್ಲ ೧೮೩೦ ರಲ್ಲಿ ದಂಗೆಯನ್ನೂ ಎಬ್ಬಿಸಿದರು. ಆದರೆ ಕಾಲಕ್ರಮದಲ್ಲಿ ನಾವೆಲ್ಲರೂ ಮೈಸೂರು ರಾಜ್ಯದವರೆಂಬ ಭಾವನೆ ಅವರಲ್ಲಿ ಚೆನ್ನಾಗಿ ಬೇರೂರಿತು. ಇದೇ ರೀತಿ, ಪ್ರಾದೇಶಿಕ ಭಾವನೆಗಳು ಇನ್ನೂ ಕೆಲಕಾಲ ಅನಿವಾರ್ಯವಾದರೂ ಕಾಲಕ್ರಮದಲ್ಲಿ ಕ್ರಮೇಣವಾಗಿ ಕಡಿಮೆಯಾಗುವುದರಲ್ಲಿ ಸಂಶಯವಿಲ್ಲ.

ಆದರೆ ಸರಕಾರದವರೂ, ಶಾಸಕರೂ, ಆಡಳಿತಗಾರರೂ, ಪತ್ರಿಕೋದ್ಯೋಗಿಗಳೂ, ಶಿಕ್ಷಕರೂ ಭಾವೈಕ್ಯತೆಯನ್ನು ರೂಪಿಸುವ ಕಾರ್ಯದಲ್ಲಿ ಮಹತ್ವದ ಪಾತ್ರವನ್ನು ವಹಿಸಬಹುದಾಗಿದೆ. ಈ ಬಗ್ಗೆ ಸರಕಾರದವರು ರಚನಾತ್ಮಕವಾದ ಮಾರ್ಗದರ್ಶನವನ್ನು ನೀಡಬಹುದಾಗಿದೆ. ಅಲ್ಲದೆ ಸರಕಾರವು ತನ್ನ ಸೂಕ್ತ ಧೋರಣೆ ಮತ್ತು ನಿರ್ಧಾರಗಳಿಂದ ನಾಡಿನ ಜನತೆಯಲ್ಲಿ ಸಹಕಾರ ಮತ್ತು ಐಕ್ಯದ ಭಾವನೆಗಳನ್ನೂ, ರಾಜ್ಯದ ಏಳ್ಗೆಯನ್ನೂ ತ್ವರಿತಗೊಳಿಸಬಹುದಾಗಿದೆ. ಈ ದೃಷ್ಟಿಯಿಂದ ಸರಕಾರ ಸಮರ್ಥರಾದ ಸಲಹೆಗಾರರನ್ನೂ, ಆಡಳಿತ ಶಿಕ್ಷಣ ಸಲಹೆಗಾರರನ್ನೂ ಮತ್ತು ಆರ್ಥಿಕ ಸಲಹೆಗಾರರನ್ನೂ ನೇಮಿಸಿ ತಜ್ಞ ಅಭಿಪ್ರಾಯಗಳ ಪ್ರಯೋಜನ ಪಡೆಯಬೇಕೆಂಬುದು ರಾಜ್ಯದ ಹಿತಚಿಂತಕರ ಅಭಿಪ್ರಾಯವಾಗಿದೆ. ಇಂದು ಕನ್ನಡ ರಾಜ್ಯವನ್ನು ಹೆಚ್ಚಾಗಿ ಬಾಧಿಸುತ್ತಿರುವ ಸಮಸ್ಯೆ ಎಂದರೆ ಅಧಿಕಾರಿಗಳಲ್ಲಿರುವ ಅತೃಪ್ತಿ. ಇದಕ್ಕೆ ಅಂತರ–ರಾಜ್ಯಸೀನಿಯಾರಿಟಿ ತೃಪ್ತಿಕರವಾಗಿ ಬಗೆಹರಿಸಲ್ಪಡದಿರುವುದೇ ಮುಖ್ಯ ಕಾರಣ. ಇದರ ಜೊತೆಗೆ ಎಷ್ಟೋ ಅಧಿಕಾರಿಗಳು ತಾವು ಕೆಲಸ ಮಾಡುತ್ತಿರುವ ಪ್ರದೇಶಗಳಲ್ಲಿ ಹೊಂದಿಕೊಂಡು ಸೇವೆ ಮಾಡುವ ಮನೋಭಾವವನ್ನು ಪಡೆಯ

ದಿರುವುದು ಶೋಚನೀಯ. ಮೈಸೂರಿನ ಕಡೆಯ ಅಧಿಕಾರಿ ಧಾರವಾಡದ ಕಡೆ ಹೋಗಲು ಇಚ್ಛಿಸುವುದಿಲ್ಲ. ಧಾರವಾಡದ ಕಡೆಯವರು ಗುಲ್ಬರ್ಗ ವಿಭಾಗಕ್ಕೆ ಹೋಗಲು ಹಿಂದೆ ಮುಂದೆ ನೋಡುತ್ತಾರೆ. ಅಖಿಲ ಭಾರತ ಸೇವೆಗಳಲ್ಲಿರುವ I. A.S. I.P.S. ಅಧಿಕಾರಿಗಳು ರಾಜ್ಯದ ಹೊರಗಿನಿಂದ ಬಂದು ಈ ರಾಜ್ಯದಲ್ಲಿ ಹೊಂದಿಕೊಂಡು ಕೆಲಸ ಮಾಡುವಾಗ ಇದೇ ರಾಜ್ಯದವರಾದ ಅಧಿಕಾರಿಗಳು ಹೊಂದಿಕೊಳ್ಳುವ ವೈಗೂಡಿಸಿಕೊಳ್ಳಬೇಕು.

ಕನ್ನಡರಾಜ್ಯ ತಲೆ ಎತ್ತಿದುದು ಮುಖ್ಯವಾಗಿ ಕನ್ನಡ ಜನತೆಯ ಆರ್ಥಿಕ ಅಭಿವೃದ್ಧಿಗಾಗಿ ಹಾಗೂ ಕನ್ನಡ ಸಾಹಿತ್ಯ, ಭಾಷೆ ಮತ್ತು ಸಂಸ್ಕೃತಿಗಳ ರಕ್ಷಣೆಗಾಗಿ. ಈ ಎರಡು ಗುರಿಗಳ ಸಾಧನೆಯಲ್ಲಿ ಎಷ್ಟು ಮುಂದುವರಿದಿದ್ದೇವೆ ಎಂಬುದನ್ನು ಪರಿಶೀಲಿಸಬೇಕಾಗಿದೆ.

ಕನ್ನಡದ ಅಭಿವೃದ್ಧಿಯನ್ನು ಕುರಿತು ಸ್ವಲ್ಪ ವಿಚಾರಿಸೋಣ. ರಾಜ್ಯದಲ್ಲಿ ಕಲೆ, ಸಾಹಿತ್ಯ, ಸಂಸ್ಕೃತಿಗಳ ವಿಕಾಸಕ್ಕೆ ನಿಶ್ಚಿತವಾದ ಯೋಜನೆ ಇದ್ದಂತಿಲ್ಲ. ಕೆಲವು ಸರಕಾರಿ ಸಮಿತಿಗಳಿದ್ದರೂ ಪರಿಣಾಮಕಾರಿಯಾದ ಕಾರ್ಯ ಅವುಗಳಿಂದ ಸಾಧ್ಯವಾಗಿಲ್ಲ, ಪ್ರಾಯಶಃ ಹಣದ ಕೊರತೆಯಿಂದಾಗಿ, ಹಣದ ಕೊರತೆಯಿಂದಾಗಿಯೇ ಉತ್ತಮ ಗ್ರಂಥಗಳಿಗೆ ರಾಜ್ಯ ಸರಕಾರವು ಬಹುಮಾನ ಕೊಡುವುದನ್ನೂ ಕೂಡ ನಿಲ್ಲಿಸಿಬಿಟ್ಟಿದೆ. ಇದು ಬಹಳ ದುರ್ದೈವದ ಸಂಗತಿ. ರಾಜ್ಯದಲ್ಲಿ ಕನ್ನಡ ವಿಶ್ವಕೋಶ ಹಾಗು ಅರ್ಥಕೋಶಗಳ ರಚನೆಯ ಪ್ರಗತಿಯು ಸಮಾಧಾನಕರವಾಗಿಲ್ಲ ಎಂಬುದು ಸರ್ವವಿದಿತವಾಗಿದೆ. ಕನ್ನಡ ಭಾಷೆ ಹಾಗೂ ಸಾಹಿತ್ಯ ಅಭಿವೃದ್ಧಿಗಾಗಿ ವಾಸ್ತವ ಯೋಜನೆಗಳನ್ನು ರೂಪಿಸಿ ಅವುಗಳನ್ನು ಕಾರ್ಯಗತ ಮಾಡುವ ಪರಿಪಾಠ ಬೆಳೆಯುವುದು ಅವಶ್ಯ. ಈ ಎಲ್ಲ ಕಾರ್ಯಗಳ ಬಗ್ಗೆ ಆಲೋಚಿಸಿ ಸಲಹೆ ನೀಡಲು ಸರಕಾರವು ಯೋಗ್ಯ ಜನರ ಸಲಹೆ, ಸಹಕಾರವನ್ನು ಪಡೆಯುವದು ಅಗತ್ಯ. ಕನ್ನಡರಾಜ್ಯದಲ್ಲಿ ಕನ್ನಡ ಭಾಷೆ ಹಾಗೂ ಸಂಸ್ಕೃತಿಯ ರಕ್ಷಣೆಯ ಬಗ್ಗೆ ತಕ್ಕ ವಿಚಾರ ಮಾಡುವುದಕ್ಕೂ ಸಮಯ ದೊರೆತಿಲ್ಲ. ಕನ್ನಡ ರಾಜ್ಯ ಕೈಕೊಳ್ಳಬೇಕಾದ ಕಾರ್ಯ ಅಗಾಧವಾಗಿದೆ. ಕನ್ನಡ ಭಾಷೆ ಹಾಗೂ ಸಂಸ್ಕೃತಿಯ ರಕ್ಷಣೆಯನ್ನು ಅನೇಕ ಕ್ಷೇತ್ರಗಳಲ್ಲಿ ಕೈಕೊಳ್ಳಬಹುದಾಗಿದೆ. ಕನ್ನಡ ಪತ್ರಿಕೆಗಳಲ್ಲಿ ಸರಕಾರ ಹೆಚ್ಚಿನ ಏಕರೂಪತೆ ಹಾಗೂ ಪುಷ್ಟಿಯನ್ನು ದೊರಕಿಸುವುದು ಅಪೇಕ್ಷಣೀಯ. ಗಡಿಭಾಗಗಳಲ್ಲಿಯೂ, ರಾಜ್ಯದ ರಾಜಧಾನಿಯಲ್ಲಿಯೂ ಬಾನುಲಿಯಲ್ಲಿಯೂ ಕನ್ನಡತನವನ್ನು ಕಾಪಾಡಿಕೊಳ್ಳುವುದು ಕನ್ನಡ ರಾಜ್ಯದ ಪ್ರಾಥಮಿಕ ಕರ್ತವ್ಯ. ನಮ್ಮ ಸಂಸ್ಕೃತಿಯನ್ನೂ, ಭಾಷೆಯನ್ನೂ ನಾವು ಹೇಗೆ ಮರೆತಿದ್ದೇವೆ ಎನ್ನಲು ನಾವು ದಕ್ಷಿಣಕನ್ನಡ ಹಾಗೂ ಉತ್ತರ ಕನ್ನಡ ಜಿಲ್ಲೆಗಳ ಹೆಸರನ್ನು ಇದುವರೆಗೂ ಬದಲಾಯಿಸದಿರು

ವುದೇ ಸಾಕ್ಷಿ. ಪರಕೀಯರು ಸೈನಿಕ ಅಥವ ರಾಜಕೀಯ ಕಾರಣಗಳಿಗಾಗಿ ಉತ್ತರ ಹಾಗೂ ದಕ್ಷಿಣ ಕನ್ನಡ ಜಿಲ್ಲೆಗಳೆಂದು ನಾಮಕರಣ ಮಾಡಿದರು. ರಾಜ್ಯದ ಭೂಗೋಳ ಜ್ಞಾನವಿರುವ ಯಾರಾದರೂ ಇವು ಪಶ್ಚಿಮ ಕರ್ನಾಟಕದ ಜಿಲ್ಲೆಗಳೆಂದು ಗುರುತಿಸಲು ಹೆಚ್ಚು ವೇಳೆ ಬೇಕಾಗುವದಿಲ್ಲ. ಇದರ ಜೊತೆಗೆ ಪೋರ್ತುಗೀಸರಿಗೆ 'ಡ' ಕಾರದ ಉಚ್ಚಾರ ಬರುತ್ತಿರಲಿಲ್ಲವಾದುದರಿಂದ ಅವರು ಕನ್ನಡವನ್ನು 'ಕೆನರ' ಅಥವ 'ಕ್ಯಾನರೀಸ್' ಎಂದೂ ಕೊಡಗನ್ನು 'ಕೂರ್ಗ' ಎಂದೂ ಮಡಿಕೇರಿಯನ್ನು 'ಮರ್ಕೆರ' ವೆಂದೂ ಮಡಗಾಂವನ್ನು 'ಮರಗಾಂವ' ಎಂದೂ (ಇದರ ಮೂಲ ಹೆಸರು ಮಠಗ್ರಾಮವೆಂದು ನಮ್ಮ ಸಂಶೋಧನೆಯಿಂದ ತಿಳಿದು ಬಂದಿದೆ) ಕರೆಯಲಾರಂಭಿಸಿದರು. ಹೀಗೆ ಮುಂದೆ ಬಳಕೆಯಲ್ಲಿ ಬಂದ South Canara ಹಾಗೂ North Canara ಎಂಬ ಅಶುದ್ಧ ಪ್ರಯೋಗಗಳೇ ನಮ್ಮಲ್ಲಿ ಈಗಲೂ ಬಳಕೆಯಲ್ಲಿವೆ. ಈ ರೀತಿ ಅಘಾತಕ್ಕೀಡಾದ ನಮ್ಮ ಭಾಷೆ ಮತ್ತು ಸಂಸ್ಕೃತಿಗಳನ್ನು ಉಳಿಸಿಕೊಳ್ಳಬೇಕಾಗಿರುವ ಹಲವಾರು ಕ್ಷೇತ್ರಗಳಿವೆ. ಹೀಗೆಂದ ಮಾತ್ರಕ್ಕೆ ರಾಜ್ಯ ಸರಕಾರವು ಕನ್ನಡದ ಬಗ್ಗೆ ಯಾವ ಕೆಲಸವನ್ನೂ ಮಾಡಿಲ್ಲವೆಂದಲ್ಲ. ಹಲವಾರು ಕಾರ್ಯಗಳನ್ನು ಕೈಗೊಂಡಿದೆ. ಕೆಲವನ್ನು ಯಶಸ್ವಿಯಾಗಿ ಪೂರೈಸಿದೆ. ರಾಜ್ಯ ಸರಕಾರವು ಕೈಕೊಂಡ ಕಾರ್ಯಗಳಲ್ಲಿ ಪದ್ಮವಿಭೂಷಣ ಡಾ॥ ಕೆ. ವಿ. ಪುಟ್ಟಪ್ಪನವರನ್ನು 'ರಾಷ್ಟ್ರಕವಿ' ಗಳೆಂದು ಗೌರವಿಸಿರುವುದೂ ಮತ್ತು ಕವಿವರ್ಯರಾದ ಶ್ರೀ ದ. ರಾ. ಬೇಂದ್ರೆಯವರಿಗೆ ಗೌರವ ಧನವನ್ನು ಕೊಡಮಾಡಿರುವುದು ಸ್ತುತ್ಯ ಉಪಕ್ರಮಗಳಾಗಿವೆ. ಇದರಂತೆ ಕಲೆ ಮತ್ತು ಸಂಶೋಧನೆಗಳಲ್ಲಿ ಪರಿಶ್ರಮ ಹೊಂದಿ, ಅಗ್ರಸ್ಥಾನ ಪಡೆದ ಶ್ರೇಷ್ಠ ವ್ಯಕ್ತಿಗಳನ್ನೂ ಪುರಸ್ಕರಿಸಬೇಕು. ಹಾಗೂ ಸಾಹಿತ್ಯ ಕ್ಷೇತ್ರದಲ್ಲಿ ಕನ್ನಡಕ್ಕಾಗಿ ದುಡಿದಿರುವ ಇತರರನ್ನೂ ಪುರಸ್ಕರಿಸಲು ಯೋಜನೆ ಮಾಡುವುದೂ ಅಗತ್ಯವಾಗಿದೆ.

ಕನ್ನಡ ರಾಜ್ಯದಲ್ಲಿ ತುರ್ತಾಗಿ ಆಗಬೇಕಾದ ಕಾರ್ಯಗಳಲ್ಲಿ ಅಗ್ರ ಪ್ರಾಶಸ್ತ್ಯದ ಸುಧಾರಣೆ ಎಂದರೆ ಸುದ್ದಿ ಪ್ರಸಾರಕ್ಕೆ ಸಂಬಂಧಿಸಿದುದು. ಬಾನುಲಿಯ ಸುದ್ದಿಯಿಂದ ಮೊದಲು ಮಾಡಿ ಬಾತ್ಮಿದಾರನ ಮಟ್ಟದವರೆಗೆ ಸುಧಾರಣೆಯಾಗಬೇಕು. ಕೇಂದ್ರ ಸರಕಾರದ ಸಂಸ್ಥೆಯಾದ ಬಾನುಲಿಯು ಪ್ರಸಾರ ಮಾಡುವ ಸುದ್ದಿಗಳಲ್ಲಿ ರಾಜ್ಯದ ವಾರ್ತೆಗಳಿಗೆ ಸಾಕಷ್ಟು ಸ್ಥಾನವಿಲ್ಲ. ರಾಜ್ಯದಲ್ಲಿರುವ ಪ್ರೆಸ್ ಟ್ರಸ್ಟ ಆಫ್ ಇಂಡಿಯಾ ಸಂಸ್ಥೆಯು ಇನ್ನೂ ಬಲಗೊಳ್ಳಬೇಕು ಮತ್ತು ರಾಜ್ಯಕ್ಕೆ ಸಂಬಂಧಿಸಿದ ಸುದ್ದಿಗಳು ಹೊರಗಡೆ ಹೆಚ್ಚಾಗಿ ಪ್ರಸಾರವಾಗಬೇಕು. ಈ ಬಗ್ಗೆ ರಾಜ್ಯ ಸರಕಾರವು ಗಮನ ಹರಿಸುವುದಲ್ಲದೆ ಅಗತ್ಯವಾಗಿದೆ. ಇದೇ ರೀತಿ ದೆಹಲಿಯಲ್ಲಿಯೂ ಗೋವಾದಲ್ಲಿಯೂ ಸರಿಯಾದ ಸಿಬ್ಬಂದಿ

ಯನ್ನು ನೇಮಿಸುವುದು ರಾಜ್ಯದ ಹಿತ ದೃಷ್ಟಿಯಿಂದ ಅಪೇಕ್ಷಣೀಯವಾಗಿದೆ.

ಕನ್ನಡ ರಾಜ್ಯವನ್ನು ಎದುರಿಸುತ್ತಿರುವ ಇನ್ನೊಂದು ಪ್ರಮುಖ ಸಮಸ್ಯೆಯೆಂದರೆ ಈ ರಾಜ್ಯದವರಿಗೆ ರಾಜ್ಯದ ಒಳಗೂ ಮತ್ತು ಹೊರಗೂ ನ್ಯಾಯವಾಗಿ ದೊರೆಯ ಬೇಕಾದಷ್ಟು ಪ್ರಾತಿನಿಧ್ಯ ಸಿಗುತ್ತಿಲ್ಲ ವೆಂಬುದು. ಸ್ವತಂತ್ರ ಭಾರತದಲ್ಲಿ ಫೆಡ ರಲ್ ಪದ್ಧತಿಯ ಸರಕಾರವೇರ್ಪಟ್ಟು ಅಖಿಲ ಭಾರತ ದೃಷ್ಟಿ ಮತ್ತು ರಾಜ್ಯಗಳ ಪರಸ್ಪರ ಅವಲಂಬನೆಗಳು ಬೆಳೆಯುತ್ತಿರುವ ಈ ಕಾಲದಲ್ಲಿ ಯಾವ ರಾಜ್ಯದವರಿಗೂ ಸಂಕುಚಿತ ದೃಷ್ಟಿ ಸಲ್ಲದೆಂಬ ಮಾತನ್ನು ಒಪ್ಪತಕ್ಕದ್ದಾದರೂ, ಕನ್ನಡ ರಾಜ್ಯಕ್ಕೆ ಕೇಂದ್ರ ಮಂತ್ರಿಮಂಡಲದಲ್ಲಿ, ಕೇಂದ್ರ ಸರಕಾರದ ಮುಖ್ಯ ಹೊಣೆಗಾರಿಕೆಯ ಸ್ಥಾನಗಳಾದ ಯೋಜನಾ ಆಯೋಗ, ಲೋಕಸೇವಾ ಆಯೋಗ, ಹಣಕಾಸಿನ ಆಯೋಗ, ವರಿಷ್ಠ ನ್ಯಾಯಾಲಯ ಮುಂತಾದವುಗಳಲ್ಲಿಯೂ ; ಮತ್ತು ರಾಜ್ಯದ ಹಿತಕ್ಕೆ ಸಂಬಂಧಿಸಿದ ಇತರ ಕೇಂದ್ರ ಇಲಾಖೆಗಳಲ್ಲಿ ರಾಜ್ಯಕ್ಕೆ ಪ್ರಾತಿ ನಿಧ್ಯ ಕಡಿಮೆ. ಹೀಗಿರುವಾಗ ಈ ರಾಜ್ಯದ ಅನೇಕ ಹೊಣೆಗಾರಿಕೆಯ ಆಡಳಿತ ಸ್ಥಾನ ಗಳು ಮತ್ತು ಚುನಾಯಿತ ಸ್ಥಾನಗಳು ರಾಜ್ಯದ ಹೊರಗಿನವರಿಗೆ ಸಿಗುತ್ತಿರುವುದು ಈ ರಾಜ್ಯದ ಜನರಲ್ಲಿ ಅತೃಪ್ತಿಯನ್ನುಂಟು ಮಾಡಿದಂತಿದೆ. ಈ ಸ್ಥಿತಿಯಿಂದಾಗಿ ಈ ರಾಜ್ಯದ ಒಳಗಿನವರು ಮೈಸೂರು ರಾಜ್ಯ ವು ಪರಪುಟ್ಟರಿಗೆ ತೌರೂರು ಎಂದು ಹೊರ ಗಿನವರು ಮೈಸೂರು ರಾಜ್ಯದಲ್ಲಿ ಪ್ರತಿಭಾ ಶಾಲಿಗಳ ಅಭಾವವಿದೆಯೆಂದೂ ಟೀಕಿಸು ವಂತಾಗಿದೆ. ಈ ಟೀಕೆಯನ್ನು ನಿವಾರಿಸಲು ರಾಜ್ಯಸರಕಾರ ಮತ್ತು ಜನತೆ ರಾಜ್ಯದಲ್ಲಿ ರುವ ಪ್ರತಿಭಾಶಾಲಿಗಳಿಗೂ ರಾಜ್ಯದಲ್ಲಿ ಮತ್ತು ಕೇಂದ್ರದಲ್ಲಿ ಹೊಣೆಗಾರಿಕೆಯ ಸ್ಥಾನಗಳು ಸಿಕ್ಕುವಂತೆ ತಮ್ಮ ಪ್ರಭಾವವ ನ್ನು ಬೀರಬೇಕಾಗಿರುವುದು ಅಗತ್ಯವಾಗಿದೆ.

ಕೊನೆಯಲ್ಲಿ, ಸಾಹಿತ್ಯಕ್ಷೇತ್ರದಲ್ಲಿ ನಡೆ ದಿರುವ ಪ್ರಗತಿಯನ್ನು ಕುರಿತು ಒಂದೆರಡು ಮಾತುಗಳನ್ನು ಹೇಳದಿದ್ದರೆ ಈ ಸಿಂಹಾವ ಲೋಕನವು ಅಪೂರ್ಣವಾದೀತು. ಇಂದಿನ ಪ್ರಜಾಪ್ರಭುತ್ವಯುಗದಲ್ಲಿ ಬುದ್ಧಿಪ್ರಧಾನ ವಾದ ವಿಚಾರ ಸಾಹಿತ್ಯ ಹೆಚ್ಚಾಗಿ ಬೇಕು. ಹೊಟ್ಟೆಯಪಾಡಿಗಾಗಿ ಕೆಲವು ಕೃತಿಗಳನ್ನು ಬರೆಯುವುದರ ಜೊತೆಗೆ ದೇಶದ ಮುಂದೆ ಹೊಸ ಆದರ್ಶಗಳನ್ನು ನಿಲ್ಲಿಸುವ ಕೃತಿಗಳೂ ನಮಗೆ ಬೇಕು. ಕನ್ನಡಿಗರಲ್ಲಿ ಹೊಸ ವಿಚಾರಗಳ ಪ್ರಸಾರವಾಗಿ ಅವರಲ್ಲಿ ಪ್ರಗತಿ ದೃಷ್ಟಿ ಬೆಳೆಯುವಂತೆ ಮಾಡುವ ವಾಸ್ತವ ಸಾಹಿತ್ಯ ರಚನೆಯಾಗಬೇಕು.

ನಮ್ಮ ರಾಜ್ಯ ಎದುರಿಸುತ್ತಿರುವ ಈ ಎಲ್ಲ ಸಮಸ್ಯೆಗಳಿಗೆ ಸೂಕ್ತ ಪರಿಹಾರ ಗಳನ್ನು ಒದಗಿಸಿ ಭಾವೈಕ್ಯತೆಯಿಂದ ಪ್ರಗತಿಪಥದಲ್ಲಿ ಮುಂದೆ ಸಾಗಿ ಸಮಗ್ರತೆ ಯನ್ನು ಸಾಧಿಸಿ ಇತರ ರಾಜ್ಯಗಳಿಗೆ ಕನ್ನಡ ರಾಜ್ಯ ಆದರ್ಶ ರಾಜ್ಯವಾಗುವಂತೆ ಮಾಡುವುದು ಎಲ್ಲ ಕನ್ನಡಿಗರ ಆದ್ಯ ಕರ್ತವ್ಯವಾಗಿದೆ.



# ಕೇಳಿ ನುಡಿ ಕಂಡು ನಡೆ
# ಓ ಕನ್ನಡ ಕಂದಾ

೧

ಕೇಳಿ ನುಡಿಯುವದುಂಟು
ಈ ಕನ್ನಡಾ
ಕಂಡು ನಡೆಯುವದುಂಟು
ಈ ಕನ್ನಡಾ

ಕಿವುಡಾಗಿ ನುಡಿಯುವದು
ಕುರುಡಾಗಿ ನಡೆಯುವದು
ಮೊರೆಯೊ ! ಬೇಡೆನ್ನುವದು
ಈ ಕನ್ನಡ.

ಬಾಯ್ಮುಚ್ಚಿ ಬದುಕುವದು
ಕಾಲ್ಕಟ್ಟಿ ಕೂಡುವದು
ಯಾವ ಬಾಳೆಂಬುವದು
ಈ ಕನ್ನಡ.

ಬೈಯ್ಯುವದು ಕೃತ್ಯವೋ ?
ಗೊಂದಲವು ನೃತ್ಯವೋ ?
ತಲೆ ಹಾಕಿರೆನ್ನುವದು
ಈ ಕನ್ನಡ.

ನಾಲಿಗೆಯಲೆರಡೊಂದು
ಎದೆಯಲ್ಲಿ ಬೇರೊಂದು
ಶೂಲಿ ಸಾಕೆನ್ನುವುದು
ಈ ಕನ್ನಡ.

ಯಾಕೇನೊ ಹುಟ್ಟಿದ್ದೆ
ಎಂದಾರೆ ಸಾವು ಇದೆ
ಅಳಿವುಳಿವು ಒಂದೆನದು
ಈ ಕನ್ನಡ.

ಭೂತವನು ಮೆಟ್ಟುವುದು
ಭಾವವನು ಕಟ್ಟುವುದು
ಕಂಗಳರ ಕಣವಲ್ಲ
ಈ ಕನ್ನಡ.

ತಮ ವಿಷಮ ತಿತ್ತಿಮರು
ಕೈಲಿ ಡಾಮರ ಡಮರು
ಬರಲಿ ಬೆದರುವುದೇನು
ಈ ಕನ್ನಡ.

ಚದುರು ಸೊಲ್ ಗುಲ್ಲಲ್ಲ–
ಎಚ್ಚರಿರುವನು ಬಲ್ಲ
ಗಳಪುವಾಗಿಳಿಯಲ್ಲಿ
ಈ ಕನ್ನಡ.

ಎಣ್ಮೈಯ ಗುರುವಿಗೋ
ಅವನ ಕಣ್ತೆರವಿಗೋ
ನಮೋನಮೋ ನಮಿಸುವುದು
ಈ ಕನ್ನಡ.

ಕಣ್ತೆರೆಯದ ಜನ ಕನ್ನಡವೆಂತು?
ಒಂದಾಗದೆ ತಾ ಮುನ್ನಡೆ ಎಂತು? ॥ಪಲ್ಲ॥

ಭೇದದ ಮೂಲಕೆ ಅಭೇದ ಉಂಟು
ವಿಶೇಷ ಸಾಮಾನ್ಯಕೆ ಇದೆ ಗಂಟು
ಹೆಣಿಗೆಯ ಕುಸುರಿಗೆ ಹೆಸರೇನಂಟು
ಮೊಳಕೆ ಒಡೆಯುವದೆ ಮಲ್ಲಿಗೆಯುಂಟು
ಮಾಮರದಲಿ ಕೋಗಿಲ ಕೂಗುವದು
ಸುಗ್ಗಿಯ ತೊಟ್ಟಿಲವನು ತೂಗುವದು
ದೇವಮುಹೂರ್ತವು ಬಂದಿದೆ ತಮ್ಮಾ
ಹೃತ್ ಸಂಬಂಧವು ನಮ್ಮಾ ನಿಮ್ಮಾ.

ಸತ್ಯೋದ್ಧಾರಕ ನಿತ್ಯಪ್ರತಿಷ್ಠ
ವಿಜ್ಞಾನಿಯೆ ಉತ್ತಿಷ್ಠೋತ್ತಿಷ್ಠ
ನರಸಿಂಹಾಸನ ಒಡೆನುಡಿಯುವದು
ನವರತ್ನವು ಕಾಂತಿಯ ಕುಡಿಯುವದು
ಅನೇಕಾಂತ ಏಕಾಂತದ ಶೀಲ
ಕೀಲಕೀಲದಲಿ ನೀರದ ನೀಲ.
ರಾಜ್ಯೋದಯ ದಿನ ಉದಿಸಿದೆ ಮತ್ತೆ
ನಿದ್ರಿಸುವೀ ಜನ ಕಣ್ಮುಚ್ಚುತ್ತೆ
ಕಾಣದ ಕನ್ನಡ ಕನವರಿಸುವದು
ಮಹಿಶೂರರ ಕಂಡೂ ಮರೆಸುವದು

ಇಲ್ಲದ ಮೇರೆಯನೇ ಮೆರೆಸುವದು
ಇದ್ದ ಗದ್ದಲಕೆ ಕಲೆ ಬೆರೆಸುವದು
ಕರ್ಣದ ನಾಟಕ ಕೇಳದ ಪಾತ್ರ
ಕಣ್ಣಿನ ಆಟವ ನೋಡಲಪಾತ್ರ !

ರವಿಗೂ ಸೋಮಗು ಜಗಳವ ಹಚ್ಚಿ
ಮಹಿತಲೆ ತಿರುಗುವವೊಲು ಕಣ್ಮುಚ್ಚಿ
ಕತ್ತಲೆ ಬೆತ್ತಲೆ ಎನವಳು ಹುಚ್ಚಿ
ಬೆಳಕನು ಕಾಣಳು ತಾ ಎವೆಬಿಚ್ಚಿ
ಬೆಳಕಿನ ಮಾತಿಗೆ ಬೆಡಗೆನ್ನುವರೇ ?
ಬಿನ್ನಾಣಕೆ ಮೈ ಮಡಗೆನ್ನುವರೇ ?
ತನ್ನರಿವಿನ ಗುರುವಿನ ಮಾಲಿಂಗ
ಜಂಗಮವನೆ ಎರೆದಿದೆ ಸರ್ವಾಂಗ
ಜ್ಯೋತಿ ಜ್ಯೋತಿಗೂ ತನ್ನದೆ ಜಾತಿ
ಕೂಜಿಸುತಿದೆ ಪೂರ್ಣದ ಆಕೂತಿ

ಶರತ್ಸಮಯದಲಿ ಶಾರದೆ ಬಂದು
ಕವಿಮಂಡಲವನು ಗೋಷ್ಠಿಗೆ ತಂದು
ಧಾರವಾಡ ಹೂಬಳ್ಳಿಯ ಬೆಳೆಸಿ
ನವಕಾಲಕೆ ಆಮಂತ್ರಣ ಕಳಿಸಿ
'ಸಹನಾವವತು' ಪಠಿಸುವಳಣ್ಣಾ
ಬೆಳಕಿಗೆ ಕಂಡಿವೆ ಹೊಸ ಹೊಸ ಬಣ್ಣಾ.

—ವರಕವಿ ಅಂಬಿಕಾತನಯದತ್ತ.





# ಕನ್ನಡ ದೇವಿಯ ಪೂಜೆ

ಕವಿ

ಪೂಜೆಮಾಡಲು ತಾಯೆ ನಾವು ಬಂದಿಹೆವು...
ಆದರೇನಿನಿತೊಂದು
ಓಜೆಗೆಟ್ಟಿಹುದೇಕೆ ನಿನ್ನ ಸಿರಿಮೊಗವು—
ತ್ರೈಜೆಸ್ಸದ ವಲಯಗಳು ಮಾಯವಾಗಿಹವು—
ತಾಯೆ... ಅಲ್ಲವೇನಮ್ಮ ನೀ ನಮ್ಮ ದೈವತವು ?

ಕಂಬನಿಯು ಹರಿದು ಕಂದಿರುವ ಕೆನ್ನೆಗಳು......
ಕರುಣೆ ನೆಲೆಮಾಡಿ ನಿಂತಿರುವ ಕಣ್ಣುಗಳು......
ಸಹಿಸದೊಳಗಿಬ್ಬೆನಲಿ ಕುದಿ ಕುದಿವ ಕರಳು......
ದೈನ್ಯಭಾವದಲಿ ಸೊರಗಿರುವ ಅಂಗಗಳು !
ಎನಿತೊಂದು ಭಾವವೈಭವ ರೂಪ ನಿನ್ನದು
ನಾವಂದು ಕಂಡ ಚೆಲುವೆ ಕಾಣದಿಹುದು !
ಪೂಜೆ ಮಾಡಲಿಕ್ಕೆಂದು ನಾವು ಬಂದಿಹೆವಮ್ಮ,
ಪೂಜೆಗೆಂದೆ ನಾವು ಬಂದಿಹೆವು ತಾಯೆ !

# ಕನ್ನಡ ತಾಯಿ

ಆರಯ್ಯ ನನ್ನನ್ನು ಪೂಜಿಸಲು ಬಂದವರು ?
ನೀವಿಂದು ನನ್ನನ್ನು ಗುರುತಿಸಿದಿರಾ ? ಆರು ?
ಓ— ನೀವು ಕವಿಗಳು ಹಿಂದೆ ಭಾವದೊಳೆ ನನ್ನ ರೂಪವ ಕಲ್ಪಿಸಿದಿರಿ......
ಕಾವೇರಿ ಗೋದೆಯುರು ವೆಮ್ಮೆದೊಳಿವ ತಾಯೆಂದು ಹಾಡಿ ಹಿಗ್ಗಿದಿರಿ !
ನಿಮ್ಮ ಭಾವವ ಬರುಡು ಗಣ್ಣಿನಲಿ ನನ್ನ ವಾಸ್ತವ ರೂಪ ಕಾಣಲಿಲ್ಲ—
ಪೆರರ ಬಲುಮೆಗೆ ಸಿಕ್ಕು ಕೊರಗುತ್ತ ನಡೆದುದನು ನೀನರಿಯಲಿಲ್ಲ !
ಈಗಲಾದರು ನಾನು ಕನ್ನಡದ ದೇವಿಯೇ ?
ನನಗಿರುವ ಹೆಸರು ಏನೆಂಬುದರಿತಿಲ್ಲವೇ ?
ನೀವು ಕವಿಗಳು ನಿಮ್ಮ ಭಾವನೆಯೊಳೆ ಇಹಿರಿ !
ನಿಜ ಭಕ್ತರೆದುರು ದೇವತೆಯನಿಸಿ ನಿಂದು—
ಪೂಜೆಮಾಡಿಸಿ ಕೊಳಲು ನನಗೆ ಮನ ಎಲ್ಲಿಂದು !
ನೂರಾರು ವರ್ಷದ ಚರಿತ್ರೆಯಲಿ ನನಗಿಲ್ಲಿ
ಮೋರೆಯಿದ್ದಿತೆ, ದೇಹವಿದ್ದಿತೆ ಊಹುಂ ಇರಲಿಲ್ಲ !
ಆರಾರೊ ನನ್ನ ರೂಪವ ಕನಸಿನಲಿ ಕಂಡು ಹೆಮ್ಮೆಯೊಂದಿದರು......
ಮೇರೆ ಇದ್ದ ಆ ರೂಪವನು ತೆರೆದು ತೋರಿಸಲು
ಎನಿತೊಂದು ಕರ್ಮವಹಿಸಿದರು— ಧ್ಯಾನ–
ಜಪಗಳಲಿ ಬದುಕ ಸವೆಸಿದರು !
ಅವರ ಧ್ಯಾನವ ಲೋಕವಲಿ ನನ್ನಾಕೃತಿಯು ಪೂರ್ತಿಗೊಂಡಿಹುದ.—
ನೀವೆಲ್ಲ ಭಕ್ತರದೆ ಭಾವನೆಯುಲೆನ್ನನ್ನು ಪೂಜಿಸಲು ಬಂದಿರುವಿರಿಂದು !
ಭಕ್ತರೆದೆಯಲ್ಲಿರುವ ನನ್ನ ಸಂಪೂರ್ಣ ರೂಪ
ವ್ಯಕ್ತ ಲೋಕನಲಿ ಬಂದಿರುವುದೇನಯ್ಯ ಭೂಪ !

ನಿನ್ನ ಮುನ್ನಿನ ನಾಮ ಮರಳಿದೊರೆಯುವುದೆಂಬ
ದೂರದಾಸೆಯು ತೋರುತಿಹುದು......
ನನ್ನೊಡಲ ಶಕಲಗಳು ಅನ್ಯರಾಟಕೆ ಸಿಕ್ಕಿ
ನನ್ನ ಮಕ್ಕಳ ಬಳಗ ಬಿಟ್ಟು ದೂರಿಹುದು !
ಇದ್ದ ದೇಹವ ಸುತ್ತಿ ಗುದ್ದುತಿದೆ ಅನ್ಯಶಕ್ತಿ......
ಗುದ್ದಲಿಯೊಳಗಿಯುತಿದೆ, ಕೊಡಲಿಯಿಲ ಕಡಿಯುತಿದೆ ಆಕ್ರಮಣ ಭಾವರಕ್ತಿ !

ಸ್ವಾಯತತೆಯ ಕೊಟ್ಟುಬೇರೆನಾನೆಂದರೂ
ಆಳುವವರ್ಗೆ ನನ್ನ ಅರಿಕೆಯಿಲ್ಲ— ನನ್ನ
ಪೂರ್ಣರೂಪವನವರು ಕಂಡವರೆ ಅಲ್ಲ
ಅಧಿಕಾರಲೋಭಿಗಳು, ಪೂಜೆ ಬೇಕಿಲ್ಲಿ— ಎನ್ನುವರು—

' ಆಳಲೊಂದಿಷ್ಟು ಎಡೆ ನಮಗಿದ್ದರಾಯಿತೆಲ್ಲ !
ನನ್ನನೋವನೆಂದು ನೋಡರವರು—
ನನ್ನ ಕಳವಳದುಸಿರು ಕೇಳರವರು !
ಪೂರ್ಣರೂಪವದೆನ್ನದು—ಅಳಿಯಾಸೆ—
ಗಣ್ಣಿಗಳಿಗೆಂತು ಕಾಣುವುದು ?
ನನ್ನ ಮಂತ್ರವನೆಂದು ಜಪಿಸಿದವರಲ್ಲ —ಅಳಿಕೆಯ
ಆಸನದ ಆಭಾಸವೆ ! ಅವರ್ಗೆ ಬೆಲ್ಲ !
ನನ್ನ ಮೈಸುತ್ತೆಲ್ಲವು ಗಾಯ ನೋವು
—ಇಂತಿರ್ದ
ನನ್ನನ್ನು ಪೂಜಿಸಲಿಕ್ಕೆಂದು ಬಂದಿಹಿರಿ ನೀವು !

## ಕವಿ

ತಾಯ ಕಳವಳದ ನುಡಿ ಹೃದಯವನು ಕದಡಿತ್ತು
ದೇವತೆಯ ಅರೆರೋಹು ಭಾವನೆಯ ಕೆಣಕಿತ್ತು;
ಕಣ್ಣ ಹನಿ ತುಳುಕಿತ್ತು, ಕೊರಳ ಸೆರೆ ಬಿಗಿದಿತ್ತು
ಮಾತುಗಳೆ ಹೊರಡದಂತಾಯ್ತು—
ಆದರೂ
ಎದೆಯ ಶಿಲೆಯ ಮಾಡಿ ತಾಯಿಗೆ ನುಡಿದೆ ನಿಂತು !
'ಹೇಗಾದರು ಇರು ಎಂತಾದರು ಇರು ನಾನು ನಿನ್ನ ಪೂಜಾರಿ;
ನಿನ್ನ ಮಹಿಮೆಯಂ ಬಲ್ಲೆನು ತಾಯೇ ನಿನ್ನ ಸತ್ವವಿದೆ ಭಾರಿ !
ಇಲ್ಲದ ತನುವನು ತಂದುಕೊಂಡು ನಿಂತಿರುವೆ ನೀನು ಚಲದಿಂದ
ಎಲ್ಲ ಮೈಯಿಂದ ಪೂರ್ಣಳಾಗುವೆಯೆ ನಿನ್ನಿಚ್ಛೆಯ ಬಲದಿಂದ ॥
ಪೂಜೆಗೈಯುವುದು ನಮ್ಮ ಕರ್ಮ ಹೇಗಾದರು ನಿಂತಿರು ನೀನು—
ಪೂಜಿಸಿ ನಿನ್ನನ್ನು ತಣಿಸುವೆವಾವು ಕಳವಳದ ನಿನ್ನ ಮೂರ್ತಿಯನು

ಜಯ, ಜಯ, ಜಯ, ಜಯ, ಕನ್ನಡ ದೇವಿ—
ನಿನ್ನನುಗ್ರಹದ ರೂಪವನಾಶಿಪೆವು—
ನಮ್ಮಯ ಭಾಗ್ಯವಿಧಾತನು ನಿನ್ನನು
ಸುಮ್ಮನಿದ್ದು ನೋಡನೆಂದು ನಂಬಿಹೆವು
ಪೂಜೆ ಮಾಡಲಿಕೆಂದು ನಾವು ಬಂದಿಹೆವು
ಪೂಜೆಯನು ಸಲಿಸಿಕೊಳು ಇರಲೆಮಗೆ ತಣಿವು— ಇರಲೆಮಗೆ ತಣಿವು !

—ಕವಿಭೂಷಣ ಬೆಟಗೇರಿ ಕೃಷ್ಣಶರ್ಮ

---




# ಕವಿ ಕಂಡ ದೀಪಾವಳಿ

ಕಣ್ಣಾಲಿಗಳಲಿ
ಕೊಳ್ಳಿಪಂಜು ಹಚ್ಚಿ,
ಹಣೆಹಲಗೆಯಲಿ
ಸ್ವಾಗತದ ರೇಖಾ ಚಿತ್ರ ಎಳೆದು,
ಗುಡಿಯ ಹೊರಮೈ
ಗೋಡೆಗೆ ಸುಣ್ಣ ಬಳಿದು
ಕೆಮ್ಮಣ್ಣ ಎಳೆ ಎಳೆದು
ಶ್ರೀಕಾರ ಬರೆದಿದೆ
ಬರಿ ನಿರಾಕಾರ.
ನಲ್ಲಿಯಲಿ ನೀರಿಲ್ಲ
ಬರುವ ಮುಕ್ಕು ನೀರಿಗೆ
ನೆರೆಹೊರೆಯ ಪರದಾಟ
ಕಾಳಸಂತೆಯಲಿ,
ಸರದಿಯಲಿ
ಸಕ್ಕರೆಯ ಮಾರಾಟ
ಸುಕ್ಕುಗಟ್ಟಿದ ಕ್ಯಾಮಾರಿ
ಎತ್ತಿದೆ ಆರುತಿ.

ಬೀದಿ ಬೀದಿಯಲಿ
ನಿಂತಿರುವ ಹತ್ತಿ ಆರುವ
ದೀಪ—
ನಂದಾದೀಪಗಳ
ಮಂದವೃಷ್ಟಿಯು
ಶಾಪ—
ದಾಂಗುಡಿ ಇಟ್ಟ
ನರಕಾಸುರನ
ವಿಕೃತ ರೂಪ—.
ನೀನು ಕಂಡೆಯಾ ದೀಪಾವಳಿ.
ಇರಲಿ—
ಬುಗುರೆ ತಿರುಗಲಿ,
ಸತ್ಯದ ಪತ್ತೆಯಾದೀತು
ಸಿ. ಐ. ಡಿ. ಗೆ—
ನಿನಗೇಕೆ ಇದರ ಗೋಜು
ವರ್ಷಕ್ಕೊಮ್ಮೆ ಬಂದು ಹೋಗು.

—ಶ್ರೀನಿವಾಸ ಕುಲಕರ್ಣಿ
ಧಾರವಾಡ

# ನಾವು ಮತ್ತು ನಮ್ಮ ಮಕ್ಕಳು

ಶ್ರೀ ಸಿ. ಕೆ. ವಾಸುದೇವರಾವ್, ಎಂ. ಏ., ಬಿ. ಟಿ., ಡಿ. ಎಂ. ಪಿ.

[ 'Child is the father of Man'—ವರ್ಡ್ಸ್‌ವರ್ತ್ ಕವಿಯು 'ಮಗುವು ಮಾನವನ ತಂದೆ' ಎಂದಿದ್ದಾರೆ. ಮಕ್ಕಳನ್ನು ಚೆನ್ನಾಗಿ ಬೆಳೆಸಿ-ಪೋಷಿಸಿದರೆ ಅವರು ಉತ್ತಮ ಮಾನವರಾಗುತ್ತಾರೆ; ಇಲ್ಲದಿದ್ದರೆ ದುರಾಳರಾಗಿ ಸಮಾಜಘಾತುಕರಾಗುತ್ತಾರೆ. 'ನಾವು ಮತ್ತು ನಮ್ಮ ಮಕ್ಕಳು'–ಈ ಮಾಲಿಕೆಯಲ್ಲಿ ಸುಪ್ರಸಿದ್ಧ ಮನಶ್ಶಾಸ್ತ್ರಜ್ಞರಾದ ಶ್ರೀ ವಾಸುದೇವರಾವ್‌ರವರು ನಮ್ಮ ಮಕ್ಕಳನ್ನು ಹೇಗೆ ಬೆಳೆಸಿದರೆ ಅವರನ್ನು ಉತ್ತಮರಾಗಿ ಮಾಡಬಹುದು, ಎಂಬುದನ್ನು ದೃಷ್ಟಿಯಲ್ಲಿರಿಸಿಕೊಂಡು, ಮನಶ್ಶಾಸ್ತ್ರದ ಆಧಾರದ ಮೇಲೆ ಮಾರ್ಗದರ್ಶನವನ್ನು ನೀಡಿರುತ್ತಾರೆ —ಸಂ. ]

## ಶಿಶುವಿನ ಜನನ – ತಾಯಿಗೆ ಕೆಲವು ಸಲಹೆಗಳು

ಗರ್ಭವತಿಯಾದ ಹೆಂಗಸು ಒಂದು ಮಹತ್ತರವಾದ ಕಾರ್ಯವನ್ನು ಮಾಡುವವಳಾಗಿದ್ದಾಳೆ. ಒಂದು ಹೊಸ ಮಾನವ ಜೀವವು ಹುಟ್ಟಲು ಕಾರಣಳಾಗಿದ್ದಾಳೆ. ದುರ್ಘಟನೆಗಳಿಗೆ ಅವಕಾಶ ಕೊಡದೆ ತನ್ನನ್ನು ಮತ್ತು ತನ್ನಲ್ಲಿ ಅಡಗಿಕೊಂಡಿರುವ, ಮುಂದೆ ಹುಟ್ಟುವ ಶಿಶುವನ್ನೂ ಎಚ್ಚರಿಕೆಯಿಂದ ನೋಡಿಕೊಳ್ಳಬೇಕಾದುದು ಆಕೆಯ ಮುಖ್ಯ ಕರ್ತವ್ಯ. ತನ್ನ ಶಿಶುವಿನ ಬೆಳವಣಿಗೆಯ ಛಾಯಮುದ್ರಣ ತಾನು ಗರ್ಭಧರಿಸಿದ ಕ್ಷಣದಲ್ಲಿಯೇ ನಿರ್ಧರಿಸಲ್ಪಟ್ಟಿತೆಂದು ಶಾಸ್ತ್ರಗಳು ಸಾರಿದರೂ ಎಚ್ಚರಿಕೆಗಳಿಗೆ ಹೆಚ್ಚು ವಿಷಯಗಳುಂಟು. ಒಂದು ಹೂವಿನ ಬೀಜದಲ್ಲಿ ಹೇಗೆ ಮುಂದೆ ಪ್ರಕಾಶಕ್ಕೆ ಬರುವ ಹೂವಿನ ಗುಣಗಳೆಲ್ಲ ಗುಪ್ತವಾಗಿ ಅಡಗಿಕೊಂಡಿರುವುದೋ ಹಾಗೆಯೇ ಹೆಂಗಸಿನ ಗರ್ಭದಲ್ಲಿ ಉತ್ಪತ್ತಿಯಾದ ಬೀಜವು ಕಾಲಾನುಕಾಲದಲ್ಲಿ ಒಂದು ಮಾನವ ಶಿಶುವಾಗಿ ಪ್ರಕಾಶಕ್ಕೆ ಬರುವುದು.

## ನಿನ್ನದು ಅದ್ಭುತ ಕಾರ್ಯ

ಹೊಸ ಜೀವಕ್ಕೆ ಜನ್ಮ ಕೊಡುವ ಹೆಂಗಸೇ ತಾಯಿ. ಆಕೆಯ ಕಾರ್ಯವು

ಒಂದು ಅದ್ಭುತ ಕಾರ್ಯ ವಿಧಾನಕ್ಕೆ ಸೇರಿದುದೇ ಸರಿ. ಹಾಗೆಯೇ ಆಕೆಯ ಪತಿಯು ಮತ್ತು ಮನೆಯಲ್ಲಿರುವ ಇತರ ಹಿರಿಯರು ಆಕೆಯ ಈ ಕಾರ್ಯವನ್ನು ಯಶಸ್ವಿಯಾಗಿ ಪೂರೈಸಲು ಸಹಾಯ ನೀಡುವುದು ಅವರ ಧರ್ಮ.

ಹಿಂದಿನವರು ಈ ವಿಷಯವಾಗಿ ಹೆಚ್ಚು ವಿಷಯಗಳನ್ನು ತಿಳಿಯಲು ಯುವತಿಯರಿಗೆ ಅವಕಾಶ ಕೊಡುತ್ತಿರಲಿಲ್ಲ. ಇವೆಲ್ಲವೂ ಗುಪ್ತ ವಿಷಯಗಳೆಂದು ಹೇಳುತ್ತಿರಲಿಲ್ಲ. ಮೊದಲುಸಾರಿ ಗರ್ಭವತಿಯಾದ ಹೆಣ್ಣು ಮಕ್ಕಳಿಗೆ ಇಲ್ಲಸಲ್ಲದ ದನ್ನೆಲ್ಲ ಹೇಳಿ ಅಂಜಿಕೆಯನ್ನು ಹುಟ್ಟಿಸುವುದು ವಾಡಿಕೆಯಾಗಿತ್ತು. ಪ್ರಸೂತಿಯು ಬಹಳ ಕಠಿನವಾದುದು ಎಂದು ಹೆದರಿಸುತ್ತಿದ್ದುದು ಸಾಮಾನ್ಯವಾಗಿತ್ತು. ಅಂಥ ಅಲ್ಪಸ್ವಲ್ಪ ಕಷ್ಟಗಳನ್ನು ದೊಡ್ಡದಾಗಿ ಮಾಡಿ ಹೇಳುತ್ತಿದ್ದರು. ಸ್ವಲ್ಪ ಕಷ್ಟಗಳೊದಗಿದರೆ ಅವನ್ನು ಪ್ರಾರಂಭದಲ್ಲಿಯೇ ಸೂಕ್ತ ರೀತಿಯಲ್ಲಿ ಸರಿಪಡಿಸಿಕೊಳ್ಳಬೇಕು. ಗರ್ಭಧರಿಸಿ ಸಂತೋಷವಾಗಿ ಕಾಲ ಕಳೆದು ತನ್ನ ಶಿಶುವಿಗೆ ಜನ್ಮ ಕೊಡಿಸಿದರೆ ಅದಕ್ಕಿಂತ ಅಮೋಘವಾದಘಟನೆ ಗೃಹಿಣಿಗೆ ಬೇರೊಂದಿಲ್ಲ. ಗಂಡ ಹೆಂಡಿರ ಸ್ವಚ್ಛವಾದ ವಿಶ್ವಾಸದ ಫಲವೆಂದರೆ ಇದೇ. ಇದು ಪ್ರಕೃತಿಸಹಜ ಪದ್ಧತಿಯ ಒಂದು ಕಾರ್ಯ ವಿಧಾನ.

ಹೆಣ್ಣು ಗರ್ಭವತಿಯಾದರೆ ಆಕೆಯನ್ನು ಖಾಯಿಲೆಯಿಂದ ಇರುವ ಮನುಷ್ಯರನ್ನು ನೋಡುವಂತೆ ನೋಡುವುದು ಕೆಲವು ಸಂಸಾರದಲ್ಲಿ ಕಾಣಬರುವವು. ಇದು ಸರಿಯಲ್ಲ. ಆರೋಗ್ಯದಿಂದಿರುವ ಹೆಂಗಸು ಗರ್ಭವತಿಯಾದರೆ ಆಕೆಯನ್ನು ರೋಗಿ ಎಂದು ತಿಳಿಯಬಾರದು. ಗರ್ಭ ತಾಳಿದ ಹೆಂಗಸಿನಲ್ಲಿ ಒಂದು ಹೊಸ ಚೈತನ್ಯವು ತುಂಬಿರುತ್ತದೆ. ಹೀಗೆಂದ ಮೇಲೆ ಆಕೆಯಲ್ಲಿ ಮುಂಚೆಗಿಂತಲೂ ಹೆಚ್ಚು ಸೌಂದರ್ಯವು, ಉತ್ಸಾಹವು ಚಟುವಟಿಕೆಯು ಕಾಣುವದು ಸಂದೇಹವಿಲ್ಲ.

## ಎಂದಿನಂತೆ ಕಾರ್ಯನಿರತಳಾಗಿರು

ಗರ್ಭವತಿಯಾದ ಹೆಂಗಸು ತಾನು ಯಾವತ್ತೂ ಮಾಡುತ್ತಿದ್ದ ಕೆಲಸದಿಂದ ನಿವೃತ್ತಳಾಗಲು ಅವಶ್ಯಕತೆ ಇಲ್ಲ. ದಿನಂಪ್ರತಿ ಮಾಡುತ್ತಿದ್ದ ಕಾರ್ಯವನ್ನು ನಡೆಯಿಸಿಕೊಂಡು ಬರುವದು ಉತ್ತಮ. ಈ ನಾಗರಿಕ ಶತಮಾನದಲ್ಲಿ ಯಾರಿಗೂ ಕಾರಣವಿಲ್ಲದ ಅಂಜಿಕೆಗೆ ಆಸ್ಪದವಿಲ್ಲ. ಪ್ರಸೂತಿಗೆ ಸಂಬಂಧಪಟ್ಟ ವೈದ್ಯಕೀಯ ಶಾಖೆಯು ಮುಂದುವರಿಯುವ ಶಾಖೆ. ಈ ಶಾಖೆಯು ಕಲ್ಪಿಸಿ ಕೊಟ್ಟಿರುವ ಅನುಕೂಲತೆಗಳು, ಸಿದ್ಧತೆಗಳು ಹಿಂದಿನ ಕಾಲದಲ್ಲಿ ಸ್ತ್ರಿಯರಿಗೆ ಇದ್ದಿಲ್ಲ. ಈಗಿನ ಕಾಲದ ಸ್ತ್ರೀಯರು ನಿಜವಾಗಿಯೂ ಅದೃಷ್ಟಶಾಲಿಗಳೇ ಸರಿ.

## ವೈದ್ಯಕೀಯ ಕೇಂದ್ರಕ್ಕೆ ಭೆಟ್ಟಿ ಕೊಡುವದು ಉತ್ತಮ

ಸಾಮಾನ್ಯವಾಗಿ ಗರ್ಭವತಿಯಾದ ಹೆಂಗಸು ಆಗಾಗ್ಗೆ ತಮಗೆ ಇಷ್ಟವಿದ್ದ

ಓರ್ವ ವೈದ್ಯರಲ್ಲಿ ತಮ್ಮ ಆರೋಗ್ಯದ ಬಗ್ಗೆ ಸಲಹೆಗಳನ್ನು ಕೇಳುವದು ಉತ್ತಮ. ಶಿಶುವು ಹುಟ್ಟುವುದಕ್ಕೆ ಮುಂಚೆ ಗರ್ಭಿಣಿಯರಿಗೆ ಸಲಹೆಗಳನ್ನು ಕೊಡುವ ಉದ್ದೇಶವಾಗಿ ಪಟ್ಟಣಗಳಲ್ಲಿ ಮಾರ್ಗದರ್ಶನ ಕೇಂದ್ರಗಳು ಏರ್ಪಾಡಾಗಿರುವವು. ಹಣವಂತರು, ಮಧ್ಯಮವರ್ಗದವರು ಹಾಗೂ ಬಡವರು ಈ ಕೇಂದ್ರಗಳಲ್ಲಿ ಉಚಿತವಾಗಿ ಸಹಾಯವನ್ನು ತೆಗೆದುಕೊಳ್ಳಬಹುದು. ಯಾವ ದುರ್ಘಟನೆಗಳಿಗೂ ಸೋಲದೆ ಗರ್ಭಿಣಿಯು ಮತ್ತು ಆಕೆಯಲ್ಲಿ ಅಡಗಿಕೊಂಡಿರುವ ಶಿಶುವೂ ಆರೋಗ್ಯದಿಂದ ಕಾಲಕಳೆಯಲು ಹೆಚ್ಚಿನ ಅವಕಾಶಗಳನ್ನು ಈ ಕೇಂದ್ರಗಳು ಕಲ್ಪಿಸುವವು.

## ನಿಜಾಂಶಕ್ಕೆ ಬೆಲೆ ಕೊಡು— ಅಂಜಿಕೆಯನ್ನು ತೊಲಗಿಸು

ಸಾಮಾನ್ಯವಾಗಿ ಹೆಂಗಸು ಗರ್ಭವತಿಯಾದಳೆಂದರೆ ಕೆಲವು ಸೂಚನೆಗಳಿಂದ ತಿಳಿಯುತ್ತಾಳೆ. ಸಂದೇಹವಿದ್ದಲ್ಲಿ ವೈದ್ಯಕೀಯ ಪರೀಕ್ಷೆಯು ಅತಿ ಅವಶ್ಯ. ವೈದ್ಯರು ಇಡೀ ದೇಹವನ್ನು ಪರೀಕ್ಷಿಸುವರು. ಮೂತ್ರ ಪರೀಕ್ಷೆ ಮಾಡುವರು. ರಕ್ತ ಒತ್ತಡವನ್ನು ಪರೀಕ್ಷೆ ಮಾಡುವರು. ಗರ್ಭಕೋಶದಲ್ಲಿ ಶಿಶುವು ಬೆಳೆಯುತ್ತಿದ್ದ ವಿಷಯವನ್ನು, ಶಿಶುವಿನ ಹೃದಯ ಸ್ಪಂದನ್ನು ಪರೀಕ್ಷಿಸುವರು. ಸಂದೇಹವೆಲ್ಲವನ್ನೂ ಹೋಗಲಾಡಿಸುವಂತೆ ಪ್ರಶ್ನೆಗಳ ಮೂಲಕ ನಿಜಾಂಶಗಳನ್ನು ತಿಳಿದುಕೊಳ್ಳುವದು ಪ್ರತಿಯೊಂದು ಹೆಂಗಸಿನ ಹಕ್ಕು.

ನಿಜಾಂಶಗಳನ್ನು ತಿಳಿದುಕೊಂಡರೆ ಸಂದೇಹವು ನಮ್ಮನ್ನು ಬಿಟ್ಟು ಓಡಿಹೋಗುವವು. ಸಂದೇಹ ಮತ್ತು ಅಜ್ಞಾನವೇ ಅಂಜಿಕೆಗೆ ಮೂಲಭೂತವಾದವುಗಳು. ಅಂಜಿಕೆಯು ಗರ್ಭವತಿಯನ್ನು ಆವರಿಸಿದರೆ ಪ್ರಸೂತಿಯು ತಡವಾಗುವದು, ಕಷ್ಟವಾಗುವದು. ಅಂಜಿಕೆಯು ಅನಾಹುತವನ್ನುಂಟುಮಾಡುವುದು. ಮಾನಸಿಕ ಆರೋಗ್ಯವನ್ನು ನಾಶಮಾಡಲು ಮುಖ್ಯ ಹೇತುವು. ಸಂದೇಹ, ಅಜ್ಞಾನ ಮತ್ತು ಅಂಜಿಕೆ ಎಂಬ ಈ ಮೂರು ಶತ್ರುಗಳನ್ನು ಜಯಿಸುವದಾದರೆ ಗರ್ಭಿಣಿಗೆ ಕಲ್ಯಾಣವಾಗುವದು ನಿಶ್ಚಯ.

## ಹೆರಿಗೆಗೆ ಮನೆಯೇ ಸ್ವಭಾವಸಿದ್ಧವಾದ ಸನ್ನಿವೇಶವು

ಹೆರಿಗೆಯು ಎಲ್ಲ ಆಗಬೇಕೆಂಬುದರ ವಿಷಯವಾಗಿ ಕೆಲವು ಸಂಸಾರಗಳಲ್ಲಿ ತೀವ್ರ ಚರ್ಚೆ ನಡೆಯುವದು. ಹೆಚ್ಚು ಚರ್ಚೆಯು ಹೆಚ್ಚು ವಿಚಾರಕ್ಕೆ ಕಾರಣವಾಗುವದು. ಇದು ಗರ್ಭಿಣಿಯ ಮನೋಶಾಂತಿಯನು ತತ್ತರಿಸಬಹುದು. ಆದುದರಿಂದ ಹೆಚ್ಚು ಚರ್ಚೆಗೆ ಆಸ್ಪದ ಕೊಡದಂತೆ ಒಂದು ತೀರ್ಮಾನಕ್ಕೆ ಬರುವದು ಲೇಸು. ಗರ್ಭಿಣಿಯ ಆರೋಗ್ಯ ಪರಿಸ್ಥಿತಿಯು ಸಮರ್ಪಕವಾಗಿದ್ದರೆ ತನ್ನ ಮನೆಯಲ್ಲಿಯೇ ಹೆರಿಗೆ ಆಗುವದು ಅತಿ ಉತ್ತಮವಾದುದು. ಹೊಸದಾಗಿ ಹುಟ್ಟುವ ಶಿಶುವಿಗೆ ಮನೆಯೇ ಸ್ವಭಾವಸಿದ್ಧವಾದ ಸನ್ನಿವೇಶ.

ಜನಿಸಿದ ಶಿಶುವನ್ನು ತಾಯಿಯಾದವಳು ಕಾಪಾಡುವ ಕ್ರಮವನ್ನು ಸುಲಭರೂಪದಲ್ಲಿ ಜಾರಿಗೆ ತರಲು ಶಕ್ತಳಾಗುವಳು ದವಾಖಾನೆಯಲ್ಲಿ ಎಲ್ಲ ತರಹದ ಚಟುವಟಿಕೆಗಳಿಗೆ ಹೆಚ್ಚು ಆಸ್ಪದವಿರುವುದಿಲ್ಲ. ತನ್ನ ಪತಿಯು ತನಗೆ ತಿಳಿದ ಸಲಹೆಗಳನ್ನು ಕೊಡಲು ಮನೆಯಲ್ಲಿ ಸಾಧ್ಯವೇ ಹೊರತು ದವಾಖಾನೆಯಲ್ಲಿ ಅಲ್ಲ. ಶಿಶುವಿನ ಬೆಳವಣಿಗೆಗೆ ಅತಿ ಮುಖ್ಯವಾದುದೆಂದರೆ ಮಾತಾಪಿತೃಗಳ ವಿಶ್ವಾಸ. ಈ ವಿಶ್ವಾಸವು ಹೆಂಗಸು ಗರ್ಭ ಧರಿಸಿದೊಡನೆ ಮೂಡುವದು. ಮೂಡಿದ ವಿಶ್ವಾಸವು ಅಭಿವೃದ್ಧಿಯಾಗಬೇಕಾದರೆ ಸ್ವಭಾವಸಿದ್ಧವಾದ ಸನ್ನಿವೇಶವೆಂದರೆ ಮನೆ.

ಯಾವುದೇ ಕಾರಣದಿಂದ ಹೆರಿಗೆಯು ದವಾಖಾನೆಯಲ್ಲಿ ಆಗಬೇಕಾದರೆ ಹಾಗೆಯೇ ತಿರ್ಮಾನಕ್ಕೆ ಬರುವುದು ಒಳ್ಳೆಯದು. ಒಟ್ಟಿನಲ್ಲಿ ಹೇಳುವುದಾದರೆ ಇಕ್ಕಟ್ಟಿನಲ್ಲಿ ಮನಸ್ಸನ್ನು ಸಿಕ್ಕಿಸದೆ ನಿಜಾಂಶಗಳಿಗೆ ಬೆಲೆಕೊಟ್ಟು ಒಂದು ನಿಷ್ಕರ್ಷೆ ಮಾಡುವದು ಆರೋಗ್ಯವನ್ನು ಸೂಚಿಸುತ್ತದೆ.

## ಎದೆಯ ಹಾಲು ಕೊಡಬೇಕೇ ಬೇಡವೆ : ಇದನ್ನು ತಿರ್ಮಾನಿಸು

ಗರ್ಭವತಿಯಾದ ಹೆಂಗಸು ಗರ್ಭಿಣಿಯಾಗಿರುವ ಮತ್ತೊಂದು ವಿಷಯದಲ್ಲಿ ಸ್ಪಷ್ಟವಾದ ತಿರ್ಮಾನಕ್ಕೆ ಬರುವುದು ಉತ್ತಮ. ಜನಿಸಿದ ಮೇಲೆ ಶಿಶುವಿಗೆ ತನ್ನ ಎದೆಯ ಹಾಲುಕೊಟ್ಟು ಸಾಕಬೇಕೆ ಬೇಡವೇ ಎಂಬುದು ಒಂದು ತರಹ ಸಮಸ್ಯೆ ಯಾಗಿರುವದು. ಸೊಗಸುಗಾರ ಹೆಂಗಸು ತನ್ನ ಎದೆಯ ಹಾಲು ಕೊಟ್ಟು ತನ್ನದೇ ಶಿಶುವನ್ನು ಸಾಕಲು ಸಮ್ಮತಿ ಪಡುವುದಿಲ್ಲ. ಇದು ಸರಿಯಾದುದಲ್ಲ. ದೇಹದಲ್ಲಿ ಆರೋಗ್ಯವಿದ್ದು ಸ್ತನಗಳ ತೊಟ್ಟು ಸರಿಯಾದ ಗಾತ್ರವಿದ್ದಲ್ಲಿ ತನ್ನ ಶಿಶುವಿಗೆ ತನ್ನ ಎದೆಯ ಹಾಲು ಕೊಟ್ಟು ಸಾಕುವದು ಶಿಶುವಿಗೂ ಮತ್ತು ತಾಯಿಗೂ ಆರೋಗ್ಯಕರವಾದುದು. ಶಿಶುವು ತನ್ನ ಮಾತೆಯ ಎದೆಯ ಹಾಲು ಕುಡಿಯುವುದು ಅದರ ಜನ್ಮಸಿದ್ಧವಾದ ಹಕ್ಕು. ಅಂದರೆ ಮಾನವ ಶಿಶುವಾಗಿ ಹುಟ್ಟಿದುದರಿಂದ ಬಂದ ಹಕ್ಕು. ಈ ಹಕ್ಕನ್ನು ಕಾಪಾಡುವುದು ಪ್ರತಿಯೊಂದು ತಾಯಿಯ ಕರ್ತವ್ಯ. ಈ ಹಕ್ಕನ್ನು ಕಾಪಾಡುವುದರಿಂದ ತಾಯಿಗೆ ಲಾಭವೇ ಹೊರತು ನಷ್ಟವಿಲ್ಲ. ಶಿಶುವು ಸ್ತನಗಳನ್ನು ಚೀಪುವದರಿಂದ ತಾಯಿಯ ಗರ್ಭಾಶಯದ ಮೇಲೆ ಒಂದು ಪರಿಣಾಮ ಉಂಟಾಗುವುದರಲ್ಲಿ ಸಂದೇಹವಿಲ್ಲ. ಗರ್ಭಕೋಶವು ಹೆರಿಗೆಯ ಬೇನೆಯಿಂದ ಪ್ರಮಾಣದಲ್ಲಿ ಹೆಚ್ಚಾಗಿರುವುದು. ಇದು ಮುಂಚಿನ ಅಳತೆಯ ಪ್ರಮಾಣಕ್ಕೆ ಹಿಂತಿರುಗಬೇಕಾದರೆ ಶಿಶುವು ಸ್ತನಗಳನ್ನು ಚೀಪುವುದರಿಂದ ಆಗುವ ಸುಲಭ ಕಾರ್ಯ. ಶಿಶುವಿಗೆ ತಾಯಿಯ ಮೇಲೆ ವಿಶ್ವಾಸ ಹೆಚ್ಚುವುದಕ್ಕೂ ಇದೇ ಕಾರಣ. ತಾಯಿಗೆ ತನ್ನ ಶಿಶುವಿನಲ್ಲಿ ವಿಶ್ವಾಸ ಹೆಚ್ಚುವುದಕ್ಕೂ ಇದೇ ಕಾರಣ.

ಶಿಶುವಿಗೆ ತಾಯಿಯ ಎದೆಯಹಾಲು ಅತಿ ಮುಖ್ಯವಾದ ಆಹಾರ. ಪರಿಶುದ್ಧವಾದ ಆಹಾರ. ಇದರಲ್ಲಿ ಶಿಶುವಿನ ಬೆಳವಣಿಗೆಗೆ ಬೇಕಾದ ಗುಣಗಳಿರುವವು. ಶಿಶುವು ತಾಯಿಯ ಹಾಲನ್ನು ಕುಡಿಯಲು ತವಕ ಪಡುತ್ತದೆ. ಸ್ತನಗಳನ್ನು ಮುಟ್ಟುವುದರಿಂದ ಶಿಶುವಿಗೆ ಮೊಟ್ಟಮೊದಲು ಮಾನವ ಸಂಸ್ಪರ್ಶವಾಗುವುದು. ಈ ಸಂಪರ್ಕಕ್ಕೆ ಯಾವ ತಾಯಿಯು ಅಡ್ಡಿ ಬರಬಾರದು.

ಗರ್ಭವು ಬೆಳೆಯುತ್ತಾ ನಾಲ್ಕುವರೆ ತಿಂಗಳ ಸಮಯದಲ್ಲಿ ಮೊಟ್ಟ ಮೊದಲು ಶಿಶುವು ಚಲಿಸುವುದು ಗರ್ಭವತಿಯಾದ ಹೆಂಗಸಿಗೆ ತಿಳಿಯ ಬರುವುದು. ಶಿಶುವು ಯಾವಾಗ ಜನಿಸುವದೆಂದು ಉತ್ಸಾಹದಿಂದ ಎದುರು ನೋಡುವದಕ್ಕೆ ಪ್ರಾರಂಭಿಸುವಳು. ನೆರೆ ಹೊರೆಯಲ್ಲಿ ಸಣ್ಣಪುಟ್ಟ ಮಕ್ಕಳಿದ್ದರೆ ಅವರೊಡನೆ ಮಾತನಾಡುವುದು, ಅವರನ್ನು ನಗಿಸುವುದು, ಅವರನ್ನು ಎತ್ತಿಕೊಳ್ಳುವುದು, ಮುಂತಾದ ಕಾರ್ಯಗಳಲ್ಲಿ ಕಾಲಕಳೆಯುವುದು ಲಾಭಕರವು.

ವಿರಾಮವಿದ್ದ ಸಮಯದಲ್ಲಿ ತನ್ನ ಶಿಶುವು ಹೀಗಿರಬೇಕು, ಹಾಗಿರಬೇಕು ಎಂಬ ವಿಷಯದಲ್ಲಿ ಯೋಚಿಸುವದು ಗರ್ಭಿಣಿಯರ ಗುಣವು ಇದು ಸರಿಯಾದುದು.

* * *



ಸಂಪುಗಳ ಸುದ್ದಿ ಓದಿ ಓದಿ ಸಂಪಾದ ನಿದ್ದಿ.




ನನ್ನ ಇನ್ನೊಂದು ಬೂಟು ಎಲ್ಲಿ?



ನಾನು ಖಂಡಿತ ಚಳುವಳಿ ಸೇರ್ತೀನಿ ಕಣೋ !
...ಮುಂದೆ ಮಂತ್ರಿ ಆಗೋ ಛಾನ್ಸು :
ಕನಿಷ್ಠ ನನ್ನ ಮಕ್ಕಳಿಗಾದರೂ ಶಾಲೇಲಿ ಫ್ರಿಶಿಪ್ಪು.



ಒಂದೆಡೆಗೆ ರಕ್ಷಣೆ, ಇನ್ನೊಂದೆಡೆಗೆ ಪ್ರೋಕ್ಷಣೆ.

# ಏಕಾದಶಿ ಮಹಾತ್ಮೆ

[ ವಿನೋದ ಏಕಪಾತ್ರ ]

ಶ್ರೀ 'ಎನ್ಕೆ'




ಕಚೇರಿಯಿಂದ ದಣಿದು ಮನೆಗೆ ಬಂದ ಕೂಡ್ಲೆ ಸುರೂನೇ ಏನು. ರೇಶನ್ ಇಲ್ಲ, ಬ್ಯಾಳಿ ಇಲ್ಲ ತೂವ್ವಿ ಇಲ್ಲ ಅಂತಾ'—ಅಕ್ಕ ಸಕ್ರೆ?— ಇಲ್ಲದಿದ್ರ ಬಿಡು, ಸ್ವಸ್ಥ ಒಂದು ಮೂಲ್ಯಾಗ ರಾಮ ರಾಮಾ ಅಂತ ಉಪ ವಾಸ ಕೂಡಬಹುದು. ಬಂದಕೂಡ್ಲೆ ಅದು ಇಲ್ಲ, ಇದು ಇಲ್ಲ, ಇದು ತೀರೆದ ಇದು ತೀರೆದ ಅಂತ ನಿನ್ನ ಬಾಯಿಗೆ ಬಂದಾಂಗ ಎದುರಿಸೋದು ಬ್ಯಾಡಅನಿಸ್ತದ ನೋಡು. ಅಲ್ಲ ಹಿಂಗ ತಿಂಗಳ ಆಖೈರಕ ಸಾಮಾನ ತೀರಿಸಿಕೊಂಡು ಕೂತರ ಮಾಡಬೇಕೇನು ? ಪೈಲಾದಿಂದ ಪೈಲಾಕ್ಕ ಅಂತ ಲೆಖ್ಖ ಮಾಡಿ ಕಿಸೆ ಖಾಲಿ ಮಾಡಿಕೊಂಡು ಕೂತಿರತೇನಿ. ನಡುವೆ ಹಿಂಗಕೇಳಿದ್ರ ನಿನಗೆ Suppli-mentary budget ಎಲ್ಲಿಂದ ತರಲಿ ? ಹೌದು, ಎಷ್ಟು Sanction ಮಾಡಿರತದ ಅಷ್ಟೇ ಬಜೆಟನ್ಯಾಗ ಬಗಿಹರಿಸಿಕೊಬೇಕು— ಏನು ? ಕಚೇರಿ ಭಾಷಾದಾಗ ಮಾತಾಡ

ಬ್ಯಾಡ್ರೆ ? —ಕಚೇರಿ ಭಾಷಾ ಅಲ್ಲ ಇದು ಕನ್ನಡ ಭಾಷಾ ! ಪಗಾಕಾಸಿನ ಮುಂಜೂರಿ ಎಷ್ಟು ಇರತದ ಅಷ್ಟರಾಗ ತಿಂಗಳ ಖರ್ಚು ಮಾಡಿಕೋಬೇಕು. ಅರ್ಥಾತ್ ಹಾಸಿಗೆ ಇದ್ದಷ್ಟು ಕಾಲುಚಾಚಬೇಕು ! ಆಂ ? ನೀನು ಸ್ವಸ್ಥ ಮುಸುಗು ಹಾಕತೀಯಾ? ಹಾಕಬ್ಯಾಡ ಯಾರಂತಾರ? ಆದರ ಮುಸಕಿ ನ್ಯಾಗಿನ ಜೋಡ್ನಿ ಮಾತ್ರ ತಗೀಬ್ಯಾಡ! ...ಹುಡುಗ್ರು ಹುಪ್ಪಡಿ ಏನು ಮಾಡಬೇಕು ಅಂತಿಯಾ ?— ನೋಡು, ಸುಮ್ಮನ ಗಡಿ ಉಲ್ಲಂಘನ ಮಾಡಿದ ಚೀನಾ, ಪಾಕಿಸ್ತಾನ ದವರಹಾಂಗ ಬಡಿದಾಡಿದರ ಏನು ಬಂತು? ಒಂದು ಶ್ಯಾಣೆತನದ ಹಾದಿಹಿಡಿ !—— ಹೋಗಲಿ ಬಿಡು... ಹೌದss ಗೊತ್ತು. ನೀಯೇನು ಅಕ್ಕ ಸಕ್ರೀ ಮುಕ್ಕೀದಿ ಅಂತೀನೇನು ನಾ ಏನಾರೆ ?— ನಮ್ಮ ಕಕ್ಕ ನಾಲ್ಕದಿನ ಬಂದಿಂದ್ರ ನಿಮ್ಮ ಅಪ್ಪ ಹತ್ತುದಿನ ಧ್ವಜಹಾಕಿದ್ದನಲ್ಲ ? ಆಂ ? ಅಪರೂಥಾಂಗ ಬಂದಿದ್ನ ? ಬರ್ಲಿಬಿಡು. ಆವರ ರೇಶನ್ ದಿವಸ ಅಂತ ತಿಳೀಬಾರ ದೇನು ?— ಅಕ್ಕಿ ಬ್ಯಾಳಿ ಕಟಿಗೊಂಡು ಬರಬೇಕಾಗಿತ್ತೇನು, ಅಂತಿಯಾ ? ಹೌದ್ರು ಅಂದೆ !— ಸುಮ್ಮಸುಮ್ಮನ ಹಾಕ್ಯಾಡು ವವನಾ ಅಲ್ಲ ನೀನು, ಹಾಕ್ಯಾಡುವಾಕಿ !— ಈಗೇನು ಮಾಡೂಣ ಅಂದ್ಯಾ ? ಹಾಂಗ ಸಮಾಧಾನದಿಂದ ಸಲಹಾ ಕೇಳು. ನಾನೂ ಉಪಾಯ ಹೇಳತೀನಿ, ನೀನೂ ಉಪಾಯ ಮಾಡು. ಯಾರ ಬ್ಯಾಢ ಅಂತಾರ.

ನೋಡು ಇವತ್ತ ಅನಾಯಾಸ ಗುರು ವಾರ ಆಗೇದ ? ಒಶಿನೇ ಇಸ್ವಿಯ ಕೊನೆಯ ಗುರುವಾರ ! ಹಳೆ ವರ್ಷದ ಗುರುತು, ಹೊಸ ವರುಷದ ಸಂಕಲ್ಪ ಅಂತ ಹೇಳಿ ಗುರುವಾರ ಒಪ್ಪತ್ತು ಉಪ ವಾಸ ಯಾಕ ಮಾಡಬಾರದು ? —ಏನು ? ನಿಮ್ಮಪ್ಪ ಮೂರು ದಿವಸ ಇದ್ರು ಗುರು ವಾರ ಏಕಾದಶಿ, ಶನಿವಾರ ಕೂಡೆ ಬಂದ್ವ? ಬಹಳ ಛಲೊ ಆತು. ನೀನು ಅಪ್ಪನ ಮಗಳು ಗುರುವಾರ ಒಂದಾದರೂ ಯಾಕ ಪ್ರಾರಂಭ ಮಾಡಬಾರದು ?— ಕೇಳು ನನ್ನ ಮಾತಾರ ಪೂರಾ ಕೇಳು — ಹೌದ ಹೌದು ಅಂದೆ ! ಸೋಮವಾರದ Miss a meal ನನ್ನ ತಲೆಯೊಳಗ ಅದ ! ಅದು ರಾಷ್ಟ್ರೀಯ ಏಕಾದಶಿ !...... ನಾಯೇನು ಮಾಡ್ಲಿ ಸಾರಿ ಸಾರಿ ಹೇಳಿದೆ ನೀನೆ ನನ್ನ ಮಾತು ಕೇಳಲಿಲ್ಲ— ಗುರುವಾರ ಉಪ ವಾಸ ಮಾಡಿದರ ಸೋಮವಾರ ಮಾಡ ಬಾರ್ದು ಅಂತ ಯಾರ ಹೇಳತಾರ ? ಮತ್ತ ಸೋಮವಾರ ಒಪ್ಪತ್ತು ಏಕಾದಶಿ ಮಾಡಿ ದವರು ಗುರುವಾರ ಏಕಾದಶಿಮಾಡಿದರೂ ಸರಕಾರದವರು ಏನೂ ಮಾಡೋದಿಲ್ಲ— ಹೌದು ಇವೊತ್ತು ಗುರುವಾರ ! ಹಳೆಯ ವರುಷದ ಗುರುತು ಅಂತ ಅರ್ಧಾ ಏಕಾದಶಿ ಸುರುಮಾಡೋಣ—ಸೋಮವಾರ ಹೊಸ ವರುಷದ ಸಂಕಲ್ಪ ಅಂತ ಸುರುಮಾಡೋಣ — ಹೌದು. ಹುಡುಗರೂ ಮಾಡ್ಲಿಬಿಡು ಯಾರ ಬ್ಯಾಡ ಅಂತಾರ. ಈಗ ನೋಡು ಉಪಹಾರದಂಗಡಿ, ಊಟದಂಗಡಿ ಎಲ್ಲಾನೂ ಸೋಮವಾರ ಸಂಜೆ ಬಂದ್ ! ಅಷ್ಟುಜನ ಸೋಮವಾರದ ಉಪವಾಸ ಮಾಡತಾರಿಲ್ಲೊ ?.... ಹೂಂನ ಹಾಲು

ಹಣ್ಣು ತಗೊಳ್ಳಿ ಯಾರ ಬ್ಯಾಡಾ ಅಂತಾರ. ಅವರ ಜೊತೆಗೆ ನಾವೂ ಸಹಾನುಭೂತಿ ಯಾಕ ತೋರಿಸಬಾರದು ?— ಏಕಾದಶಿ ಉಪವಾಸ ಮಾಡಿದರ ಏನು ಬಂತ ? ಹೂಂ! ನೋಡು ಏಕಾದಶಿ efficacy ಇಷ್ಟss ಅಂತ ಕೇಳಿತೀ ಏನು?—ಪುರಾಣ ದಾಗ ಏಕಾದಶಿ, ದ್ವಾದಶಿ, ಮಹಾತ್ಮ್ಯ ಹೇಳ್ಯಾರಲ್ಲ. ಪುರಾಣದ ಮಾತು ಬಿಡು. ಸಿನೇಮಾದಾಗಾರ ನೋಡೀದ್ಯಾ ?— ನಾ ಅಂತೀನಿ ಇಂದಿನ ವೈಜ್ಞಾನಿಕ ಯುಗ ದೊಳಗ ಕೂಡಾ ಏಕಾದಶಿ ಮಹಾತ್ಮೆ ಅಷ್ಟಿಷ್ಟಲ್ಲ! ಮುಖ್ಯ ಆರೋಗ್ಯದ ದೃಷ್ಟಿಯಿಂದಂತೂ ವಾರಕ್ಕ ಒಂದುಹೊತ್ತು ಊಟ ಬಿಡೋದು ಬಹಳ ಉತ್ತಮ ಅಂತಾ ಹೇಳತಾರ. ನಮಗ ಅವಶ್ಯ ಇದ್ದದರ ಕಿಂತಲೂ ಹೆಚ್ಚಗಿ ತುಂಬತೀವಲ್ಲ ತುತ್ತಿನ ಚೀಲ. ಒಪ್ಪತ್ತಿನ ಉಪವಾಸದಿಂದ ಅದು ತಂತಾನೆ ಸರಿಹೊಂದಿಕೊಂಡು ಹೋಗತದ. ಮನುಷ್ಯ ಸದೃಢ ಆಗತಾನ. ಏಕಾದಶಿ ಯಿಂದ ಮನುಷ್ಯ ಸೊರಗತಾನ ಅಂತಿ ಯೇನು ಸಾಧ್ಯವಿಲ್ಲ! ಇದಕ್ಕ ನಿಮ್ಮ ಅಪ್ಪನೆ ಸಾಕ್ಷಿ ! ಏಕಾದಶಿಯಿಂದ ಆರೋಗ್ಯ ಕುದುರತದ ಅನ್ನಲಿಕ್ಕೆ. ಅದಕ್ಕ ನಮ್ಮ ಪೂರ್ವಜರು ಏಕಾದಶಿ ಉಪವಾಸ ಮಾಡತಾ ಇದ್ರು. ನಮ್ಮ ಆರೋಗ್ಯಕ್ಕ ಏನಬೇಕು ಅದೆಲ್ಲ ನಮ್ಮ ಧರ್ಮಶಾಸ್ತ್ರ ವಾಗಿ ಬಂದದ ನಮಗ. ರುಕ್ಮಾಂಗದನ ಕಥಿನ ತಗೊ, ಭಕ್ತ ಅಂಬರೀಷನ ಕಥಿನ ತಗೊ. ಈ ಕಥೆಗಳ ಹಿಂದ ಇರೋ ತತ್ವ ಅಂದ್ರ ಏಕಾದಶಿ ಮಹಾತ್ಮೆ !— ಆಂ ? ಹೌದು. ಒರೋಬರಿ. ಈಗಿನ ದಿನದಾಗ ಎಲ್ಲಾರೂ ಧರ್ಮಲಂಡರು ಅಂತೀಯೇನು ? ತಪ್ಪು. ನಿನ್ನ ಅಭಿಪ್ರಾಯ ತಪ್ಪು ಅಂದೆ. ಇವತ್ತಿನ ಯುಗದೊಳಗೂ ಏಕಾದಶಿ ಮಹಾತ್ಮೆಗೆ ಭಂಗಬಂದಿಲ್ಲ ಅಂತೀನಿ. ಹೇಳ್ಯಾ? ನೋಡು ನಮ್ಮ ದೇಶದೊಳಗಿನ ಆಹಾರ ಅಭಾವ ಪರಿಸ್ಥಿತಿ ಎದುರಿಸಲಿಕ್ಕೆ ಅಂತ ದೇಶಕ್ಕ ದೇಶಾನ ವಾರಕ್ಕ ಒಪ್ಪೊತ್ತಿನ ಏಕಾದಶಿ ಆರಂಭ ಮಾಡಿತು. ಅದರ ಮಹಾತ್ಮ್ಯ ಎಷ್ಟು ಅಂತ ಗೊತ್ತದ ಏನ ನಿನಗ ? ಏಕಾದಶಿ ಫಲಶೃತಿಯ ರೂಪವಾಗಿ ಅಮೇರಿಕಾದ ಗೋದಿ ಮೂರೂವರಿ ಕೋಟಿ ಟನ್!...ಖರ್ಚು ವೆಚ್ಚದ ತೊಂದರೆ ಇಲ್ಲದ ನಮ್ಮ ಸಮುದ್ರ ತೀರಕ್ಕ ಬರಬೇಕು ಅಂದ್ರ ? ಸಾಮೂಹಿಕ ಏಕಾದಶಿಯ efficacy ಅಂತಾರ ಇದಕ್ಕ ! ಹಿಂಗ ರಾಷ್ಟ್ರಕ್ಕೆ ರಾಷ್ಟ್ರವೇ ಜಾಗೃತಗೊಂಡು ಏಕಾದಶಿ ಆಚರಿಸತ ಇರೋವಾಗ ನೀನು ಇನ್ನೂ ಅಕ್ಕಿಲ್ಲ ಸಕ್ರಿಲ್ಲ ಅನ್ನೋ ರಾಗ ಎಳಿಯೋದು ಬಿಡಲಿಲ್ಲವಲ್ಲ! ರಾಷ್ಟ್ರ ಬಿಟ್ಟು ಹೊರತಾಗಿ ಇದ್ದಿಯೇನು ನೀನು?.. ಒಪ್ಪೊತ್ತಿನ ಏಕಾದಶಿ ಅಂದರ ನಿನಗ ರಾಯಪ್ಪ ನಾಯಕನ ಫರಾಳ ಅಂತ ಯಾರು ಹೇಳಿದರು ?... ಅಲ್ಲಾ ಒಂದು ದೃಷ್ಟಿಯಿಂದ ಅದೂ ಸ್ವಾಗತನ್ಯ ಅನ್ನು ! ಥಣ್ಣ ಒಂದು ತಂಬಿಗಿ ಗಂಗೋದಕ ಸೇವಿಸಿ ರಾಮ ರಾಮ ಅಂತ ರೇಡಿಯೊ ಕೇಳಿ ಕೋತ ಕೂತಬಿಟ್ಟೆ ಈ ಪ್ರಪಂಚನ ಬ್ಯಾಡಾ ಅನಿಸತದ ನೋಡು... ಹೂಂ ಅನ್ನು.

ಒಪ್ಪಿದೆ. ಈ ಬುದ್ಧಿ ಮೊದಲs ಬರ ಬೇಕಾಗಿತ್ತು. ಈಗಾದರೂ ಬಂದದಲ್ಲ ಅಪ್ಪ ಒಳ್ಳೇದು... ಏಕಾದಶಿ ಅಂದಗಳಿಗ್ಗೆ ನಮ್ಮ ಅಜ್ಜನ ನೆನಪು ಆಗತದ ನೋಡು. ಒಳ್ಳೇ ಒಂದು ಡಜನ್ ಜವಾರಿ ಬಾಳಹಣ್ಣು ತುಪ್ಪತೋವೆ ಸಜ್ಜಿಗಿ ಸತ್ಯನಾರಾಯಣ ಪ್ರಸಾದದಂಥಾದ್ದು, ಒಂದು ತಂಬಿಗಿ ಹಾಲು –ಕೇಶರಾ, ಪಿಸ್ತೆಹಾಕಿದ ಮಸಾಲಿ ಹಾಲು ! ಯಾಕ ಮಾಡಬಾರದು, ಯಾರು ಮಾಡಲಿಕ್ಕಿಲ್ಲ ಇಂಥಾ ಏಕಾದಶಿ? ಹ್ಯಾಂಗ ಏಂಭತಕ್ಕ ಸಮೀಪಿಸಿದ್ದರೂ ಆಗಿದ್ದ !... ಆದರ ಉಪವಾಸದ ಫಲ ಸಿಗಬೇಕು ಅಂದರ ಉಪವಾಸನೇ ಇರಬೇಕು. ಊಟಕ್ಕ ಒಂದು Substitute ಅಂತ, ಅದೂ better substitute ಅಂತ ಶಿರಾ ಹಾಲು ಅಂತ ಕೂತರ ಹ್ಯಾಂಗ ?... ಏಕಾದಶಿ ದುಪ್ಪಟ್ಟ ಖಾಸಿ! ನನಗೂ ಗೊತ್ತು, ಆದರೆ ಏಕಾ ದಶಿ ದಿನಾನೇ ಆಗಬಾರದು ಅದು. ಪಾರಣಿ ದಿನ ಆಗಬೇಕು. ಹಾಂಗ ಕೇಳಿದರ ಪಾರಣಿಯು ಮರುದಿನ ಆಗಬೇಕು. ಯಾಕಂದರೆ ಉಪವಾಸ ಮುರಿಯೋದು ಅಂತು ಒಡಲು ಹರಿಯೋ ಹಾಂಗ ತುಂಬೋದಲ್ಲ, ಕೇವಲ ಒಂದಿಷ್ಟು ಹಣ್ಣಿನ ರಸದಿಂದ ಉಪವಾಸ ಮುಕ್ತಾಯ ಮಾಡ ಬೇಕು... ಉಪವಾಸದ ಪ್ರಭಾವ ಎಷ್ಟು ಅಂತ ಹೇಳಲಿ ? ಮೊದಲು ಅಂತರಂಗ ಶುದ್ಧಿಯ ಒಳವಾರಿ ಅದು. ಇಪ್ಪತ್ತೊಂದು ದಿವಸ ಉಪವಾಸ ಮಾಡಿದ ಮಹಾತ್ಮಾಜೀ ಅವರ ನಿಷ್ಠಾತ್ಮಕ್ಕ ಏನಂತಿ ? ಅವರ ಅಂತಃ ಶಕ್ತಿ ಬಲಗೊಂಡದ್ದು ಅಂತರಂಗ ಶುದ್ಧಿ ಯಿಂದsನ!... ಅಲ್ಲಾ ಮೊನ್ನೆ ನಮ್ಮ ಹಣಮ್ಯಾನದೇ ಉದಾಹರಣೆ ತಗೋ, Trip ಗೆ ಕಳಿಸು ಅಂತ ಹಟ ಹಿಡಿದು ಊಟ ಬಿಟ್ಟು ಕೂತಿಗ್ದನಲ್ಲ. ತಾಯಿ ಕರುಳು ನಿನ್ನದು. ನಿನ್ನ ಕಳ್ಳಗಂಟಿನೊಳ ಗಿಂದ ರೊಕ್ಕ ತಗದು ಮಗನ್ನ ಟ್ರಿಪ್‌ಗೆ ಕಳಿಸಿದೆಲ್ಲ ? ಅಪ್ಪರ ಮಟ್ಟಿಗೆ ಹಣಮ್ಯಾನ ಉಪವಾಸದ ಪ್ರಭಾವ ನಿನ್ನ ಮ್ಯಾಲ ಆತು ಅಂತ ಹೇಳಬೇಕು...... ಲಕ್ಚೇರಲ್ಲ ಇದು, ಮನೀ ಮಾತು ಹೇಳಿದೆ. ಲಕ್ಚೇರು ಯಾರು ಕೊಡಲಿಕ್ಕೆ ಕೂತಾರ... ಅಲ್ಲs ಮತ್ತ ಯಾಕ ರೊಕ್ಕ ಕೇಳತೀಯ ಮಾರಾಯಳೆ?... ರೇಶನ್‌ಗಂತ ಕೊಟ್ಟ ರೊಕ್ಕದಾಗs ಹಣ್ಣು ತರಸು ಯಾರು ಬ್ಯಾಡಾ ಅಂತಾರ...... ಫರಾಳ ಏನು ಮಾಡಲಿ ಅಂದ್ಯಾ ?...... ಏನ ಮಾಡ ಬೇಕಂತಿ ?...... ನನಗ ಕೇಳಿದರ ಒಳ್ಳೇ ತುಪ್ಪದ ದೋಸೆ !...ಹ...ಹಹ ಗೊತ್ತು. ಬ್ಯಾಳಿಲ್ಲೊ ಬಾಳಾ ಅಂದರ ಖಾರದ ತೊವ್ವಿ ಮಾಡು ಅಂದನಂತ...... ಅಕ್ಕಿಲ್ಲ ಅಂದರ ತುಪ್ಪದೋಸೆ!... ಬಿಡು ತಾಜಾ ತಾಜಾ ಇಡ್ಲಿ ಮಾಡು ! ಅಂ ? ಹೌದs ಮತ್ತ ನನ್ನ ಸೂಚನ ಕೇಳತೀಯಾಕ ?... ಜಪಾನದವರು ಸಾದಾ ದೋಸೆ ಇಡ್ಲಿ import ಮಾಡಕೋಬೇಕಂತಾರ. ನಿನ್ನ ಮನಸ್ಸಿಗೆ ಬಂದದ್ದು ಮಾಡು ! ಹುಡುಗರ ಪೂರ್ತೆಕ್ಕ ಮಧ್ಯಾಹ್ನದಾಗಿಂದು ಮುಚ್ಚಿ ಟ್ಟದ್ದು ಅದsನ ?...... ಸರಿ, ಹಾಂಗರ

[ ಆಂಸೆಯ ಪುಟ ನೋಡಿರಿ ]

# ಗ್ರಾಮೀಣ ವೈದ್ಯಕೀಯ ಪರಿಹಾರ

ಡಾ. ಡಿ. ವ್ಹಿ. ನಾಡಕರಣಿ

[ ಡಾ॥ ಡಿ. ವ್ಹಿ. ನಾಡಕರಣಿಯವರು ಸುಪ್ರಸಿದ್ಧ ಚಿಕಿತ್ಸಕರೆಂದು ಹೆಸರನ್ನು ಪಡೆದವರು. ಮೈಸೂರ ರಾಜ್ಯದ ವೈದ್ಯಕೀಯ ಇಲಾಖೆಯ ನಿರ್ದೇಶಕರಾಗಿ ನಿವೃತ್ತಿ ಹೊಂದಿದವರು. ಇವರು ಅನೇಕಾನೇಕ ರೋಗಿಗಳಿಗೆ ಪ್ರಾಣದಾತರಾಗಿ ಸೇವೆಸಲ್ಲಿಸಿದಂತೆಯೇ ವೈದ್ಯಕೀಯ ಶಾಸ್ತ್ರಕ್ಕೆ ತಮ್ಮ ಗ್ರಂಥಗಳ ಮೂಲಕ ತಮ್ಮ ಜ್ಞಾನ ಭಾಂಡಾರವನ್ನು ತೆರವು ಮಾಡಿದ್ದಾರೆ. ಇವರ ಜೀವನದ ಒಂದು ಪ್ರಸಂಗ ಬಹಳ ಹೃದಯಸ್ಪರ್ಶಿಯಾದುದು. ಅವರು ತಮ್ಮ ಬಗ್ಗೆ ಪರಿಚಯವನ್ನು ಕೇಳಿದಾಗ “ ನಾನು ಸಾಮಾನ್ಯರ ಸಹಾಯದಿಂದ ಬೆಳಕಿಗೆ ಬಂದ ಸಾಮಾನ್ಯ ” ಎನ್ನುತ್ತಾರೆ. ಈ ಮಾತಿನ ಹಿಂದೆ ಗೂಡಾರ್ಥವಡಗಿದೆ. ಇವರಿಗೆ ತಮ್ಮ ಎಫ್. ಆರ್. ಸಿ. ಎಸ್. ಶಿಕ್ಷಣಕ್ಕಾಗಿ ವಿದೇಶಕ್ಕೆ ಹೋಗಬೇಕೆಂಬ ಆಶೆ. ಆದರೆ ಹಣದ ಕೊರತೆ. ಇವರು ಬಡಕುಟುಂಬಕ್ಕೆ ಸೇರಿದವರು. ಈ ಸಮಸ್ಯೆಯನ್ನು ಬಗೆಹರಿಸಲು ಇವರ ತಂದೆಯವರು ಐದು ರೂಪಾಯಿಯ ಮೌಲ್ಯದ ಸಾಲದ ಟಿಕೇಟುಗಳ ಯೋಜನೆಯನ್ನು ತೆಗೆದರು.

“ ನಮ್ಮ ತಂದೆಯವರು ಕರ್ನಾಟಕ ಮಹಾರಾಷ್ಟ್ರಗಳ ಮೂಲೆಗಳಲ್ಲಿ ಅಡ್ಡಾಡಿ ಸ್ನೇಹಿತರಿಗೆ ಹಿತೈಷಿಗಳಿಗೆ ಈ ಟಿಕೇಟುಗಳನ್ನು ಮಾರಿ ಹದಿನೈದು ಸಾವಿರ ರೂಪಾಯಿಗಳನ್ನು ಶೇಖರಿಸಿದರು. ನನ್ನ ತಂದೆಯವರ ಶ್ರಮ, ನಮ್ಮ ಹಿತೈಷಿಗಳ ಸಾಮೂಹಿಕ ಸಹಾಯದಿಂದ ನಾನು ವಿದೇಶದಲ್ಲಿ ಉಚ್ಚ ಶಿಕ್ಷಣ ಪಡೆದೆ. ಈ ಎಲ್ಲರ ಹಣವನ್ನು ತಿರುಗಿ ಮುಟ್ಟಿಸಲು ಹದಿನೆಂಟು ವರುಷಗಳ ಕಾಲ ನನಗೆ ಬೇಕಾಯಿತು. ನಾನು ಸಾಮಾನ್ಯರಿಂದ ಬೆಳೆದ ಸಾಮಾನ್ಯ ” ಎನ್ನುತ್ತಾರೆ ಡಾ. ನಾಡಕರ್ಣಿಯವರು.

ವೈಯಕ್ತಿಕ ಜೀವನದಲ್ಲಿ ಬಂದ ಸಮಸ್ಯೆಗಳನ್ನು ಜಾಣ್ಮೆಯಿಂದ ಬಗೆಹರಿಸಿಕೊಂಡು ತಯಾರಾದ ಇವರಿಂದ ಎಂಥ ಬೃಹತ್ ಸಮಸ್ಯೆಗೂ ಪರಿಹಾರ ದೊರೆಯುತ್ತದೆ. “ ಗ್ರಾಮೀಣ ವೈದ್ಯಕೀಯ ಪರಿಹಾರದ ” ಬೃಹತ್ ಸಮಸ್ಯೆಗೆ ಪ್ರಾಯೋಗಿಕ ಹಾಗೂ ಶಾಶ್ವತ ಪರಿಹಾರವನ್ನು ಈ ಲೇಖನದಲ್ಲಿ ಇವರು ಒದಗಿಸಿದ್ದಾರೆ. —ಸಂ. ]

ಕಲ್ಯಾಣ ರಾಜ್ಯದತ್ತ ಸಾಗಿರುವ ಭಾರತ ದೇಶವು ಸಮಸ್ಯೆಗಳ ಚಕ್ರವ್ಯೂಹದಲ್ಲಿ ಅನೇಕಾನೇಕ ಸಮಸ್ಯೆಗಳ ಸೈನ್ಯ ನಮ್ಮ ಆಡಳಿತಗಾರರ ದಃಡೆಯನ್ನು ಎದುರಿಸಿ ನಿಂತಿದೆ. ಗ್ರಾಮೀಣ ವೈದ್ಯಕೀಯ ಪರಿಹಾರವು ಈ ಸಮಸ್ಯೆಗಳಲ್ಲಿ ಒಂದಾಗಿದೆ. ಈ ಸಮಸ್ಯೆ ಉದ್ಭವಿಸಲು ಯೋಗ್ಯ ಶಿಕ್ಷಣಾರ್ಹತೆಯನ್ನು ಪಡೆದವರ ಅಭಾವ. ಗ್ರಾಮಗಳಲ್ಲಿ ಸೇವೆ ಸಲ್ಲಿಸಲು ನಮ್ಮ ತರುಣ ವೈದ್ಯಕೀಯ ಪದವೀಧರರ ಅಸಮ್ಮತಿಗಳು ಕಾರಣಗಳಾದರೂ ಸಮಸ್ಯೆ ಬೃಹದಾಕಾರ ತಾಳಲು ವೈದ್ಯಕೀಯ ಶಿಕ್ಷಣದಲ್ಲಿ ಡಿಪ್ಲೊಮಾ ಶ್ರೇಣಿಯನ್ನು ರದ್ದು ಮಾಡಿದುದೇ ಮೂಲಕಾರಣವೆನ್ನಬಹುದು. ಈ ರದ್ದತಿಯು ದೇಶದಾದ್ಯಂತ ವೈದ್ಯಕೀಯ ವೃತ್ತಿಯಲ್ಲಿ ಅಸಂಖ್ಯಾತ ಕ್ಲಿಷ್ಟತೆಗಳಿಗೆ ಅವಕಾಶ ಕೊಟ್ಟಿದೆ. ಆದರೂ ಆಡಳಿತಾಧಿಕಾರಿಗಳು ತಮ್ಮ ನಿಲುವೆಯನ್ನು ಬದಲಿಸಿ ಡಿಪ್ಲೊಮಾ ಶ್ರೇಣಿಯ ಪುನಃ ಪ್ರಾರಂಭಕ್ಕೆ ತೊಡಗದಿರುವದು ದುರ್ದೈವದ ಸಂಗತಿಯೇ ಸರಿ.

ಆಡಳಿತಾಧಿಕಾರಿಗಳಿಗೆ ರದ್ದು ಮಾಡಿದ ಡಿಪ್ಲೊಮಾ ಪುನಃ ಪ್ರಾರಂಭ ಮಾಡಿದರೆ ತಮ್ಮ ಗೌರವಕ್ಕೆ ಧಕ್ಕೆ ತಾಕುತ್ತದೆಂಬ ತಪ್ಪುಕಲ್ಪನೆಯ ಕಾರಣ ಇರಬೇಕೆಂದೆನಿಸುತ್ತದೆ.

### ವೈದ್ಯಕೀಯ ಪದವೀಧರರ ಪಟ್ಟಣಗಳ ಮೋಹ

ಎಂ. ಬಿ. ಬಿ. ಎಸ್. ಶ್ರೇಣಿಯು ವೈದ್ಯಕೀಯ ವೃತ್ತಿಗೆ ಅವಶ್ಯವಾದ ಶಿಕ್ಷಣಕ್ಕಿಂತಲೂ ಅತಿ ಹೆಚ್ಚಿನ ಹಾಗೂ ಬಹಳ ಕ್ರಾಂತಿಕರವಾದ ತರಬೇತಿಯನ್ನು ಒದಗಿಸುತ್ತದೆ. ಇದು ಉಚ್ಚ ಶಿಕ್ಷಣಕ್ಕೆ ಅರ್ಹತೆಯನ್ನೊದಗಿಸುತ್ತದೆ. ಆದ್ದರಿಂದ ತಮ್ಮ ಶಿಕ್ಷಣಾರ್ಹತೆಯನ್ನು ಹೆಚ್ಚಿಸಿಕೊಳ್ಳಬೇಕೆಂಬ ಆಶೆ ಆಕಾಂಕ್ಷೆಗಳನ್ನು ತಾಳಿದ ತರುಣ ಪದವೀಧರರು ನಿರ್ವಾಹವಿಲ್ಲದೆ ಪಟ್ಟಣಗಳಲ್ಲಿಯೇ ತಮ್ಮ ವೃತ್ತಿಯನ್ನು ಪ್ರಾರಂಭಿಸಲು ಪ್ರಯತ್ನಿಸುವದು ಸಹಜವೇ ಆಗಿದೆ. ಇದಲ್ಲದೆ ಗ್ರಾಮೀಣ ಪರಿಸರಕ್ಕೆ ಪದವೀಧರರು ಪಡೆಯುವ ಉಚ್ಚ ವೈದ್ಯಕೀಯ ಜ್ಞಾನ ಹಾಗೂ ಹೆಚ್ಚಿನ ತಾಂತ್ರಿಕ ತರಬೇತಿ ನಿರರ್ಥಕವೆಂದೇ ಹೇಳಬೇಕು. ಈ ಮೂಲ ಅಂಶವೇ ನಗರಗಳಲ್ಲಿ ಯೋಗ್ಯ ಶಿಕ್ಷಣ ಪಡೆದ ವೈದ್ಯರ ಸಂಖ್ಯೆ ಹೆಚ್ಚಿಸುವದೂ ಗ್ರಾಮೀಣ ಪ್ರದೇಶಗಳಲ್ಲಿ ಇವರ ಅಭಾವಕ್ಕೂ ಮುಖ್ಯ ಕಾರಣ.

ಇದಲ್ಲದೆ ಆರ್ಥಿಕ ದುರ್ಬಲತೆಯುಳ್ಳ ಸಾಮಾನ್ಯ ಜಾಣ ಯುವಕರಿಗೆ ವೈದ್ಯಕೀಯ ಪದವೀ ಶಿಕ್ಷಣವೂ ನಿಲುಕದ ವಿಷಯ. ದೇಶದ ಅವಶ್ಯಕತೆಯನ್ನು ಗಮನಿಸಿದಾಗ, ಈಗಿರುವ ವೈದ್ಯಕೀಯ ಕಾಲೇಜುಗಳಿಂದ ಹೊರಬರುವ ವೈದ್ಯರ ಸಂಖ್ಯೆಯೂ ಕೂಡ ಬಹಳ ಕಡಿಮೆಯಾಗಿರುವದರಿಂದ ಈ ಸಮಸ್ಯೆಯನ್ನು ಮತ್ತಷ್ಟು ಉಲ್ಬಣಗೊಳಿಸಿದೆ.

ಈ ಬೃಹತ್ ಸಮಸ್ಯೆಯ ನಿವಾರಣೆಗೆ ಕೆಲವು ತಾತ್ಪೂರ್ತಿಕ ಪರಿಹಾರಗಳನ್ನು ಯೋಜಿಸಲಾಗುತ್ತಿದೆ. ವೈದ್ಯಕೀಯ ಕಾಲೇಜುಗಳ ಸಂಖ್ಯೆಯನ್ನು ಹೆಚ್ಚಿಸುವದು ಈ

ಕಾಲೇಜುಗಳಲ್ಲಿ ಪ್ರವೇಶವನ್ನು ಇಮ್ಮಡಿಸುವದು, ಎರಡು ಪಾಳಿಗಳಲ್ಲಿ ಕಾಲೇಜುಗಳನ್ನು ನಡೆಸುವದು ಶಿಕ್ಷಣದ ಅವಧಿಯನ್ನು ಮೊಟಕುಗೊಳಿಸುವದು "ಪ್ರಶಸ್ತಿ ಪತ್ರ ಶಸ್ತ್ರ ಚಿಕಿತ್ಸಕರು", "ಅರ್ಧ ವೈದ್ಯರು", "ವೈದ್ಯಕೀಯ ಸಹಾಯಕರು" ಮುಂತಾದ ಕ್ರಮಗಳು; ಪ್ರಜಾಸತ್ತೆಗೆ ವಿರುದ್ಧವೂ, ಬಲಾತ್ಕಾರವಿಧಾನವೂ ಆದ "ಖಡ್ಡಾಯ ಗ್ರಾಮೀಣ ಸೇವೆ" ಮೊದಲಾದ ಕಡೆಗಳಿಂದ ಗ್ರಾಮೀಣ ಪ್ರದೇಶಗಳಲ್ಲಿ ವೈದ್ಯಕೀಯ ಪರಿಹಾರದ ಸಮಸ್ಯೆಯನ್ನು ಬಗೆಹರಿಸುವ ಪ್ರಯತ್ನಗಳು ನಡೆದಿವೆ. ಯೋಗ್ಯ ವೈದ್ಯಕೀಯ ಪ್ರಾಧ್ಯಾಪಕರ ಅಭಾವ, ಶಿಕ್ಷಣ ರಂಗದಲ್ಲಿ ಅನುಭವಿಕರ ಕೊರತೆ, ವೈಜ್ಞಾನಿಕ ಉಪಕರಣಗಳು ಮುಂತಾದವುಗಳ ಅಭಾವ, ಮುಂತಾದ ಕಾರಣಗಳಿಂದಾಗಿ ಎಲ್ಲ ತಾತ್ಪೂರ್ತಿಕ ಪರಿಹಾರ ಕ್ರಮಗಳೂ ವೈದ್ಯಕೀಯ ಪದವೀಧರರ ಮಟ್ಟವನ್ನು ಹಳೆಯ ಡಿಪ್ಲೊಮಾದವರ ಮಟ್ಟಕ್ಕೆ ಇಳಿಸುವದರಲ್ಲಿ ಸಂದೇಹವಿಲ್ಲ, ಎಂದೆನಿಸುತ್ತದೆ. ಪ್ರಶಸ್ತಿಪತ್ರ ಶಸ್ತ್ರ ಚಿಕಿತ್ಸಕರು, ಅರ್ಧ ವೈದ್ಯರು ಮುಂತಾದ ಕ್ರಮಗಳಿಂದ ಹಳೆಯ ಡಿಪ್ಲೊಮಾ ಶ್ರೇಣಿಯನ್ನು ಅಧಮ ಮಟ್ಟದಲ್ಲಿ ಪುನರುಜ್ಜೀವನಗೊಳಿಸಿದಂತೆಯೇ ಸರಿ. ಖಡ್ಡಾಯ ಗ್ರಾಮೀಣ ವೈದ್ಯಕೀಯ ಸೇವೆಯ ಬಗ್ಗೆ ಹೇಳಬೇಕೆಂದರೆ ಇದರಿಂದ ವೈದ್ಯಕೀಯ ವೃತ್ತಿಯಿಲ್ಲದೆ, ಸಾರ್ವಜನಿಕರಿಗೂ ಬಹಳ ಹಾನಿದಾಯಕ. ಅನುಭವವಿಲ್ಲದ ಹೊಸ ಪದವೀಧರರನ್ನು ಅನುಭವಿಕ ವೈದ್ಯರಿಲ್ಲದ ಹಾಗೂ ವೃತ್ತಿ ಮಾರ್ಗದರ್ಶನ ದೊರೆಯಲಾರದ ಗ್ರಾಮೀಣ ಪ್ರದೇಶಗಳಿಗೆ ಸೇವೆಗಾಗಿ ಕಳಿಸುವದು ಖಂಡಿತವಾಗಿಯೂ ಅಪಾಯಕರ. ಅದೂ ಅಲ್ಲದೆ ಈ ಹೊಸ ಪದವೀಧರರಿಗೆ ಇದರಿಂದಾಗಿ ಪ್ರಾರಂಭ ದಶೆಯಲ್ಲಿ ಅವಶ್ಯವಾಗಿ ಬೇಕಾಗುವ ಮಾರ್ಗದರ್ಶನ ಹಾಗೂ ತರಬೇತಿಗಳು ಲಭಿಸದಂತಾಗಿ ಅವರ ಉಚ್ಚ ಶಿಕ್ಷಣಕ್ಕೆ ಧಕ್ಕೆ ತರುತ್ತದಾದ್ದರಿಂದ ಈ ಕ್ರಮ ಪದವೀಧರರಿಗಷ್ಟೇ ಅಹಿತವಲ್ಲದೆ ವೈದ್ಯಕೀಯ ವೃತ್ತಿಗೂ ಶ್ರೇಯಸ್ಕರವಲ್ಲ.

ಈ ಎಲ್ಲ ಕಾರಣಗಳಿಂದಾಗಿ ಈಗ ಯೋಜಿಸಲಾಗುತ್ತಿರುವ ತಾತ್ಪೂರ್ತಿಕ ಪರಿಹಾರ ಕ್ರಮಗಳು ರಾಷ್ಟ್ರದಾದ್ಯಂತ ವೈದ್ಯಕೀಯ ಶಿಕ್ಷಕರಾದ ಉತ್ತಮ ಮಟ್ಟವನ್ನು ಅಧಃಪತನಕ್ಕೆ ಒಯ್ಯುತ್ತದೆ. ಈ ದುರಂತವು ಒಂದು ವಿಷಮ ಚಕ್ರವಿದ್ದಂತೆ. ಇಂದಿನ ವಿದ್ಯಾರ್ಥಿಗಳೇ ನಾಳಿನ ಪ್ರಾಧ್ಯಾಪಕರಾಗುವದರಿಂದ ಮುಂಬರುವ ಶಿಕ್ಷಣಮಟ್ಟ ಮತ್ತಷ್ಟು ಕಡಿಮೆಯಾಗುತ್ತದೆ. ಆದ್ದರಿಂದ ಈ ಅಧ:ಪಥವನ್ನು ನಿವಾರಿಸಲು ಈ ಸ್ಥಿತಿಗೆ ಮೂಲ ಕಾರಣವಾದವುಗಳನ್ನು ಬೇರು ಸಮೇತ ಕೀಳಬೇಕು.

ಈ ಕ್ಲಿಷ್ಟ ಸಮಸ್ಯೆಗೆ ನನ್ನ ಸೂಚನೆಗಳು ಕೆಳಗಿನಂತಿವೆ :

(೧) ಭಾರತಾದ್ಯಂತ ವೈದ್ಯಕೀಯ ವೃತ್ತಿಯಲ್ಲಿ ಮೂರು ಮಟ್ಟಗಳಿರಬೇಕು.

(ಅ) ಶ್ರೇಣಿಯ ಅವಧಿ ಹಾಗು ಪಠ್ಯಕ್ರಮ. ಎಸ್. ಎಸ್. ಎಲ್. ಸಿ.

ಉತ್ತೀರ್ಣರಾದವರಿಗೆ ನಾಲ್ಕು ವರ್ಷಗಳ ವೈದ್ಯಕೀಯ ಪ್ರಾಯೋಗಿಕ ಶಿಕ್ಷಣ. ಕೇವಲ ಪ್ರಾಯೋಗಿಕ ತರಬೇತಿ ಬೇರೆ. ಕನಿಷ್ಟ ೧೦೦ ಹಾಸಿಗೆಗಳ ಜಿಲ್ಹಾ ಆಸ್ಪತ್ರೆಗಳಿಗೆ ಹೊಂದಿಕೊಂಡಿರುವ ಜಿಲ್ಹಾ ವೈದ್ಯಕೀಯ ಶಾಲೆಗಳು. ಈ ಶಾಲೆಗಳಲ್ಲಿ ಸ್ನಾತಕೋತ್ತರ ಪದವಿಗಳ ಪ್ರಾಧ್ಯಾಪಕರಿರಬೇಕು.

(೨) ಡಿಪ್ಲೊಮಾ ಮಟ್ಟ:– (Chemical) ರಾಸಾಯನಿಕ ಕೇವಲ ವೈದ್ಯಕೀಯ ಪ್ರಾಯೋಗಿಕ ಕ್ರಮದ ಸಾಮಾನ್ಯ ವೈದ್ಯಕೀಯ ವೃತ್ತಿ.

(೩) ಪದವೀಧರ ಮಟ್ಟ:– (ಅ) ವೈದ್ಯಕೀಯ ಶಿಕ್ಷಣ ಸಂಸ್ಥೆಗಳಲ್ಲಿ ಶಿಕ್ಷಕರಾಗಲು. (ಬ) ವೈದ್ಯಕೀಯ ಸಂಸ್ಥೆಗಳಲ್ಲಿ ತಾಂತ್ರಿಕ ಕೆಲಸಕ್ಕೆ. (ಕ) ಸ್ನಾತಕೋತ್ತರ ತರಬೇತಿಗೆ ಶ್ರೇಣಿಯ ಅವಧಿ ಹಾಗೂ ಪಠ್ಯಕ್ರಮ ಈಗಿನಂತೆ.

(೪) ಸ್ನಾತಕೋತ್ತರ ಮಟ್ಟ– (ಅ) ವೈದ್ಯಕೀಯ ಪ್ರಾಯೋಗಿಕ (Chemical) ರಾಸಾಯನಿಕ ಮತ್ತು ಸಲಹೆಗಾರರು (ಬ) ಪೂರ್ಣ ಅವಧಿಯ ಶಿಕ್ಷಕರು (ಕ) ಸಂಶೋಧಕರು.

ಶ್ರೇಣಿಯ ಅವಧಿ ಹಾಗು ಪಠ್ಯಕ್ರಮ ಈಗಿನಂತೆ.ಎರಡನೆಯದಾಗಿ ಸರಕಾರಿ ವೈದ್ಯಕೀಯ ಇಲಾಖೆಯ ಸೇವೆಯಿಂದ ನಿವೃತ್ತರಾದ ವೈದ್ಯರಿಗೆ ಯೋಗ್ಯ ವೇತನವನ್ನು ಅವರ ನಿವೃತ್ತಿ ವೇತನದೊಂದಿಗೆ ಅಥವಾ ಪಿಂಚಣಿಯೊಂದಿಗ ಕೊಟ್ಟು ಗ್ರಾಮೀಣ ಪ್ರದೇಶಗಳಲ್ಲಿರುವಂತೆ ಪ್ರೋತ್ಸಾಹಿಸಬೇಕು. ಈ ನಿವೃತ್ತ ವೈದ್ಯರು ವೃತ್ತಿಯ ಪೂರ್ಣ ಅನುಭವದ ಜ್ಞಾನವನ್ನು ಪಡೆದಿರುತ್ತಾರಲ್ಲದೆ ಜೀವನದಲ್ಲಿಯ ಮಹಾಶೆಗಳಿಂದ ನಿವೃತ್ತಿಯನ್ನು ಪಡೆದಿರುತ್ತಾರೆ. ಜೀವನದಲ್ಲಿಯ ಮಹತ್ವದ ಆಶೆಆಕಾಂಕ್ಷೆಗಳ ಕಾಲಿಸವೂ ಅವರಿಗಿರುವದಿಲ್ಲ. ಸರಕಾರಿ ಸೇವಾವಧಿಯಲ್ಲಿ ಪಶುಪಾಲನೆ ಸಂಚಾರಿ ಜನಾಂಗದವರಂತೆ ಭ್ರಮಣಮಾಡಿ ಬೇಸತ್ತ ಇವರಿಗೆ ನಿಸರ್ಗ ಸೌಂದರ್ಯ ಮಡಿಲಲ್ಲಿ ನೆಲಸಿದ ಗ್ರಾಮೀಣ ಭಾಗಗಳಲ್ಲಿಯ ಜೀವನ ಹೊಸ ಜೀವನ ಕೊಡುವದರಲ್ಲಿ ಸಂದೇಹವಿಲ್ಲ.

ಈ ಶಾಶ್ವತ ಪರಿಹಾರಗಳನ್ನು ಕಾರ್ಯಗತಗೊಳಿಸಿದರೆ ಕೇವಲ ೧೫ ವರ್ಷಗಳಲ್ಲಿ ದೇಶದ ಪ್ರತಿಗ್ರಾಮಕ್ಕೆ ಒಬ್ಬ ಯೋಗ್ಯ ಶಿಕ್ಷಣ ಪಡೆದ ವೈದ್ಯನು ತಯಾರಾಗುತ್ತಾನೆ. ಗ್ರಾಮೀಣ ವೈದ್ಯಕೀಯ ನೆರವಿನ ಸಮಸ್ಯೆ ಸಂಪೂರ್ಣ ಪರಿಹಾರವನ್ನು ಪಡೆಯುತ್ತದೆ.

ಪ್ರತಿ ಜಿಲ್ಹೆಗೊಂದು ವೈದ್ಯಕೀಯ ಶಾಲೆ ಸರಕಾರಿ ಔಷಧಾಲಯಕ್ಕೆ ಹೊಂದಿ ವೈದ್ಯಕೀಯ ಶಾಲೆಯನ್ನು ಪ್ರಾರಂಭಿಸಿ ಇದರಲ್ಲಿ ಡಿಪ್ಲೊಮಾ ಶಿಕ್ಷಣ ಕೊಟ್ಟರೆ ಒಂದು ವರ್ಷದಲ್ಲಿ ಕನಿಷ್ಟ ೩೦ ವಿದ್ಯಾರ್ಥಿಗಳು ತರಬೇತಿ ಹೊಂದಿ ತಯಾರಾದರೂ ೧೫ ವರ್ಷಗಳಲ್ಲಿ ೪೫೦ ವಿದ್ಯಾರ್ಥಿಗಳು ಒಂದೊಂದು ಜಿಲ್ಹೆಗೆ ತಯಾರಾಗುತ್ತಾರೆ. ಪ್ರತಿಯೊಂದು ಜಿಲ್ಹೆಯ ಹಳ್ಳಿಗಳಿಗೂ ಆಗ ಯೋಗ್ಯ ವೈದ್ಯರ ಪೂರೈಕೆಯಾಗುತ್ತದೆ. ಇದರಿಂದ ಪದವೀಧರ ವೈದ್ಯರು ಪ್ರಾಧ್ಯಾಪಕರ ಕಾರ್ಯಕ್ಕೆ ತೊಡಗಲು ನೆರವಾಗುತ್ತದೆ.

* * *

# ಕತ್ತಲಲ್ಲಿ ಕಾಣದ್ದನ್ನೂ ಕಾಣಬಹುದು

ಶ್ರೀ ಅನಂತ, ಬಿ. ಎಸ್‌ಸಿ.



ಜಗತ್ತಿನಲ್ಲಿ ಒಂದಲ್ಲ ಎರಡು ಮಹಾ ಯುದ್ಧಗಳು ಜರುಗಿದವಲ್ಲ. ಹಗಲು ರಾತ್ರಿ ಮೋಡ ಮುಸುಕು, ಮಂಜು ಯಾವುದನ್ನೂ ಗಮನಿಸದೇ ಅವಿರತ ದಾಳಿ ಪ್ರತಿದಾಳಿಗಳು ನಡೆಯುತ್ತಿದ್ದ ಸಮಯ. ಕತ್ತಲಿರಲಿ ಮಂಜಿರಲಿ ಅಮಾವಾಸ್ಯೆಯ ರಾತ್ರಿ ಇದ್ದರೂ ಸರಿಯೇ ಎದುರು ಹೊಂಚುಹಾಕಿ ಬರುವ ಶತ್ರು ಕಾಣ ಬೇಡವೆ ? ಶತ್ರು ಏನ ಬಾಂಬರ್--- ತಮ್ಮ ಫೈಟರ ಯಾವುದೆಂಬುದು ಕತ್ತಲೆಯಲ್ಲಿ ಗೊತ್ತಾಗಬೇಡವೆ ? ಅವಿರತ ದಾಳಿಯ ಮುನ್ಸೂಚನೆಯನ್ನು ಪಡೆಯ ಬೇಡವೆ ? ಇದೇ ಯೋಚನೆ ವಿಜ್ಞಾನಿಗಳ ಮೆದುಳಿನಲ್ಲಿ ಕೊರೆಯತೊಡಗಿತ್ತು. ಆಗಿನ್ನೂ ರಾಡಾರ್ ಇಷ್ಟು ಪ್ರಬಲವಾಗಿರಲಿಲ್ಲ. ಅದರ ಫಲವಾಗಿಯೇ ಹುಟ್ಟಿಕೊಂಡಿತು ಈ ಮರಿ. ನಿಶಾದೂರ ದರ್ಶಕ (Night vision tube).

ಅದೃಶ್ಯ ಕಿರಣಗಳು:– ಕೆಂಪಿನಿಂದ ನೇರಳೆಯ ವರೆಗಿನ ಕಿರಣಗಳನ್ನು ನಮ್ಮ ಕಣ್ಣು ಗುರುತಿಸಬಲ್ಲದು. ಆದರೆ ರಕ್ತಾತೀತ (Infra) ಕಿರಣಗಳನ್ನಾಗಲಿ ಅತೀವ ನೇರಳೆ (ultra violet) ಕಿರಣಗಳನ್ನಾಗಲಿ ನಮ್ಮ ಕಣ್ಣುಗಳು ಗುರುತಿಸಲಾರವು. ಆದರೆ ಅವೂ ಕಿರಣಗಳೇ ಅಲ್ಲವೆ ? ಕಿರಣಗಳಿಗೆ ಅನ್ವಯಿಸುವ ನಿಯಮಗಳು ಅವುಗಳಿಗೂ ಅನ್ವಯಿಸುತ್ತವೆ. ಇನ್ನೂ ವಿಶೇಷವೆಂದರೆ ನಮ್ಮ ಕಣ್ಣು ಗುರುತಿಸುವ ಕಿರಣಗಳು ಮಂಜು, ಇಬ್ಬನಿಯನ್ನು ಸುಲಭವಾಗಿ ದಾಟಲಾರವಾದರೆ ರಕ್ತಾತೀತ ಕಿರಣಗಳು ಇವನ್ನೂ ಸುಲಭವಾಗಿ ಕ್ರಮಿಸಿ ಬರುತ್ತವೆ.

ಸಾಮಾನ್ಯ ದೂರದರ್ಶಕದ (Telescope) ಲ್ಲಿರುವಂತೆ ಮಸೂರ (lens) ಗಳನ್ನು ಜೋಡಿಸಿ ಈ ಅದೃಶ್ಯ ಕಿರಣಗಳಿಂದಲೂ ಪ್ರತಿಬಿಂಬವನ್ನು ಪಡೆಯಬಹುದು. ಆದರೆ ಏನಿದ್ದರೇನು ? ಅವು ನಮ್ಮ ಕಣ್ಣಿಗೆ ಕಾಣುವಂತಾಗಬೇಕಲ್ಲ. ಅಲ್ಲಿಯೇ ಇರುವದು ವಿಜ್ಞಾನಿಗಳ ಚಾತುರ್ಯ.

ಬಿಸಿಯಾದ ವಸ್ತುಗಳು (hot bodies) ಸಾಮಾನ್ಯವಾಗಿ ರಕ್ತಾತೀತ

ಕಿರಣಗಳನ್ನು ಪಸರಿಸುತ್ತಲೇ ಇರುತ್ತವೆ. ಈ ಕಿರಣಗಳನ್ನು ನಾವು ನೋಡಲು ಕಲಿಯಬೇಕು ಮಾತ್ರ. ಕತ್ತಲೆ ಕೋಣೆಯೊಂದರಲ್ಲಿ ಬಿಸಿಬಿಸಿಯಾದ ಚಹದ ಕಿಟ್ಲಿಯನ್ನೋ ಕಪ್ಪನ್ನೋ ಇಟ್ಟರೆ ಅದು ನಮಗೆ ಕಂಡುಬರಲಾರದು. ಆದರೆ ಟೆಲಿವಿಜನ್ ಕ್ಯಾಮರಾಕ್ಕೆ ಕಂಡೀತು. ಇದರಿಂದ ದೊರೆಯುವ ಪ್ರತಿಬಿಂಬವನ್ನು ಪರದೆಯ ಮೇಲೆ ಮೂಡಿಸಿದಾಗ ನಮಗದು ಅತಿ ಸ್ಪಷ್ಟವಾಗಿ ಕಾಣಿಸುವದು. ಕಿಟ್ಲಿಯ ಮೇಲೆ ಅತಿ ಪ್ರಬಲವಾದ ಬೆಳಕನ್ನು ಬೀರಿ ಅದರ ಫೋಟೊ ತೆಗೆದಂತೆಯೇ ನಮಗೆ ಭಾಸವಾದೀತು ಆದರೆ ಇಷ್ಟೆಲ್ಲ ಮಾಡಲು ಯುದ್ಧದಲ್ಲಿ ಪುರಸೊತ್ತೆಲ್ಲಿ? ಇನ್ನೂ ಸುಲಭ ತಂತ್ರ ಒಂದು ಅವಶ್ಯಕವೆಂದುಕೊಂಡು ಅಂಥ ಸುಲಭ ಸಲಕರಣೆಯೊಂದನ್ನು ಯೋಜಿಸಿದರು.

ಅದ್ಭುತ ಕೊಳವೆಗಳು:— ನಿರ್ವಾತಗೊಳಿಸಿದ ಸಿಲಿಂಡರಾಕಾರದ ಕೊಳವೆಯ ಒಂದು ಮುಚ್ಚಳದ ಒಳಭಾಗಕ್ಕೆ ಸೀಜಿಯಮ್ (Cesium) ಲೋಹದ ಲೇಪನವನ್ನು ಇನ್ನೊಂದು ಮುಚ್ಚಳದ ಒಳಭಾಗಕ್ಕೆ ನಮ್ಮ ಗಡಿಯಾರದ ಅಂಕೆಗಳಿಗಿರುವಂಥ ವಿಸರ್ಣಶೀಲ (Fluorescent) ಲೇಪನವನ್ನು ಮಾಡಿರುತ್ತಾರೆ. ಸೀಜಿಯಮ್‌ದ ವೈಶಿಷ್ಟ್ಯವೆಂದರೆ— ಅದು ಸುಲಭವಾಗಿ ತನ್ನಲ್ಲಿರುವ ಇಲೆಕ್ಟ್ರಾನ್ (Electron) ಗಳನ್ನು ಬಿಟ್ಟುಕೊಡಬಲ್ಲದು. ರಕ್ತಾತೀತ ಕಿರಣಗಳು ಈ ರೀತಿಯಾಗಿ ಸೀಜಿಯಮ್‌ದಿಂದ ಇಲೆಕ್ಟ್ರಾನಗಳನ್ನು ಹೊರದೂಡಬಲ್ಲವು. ಈ ಇಲೆಕ್ಟ್ರಾನಗಳು ನೇರವಾಗಿ ಚಲಿಸಿ ವಿಸರಕ ಫ್ಲೂರೋಸೆಂಟ ಮುಚ್ಚಳಕ್ಕೆ ಅಪ್ಪಳಿಸಬೇಕಲ್ಲ. ಈ ನೇರ ಚಲನೆಯನ್ನುಂಟು ಮಾಡಲು ಕೊಳವೆಯ ಸುತ್ತಲೂ ಲೇಪಿತ ತಾಮ್ರ ತಂತಿಯ ಸುರಳಿಗಳನ್ನು ಬಿಗಿದು ಅದರಲ್ಲಿ ಒತ್ತಡದ ವಿದ್ಯುತ್ ಪ್ರವಾಹವನ್ನು ಹರಿಸುವರು. (Direct Current) ಸುರಳಿಗಳ ಸಂಖ್ಯೆ ಮತ್ತು ವಿದ್ಯುತ್ತಿನ ಒತ್ತಡ ಹೆಚ್ಚಾದಂತೆ ಇನ್ನೂ ಚೆನ್ನು. ಆಗ ಸೀಜಿಯಮ್ ಮುಚ್ಚಳದಿಂದ ಹೊರಟ ಇಲೆಕ್ಟ್ರಾನ್‌ಗಳು ನೇರವಾಗಿ ಚಲಿಸಿ ಫ್ಲೋರೋಸೆಂಟ ಮುಚ್ಚಳಕ್ಕೆ ಅಪ್ಪಳಿಸುವವು. ಅಂದರೆ ರಕ್ತಾತೀತ ಕಿರಣಗಳಿಂದ ಉಂಟಾದ ಪ್ರತಿಬಿಂಬವು ಸೀಜಿಯಮ್ ಲೇಪಿತ ಮುಚ್ಚಳದಿಂದ ಫ್ಲೋರೋಸೆಂಟ ಮುಚ್ಚಳಕ್ಕೆ ಯಥಾವತ್ತಾಗಿ ಸ್ಥಳಾಂತರವಾದಂತಾಯಿತಲ್ಲ.

ಅದೃಶ್ಯದಿಂದ ದೃಶ್ಯಕ್ಕೆ:— ಈ ಫ್ಲೋರೋಸೆಂಟ ಮುಚ್ಚಳದಲ್ಲಿ ಇನ್ನೊಂದು ವೈಚಿತ್ರ್ಯವೇ ನಡೆಯುತ್ತದೆ. ಅಲ್ಲಿಯ ಲೇಪನವು ಇಲೆಕ್ಟ್ರಾನಗಳಿಂದ ದೊರೆತ ಶಕ್ತಿಯನ್ನು ದೃಗ್ಗೋಚರವಾದ ಕಿರಣವಾಗಿ ಪರಿವರ್ತಿಸುತ್ತದೆ. ಈ ದೃಗ್ಗೋಚರ ಕಿರಣಗಳು ಮಸೂರದ ಮೂಲಕ ಹಾಯ್ದು ನಮ್ಮ ಕಣ್ಣಿಗೆ ಸ್ಪಷ್ಟವಾಗಿ ವಸ್ತುಗಳು ಗೋಚರವಾಗುವಂತೆ ಮಾಡುತ್ತದೆ.

[ ೪೬ನೆಯ ಪುಟ ನೋಡಿರಿ ]

# ನವದಂಪತಿಗಳು !!

ಶ್ರೀಮತಿ ಗೀತಾ ಕುಲಕರ್ಣಿ

ನಮ್ಮ ಮನೆಯ ಮುಂಬಾಗಿಲು ತೆರೆದೊಡನೆ ಕಣ್ಣಿಗೆ ಕಾಣುವದು ಎದುರು ಮನೆಯ ಹೆಬ್ಬಾಗಿಲು. ಎರಡು ಮನೆಗಳ ನಡುವೆ ಅಡ್ಡವಾಗಿದೆ ಒಂದು ರೋಡು. ಬಾಗಿಲಲ್ಲೇ ನಿಂತು ನಕ್ಕು ಕ್ಷೇಮ ಸಮಾಚಾರ ಮಾತನಾಡುವಷ್ಟು ಸಮೀಪದ ದಾರಿ.

ಆದರೆ ಈ ಹತ್ತು ಹದಿನೈದು ವರುಷಗಳಲ್ಲಿ ನಕ್ಕು ಮಾತನ್ನಾಡಿಸುವ ದಿಕ್ಕು ಬದಲಿಸಿ; ಕಂಡೂ ಕಾಣದಂತೆ ಇರುವ ಮನಸ್ಸು ತರಬೇತಿಯಾಗಿದೆ. ನಿಮ್ಮನ್ನು ಈ ಮಾತಿನಿಂದ ಯೋಚನೆಗೀಡು ಮಾಡಿ "ಏನಿದು ?" ಎಂದು ತೊಂದರೆ ಪಡಿಸುವದಕ್ಕಿಂತ ಕಾರಣ ತಿಳಿದಾಗ ನೀವೇ "ಓಹೋ ನಿಮ್ಮಂತೆ ನಮ್ಮದೂ ಅಭಿಪ್ರಾಯ" ಎಂದು ನನ್ನ ನಿರ್ಣಯಕ್ಕೆ ಬಾರದೆ ಇರಲಾರಿರಿ.

—ಒಂದು ಸ್ನೇಹ ಚಿಗುರಬೇಕಾದರೆ, ಒಂದೇ ಪ್ರಾಯ,— ಇಲ್ಲವೇ ಒಂದೇ ಜಾತಿ. ಅಥವಾ ಒಂದೇ ಬಗೆಯ ಒಲವುಗಳು... ಹೋಗಲಿ, ಚಿಕ್ಕವರಲ್ಲಿ ಚಿಕ್ಕವರಾಗಿ, ದೊಡ್ಡವರಲ್ಲಿ ದೊಡ್ಡವರಾಗಿ ಬೆರೆತು ಇರುವ ಸ್ನೇಹಗುಣ...... ಆಗ ಪ್ರೀತಿಯ ಬಳ್ಳಿ ತಾನಾಗಿಯೇ ಹಚ್ಚ ಹಸಿರಾಗಿ ಹಬ್ಬಲು ಸಾಧ್ಯ.

—ಆದರೆ ಎದುರುಮನೆಯ ಗೃಹಲಕ್ಷ್ಮಿಯಲ್ಲಿ ಅಂಥ ಯಾವ ಗುಣಗಳೂ ಇರಲಿಲ್ಲ. ಮತ್ತೇಕೆ ಬರೆಯುತ್ತೇನೆ ? ಎಂದು ನಿಮಗೆ ಅನುಮಾನ ಬರಬಹುದು ನನಗೂ ಈ ಹತ್ತು ಹದಿನೈದು ವರುಷಗಳಲ್ಲಿ ಪ್ರತಿ



ಕ್ಷಣ, ಪ್ರತಿದಿನ ಇದೇ ಮಾತು ಕೇಳಿ ಕೇಳುತ್ತಿದೆ. ಇವರು ಯಾವ ಬಗೆಯ ಹೆಣ್ಣು? ಯಾವ ಸ್ವಭಾವ? ಎಂಥ ಮನಸ್ಸಿರಬಹುದು? ಹೆಸ್ಸಿಂದು ಹೇಳುವ ಯಾವದಾದರೂ ಒಂದು ಗುಣ? ಶ್ರೀದೇವಿ ಎಂದು ಹೆಸರಿರಬಹುದು ಎಂದು ಇಟ್ಟುಕೊಳ್ಳಿ. ಬೆಳಗಿನ ಏಳು ಗಂಟೆಗೆ ಬೆಚ್ಚನ್ನ ಹೊದಿಕೆಯಿಂದ ಮೇಲ್ಲನೆದ್ದು ಕುಳಿತು, ಮೈಮುರಿದಾಕಳಿಸಿ, ತನ್ನ ಬೆಳಗಿನ ಕೆಲಸ ಪೂರೈಸಿ ಕುಳಿತಾಗ, ಅಡಿಗೆ ಯವಳು ಬಾಗಿಲ ಮರೆಯಲ್ಲಿ ನಿಂತು, ಮಧ್ಯಾಹ್ನದ ಅಡಿಗೆ ಏನು ಮಾಡಲಿ? ಎಂದು ಕೇಳುತ್ತಿದ್ದಾಗ— ಪತಿರಾಯರು ಊರ್ಫ ಸಾಹೇಬರು ಬಿಸಿ ಬಿಸಿ ಚಹದ ಕಪ್ಪನ್ನು ಶ್ರೀಮತಿಯವರ ಕೈಗೆ ಕೊಡುತ್ತಾರೆ. "ಸ್ವಲ್ಪ ಸಿಹಿ ಕಡಿಮೆಯೇನೋ" ಎಂದು ಮುಖ ಕಹಿ ಮಾಡಿಕೊಳ್ಳುವದರಲ್ಲೇ ಸಾಹೇಬರು ಸಕ್ಕರೆ ಚಮಚೆ ಮುಂದಿಡುತ್ತಾರೆ. ಚಹಾಕುಡಿಯುತ್ತಿರುವಾಗಲೇ ಅಡಿಗೆಯವಳಿಗೆ ಸರಿಯಾಗಿ ಅಡಿಗೆ ಮಾಡಲು ಬರೋದಿಲ್ಲವೆಂದು ಸಹಸ್ರನಾಮವಾಗುತ್ತದೆ.

ಅಸಹಾಯಕತೆಯಲ್ಲಿದ್ದ ಸಾಹೇಬರು ಅಡಿಗೆಯವಳೆಡೆಗೆ ಸಾಂತ್ವನದ ನೋಟ ಬೀರುತ್ತಾರೆ. ಅವಳೂ ಸಿಡಿಮಿಡಿಗೊಂಡು ಹೊರಟು ಹೋದರೆ ನಳಪಾಕದ ಸೌಟು ಮತ್ತೂ ತನ್ನ ಕೈಗೆ!

ಪೆನ್‌ಶನ್ ಪಡೆದ ಈ ಸಾಹೇಬರು— ಹಿಂದೆ ತಾನು ಸಾಹೇಬರ ಹುದ್ದೆಯಲ್ಲಿ ಇದ್ದಾಗ ಕೈಗೊಬ್ಬರು, ಕಾಲಿಗೊಬ್ಬರು ಶಿಪಾಯಿದ್ದೂ ಈ ಬಾಯಿಸಾಹೇಬರ ದಬ್ಬಾಳಿಕೆಯನ್ನು ಹೇಗೂ ಸಹಿಸಲೇ ಬೇಕಾಗಿತ್ತು. ಆದರೆ ಈಗ ಇದ್ದೊಬ್ಬಳು ಕೈ ಬಿಟ್ಟರೆ ಮುಂದೆ ದೇವರೇ ಗತಿ! ಸಾಹೇಬರು ಅತ್ತೊಮ್ಮೆ ಇತ್ತೊಮ್ಮೆ ಓಡಾಡುತ್ತಲೇ ಇರುತ್ತಾರೆ.

—ಗೃಹಲಕ್ಷ್ಮಿ ತನ್ನ ಕೇಶ ಶೃಂಗಾರ ಮುಗಿಸಿ, ಸ್ನಾನಗೃಹ ಸೇರಿದರೆ ಅರ್ಧಗಂಟೆ ಅದಕ್ಕೆ ಮೀಸಲು! ನಂತರ ದೇವರ ಪೂಜೆಗಾಗಿ ಹೂಗಳು. ನಾಲ್ಕಾರುಮನೆಯ ಹೆಂಗಳೆಯರು ತಮ್ಮ ಕೆಲಸ ಕಾರ್ಯದಲ್ಲಿ ತೊಡಗಿದ್ದಾಗ ಶ್ರೀಮತಿಯರು ವಿರಾಮದಿಂದ ನಕ್ಕು ಹೂ ಕೊಯ್ಯುವ ಕಾರ್ಯಕ್ರಮ ಮುಗಿಸಿ ದೇವರೆದುರಿಗೆ ದೀಪವಿಟ್ಟು ಇನ್ನೇನು? ಎಂದು ಅಡಿಗೆಯವಳಿಗೆ ಅಡಿಗೆಯ ಬಗ್ಗೆ ಮತ್ತೆ ಎಚ್ಚರಿಕೆ ಕೊಟ್ಟು ಅಲ್ಲಿಯ ವರೆಗೆ ಇನ್ನೇನು? ಎಂದು ಕೊಂಡು ಆಚೆಮನೆಯಲ್ಲಿ ಹರಟೆ.

—ಮಧ್ಯಾಹ್ನದ ಊಟ ಕೆಲಸದವಳಿಗೆ ಅರ್ಧ ಬದನೇಕಾಯಿ, ಒಂದು ಸೌಟುಹುಳಿ, ಅರ್ಧವಾಟಿ ಅನ್ನ, ಎರಡು ಭಕ್ಕರಿ, ಚಟ್ನಿ ಇದ್ದರೆ ಇತ್ತು, ಇಲ್ಲದಿದ್ದರೆ ಇಲ್ಲ. ಇದ್ದ ಮೊಸರು, ಹಾಲು ತಾವು ಊಟದೊಂದಿಗೆ ಮುಗಿಸಿ ಕಪಾಟಿಗೆ ಬೀಗಮುದ್ರೆಯೊತ್ತಿ ಒಂದರಮೇಲೊಂದು ಹಾಸಿದ್ದ ಹಾಸಿಗೆಯ ಮಂಚದಲ್ಲಿ ಮುಸುಕೆಳೆದು ಮಲಗಿದ್ರೆ, ಏಳೋದು ಸಂಜೆ ನಾಲ್ಕು ಗಂಟೆಗೆ.

ಸಾಹೇಬರು ಅರ್ಧಗಂಟೆಯ ಕಾಲ ಮಲಗಿ, ಹೊರಗಿನ ವರಾಂಡಾದಲ್ಲಿ ಅತ್ತಿತ್ತ ಪಹರೆ ಮಾಡುತ್ತಿರಬೇಕು. ಇಲ್ಲವಾದ್ರೆ

ಯಾರದ್ರೂ ಬಂದು ಮಲಗಿದ್ದ ಮುದ್ದಿನ ಮಡದಿಯನ್ನು ಎಚ್ಚರಗೊಳಿಸಿದ್ರೆ ?

ಶ್ರೀಮತಿಯವರು ಎದ್ದು ಮುಖ ತೊಳೆದೊಡನೆ ಮತ್ತೆ ಪತಿಯಕೈಯ ಚಹಾಪಾನ. ಜೊತೆಗೆ ಮೂರು ನಾಲ್ಕು ಔಷಧದ ಗುಳಿಗೆ ನಂತರ ತಲೆಗೂದಲಿನ ಶೃಂಗಾರ. ಮುಡಿಯಲ್ಲಿ ಅದೇ ಆಗ ಅರಳಿದ ಗುಲಾಬಿ ಹೂ. ಮುಖಕ್ಕೆ ಘಮಘಮಿಸುವ ಪೌಡರ್ ಲೇಪನ. ಸಂಜೆ ತಮ್ಮಲ್ಲಿಗೆ ಯಾರಾದ್ರೂ ಬಂದರೆ ? ಮತ್ತೆ ತಿಂಡಿ ತೀರ್ಥಕ್ಕೆ ಹೆದರಿ ಪಕ್ಕದ ಮನೆಯಲ್ಲಿ ನಡೆಯುವ ಹರಟೆಯ ಗೋಷ್ಠಿಯಲ್ಲಿ ಸ್ವಲ್ಪ ಸಮಯ ಕಳೆದು, ಸಂಜೆಯ ವಾಕಿಂಗ ತಪ್ಪಿದರೆ, ತಮ್ಮ ದೇಹಸೌಂದರ್ಯ ಕೆಡಬಹುದೆಂದು, ಕಮಲದಳದಂತಿರುವ ತಮ್ಮ ಪಾದಗಳಿಗೆ ಅಪ್‌ಟುಡೇಟ್ ಚಪ್ಪಲಿ ಧರಿಸಿ ನಾಲ್ಕುಜನ ತಿರುಗಾಡುವಲ್ಲಿ ತಾವೂ ಸಂಚರಿಸುವದು.

ಒಂದೊಂದು ವೇಳೆ ಹೊರಗೆ ಹೊರಡುವ ಸನ್ನಾಹದಲ್ಲಿದ್ದಾಗ ಅಥಿತಿಗಳು ಆಗಮಿಸಿಬಿಟ್ಟರೆ, ತಾವು ನೋಡಿದ ಊರುಗಳು, ತಮ್ಮಲ್ಲಿದ್ದ ಸೀರೆ ಆಭರಣಗಳ ಪ್ರದರ್ಶನ ಮುಗಿಸಿ, ತಮ್ಮ ತೋಟದಲ್ಲಿದ್ದ ಬಗೆಬಗೆಯ ಹೂಗಳನ್ನು ತೋರಿಸಿ ತಮ್ಮ ವೈಭವದ ಪ್ರಭಾವ ಅಥಿತಿಗಳ ಮೇಲಾದುದನ್ನು ಕಂಡು ಶ್ರೀಮತಿಯವರ ಮುಖ ಅರಳುವದು— ಕೋಣೆಯ ಮೂಲೆಯೊಂದರಲ್ಲಿ ವರ್ತಮಾನ ಪತ್ರಿಕೆ ಮುಖದೆದುರು ಓದುವಂತೆ ನಟಿಸುತ್ತಿದ್ದ ಸಾಹೇಬರಿಗೆ ಅಷ್ಟೇ ಸಮಾಧಾನ! ತಾನು ನೀರೆರೆದು, ಮಣ್ಣು ಸರಿಪಡಿಸಿ, ಅರಳಿಸಿದ ಹೂಗಿಡಗಳು ಚಲುವೆಯರ ಕಂಗಳಿಗೆ ಹಬ್ಬವನ್ನುಂಟು ಮಾಡಿದೆಯಲ್ಲವೆ ? ಆ ಹೊಗಳಿಕೆಯಿಂದ ಉಬ್ಬಿ ಸಾಹೇಬರು ಚಟ್ಟನೆದ್ದು ಒಳಕ್ಕೆ ಹೋಗಿ ಸ್ಟೋವ್ ಹೊತ್ತಿಸಿ, ಚಹಾತಯಾರಿಸುವರು. ಅಡಿಗೆಯವಳಿದ್ದರೂ ಅವಳಿಗೆ ಹೇಳುವಂತಿಲ್ಲ. ಹಾಲು, ಚಹಾಪುಡಿ, ಸಕ್ಕರೆ, ಅವಳ ಕೈಯಲ್ಲಿತ್ತರೆ ಆಗಾಗ್ಗೆ ಅವಳು ಮಾಡಿ ಕುಡಿದರೆ ? ಬಾಯಿಸಾಹೇಬರ ಆಜ್ಞೆಗೆ ಪ್ರತಿ ನುಡಿಯುವದುಂಟೆ ?

ಮೊನ್ನೆ ಮೊನ್ನೆ ಶ್ರೀಮತಿಯವರ ಚಿಕ್ಕ ಮಗಳು ಪರಊರಿನಿಂದ ಬಂದವಳು ನಮ್ಮಲ್ಲಿಗೆ ಬಂದಿದ್ದಳು, ಸಂಜೆಗೆ. ಅವಳಿಗೀಗ ಪ್ರಾಯ ಇಪ್ಪತ್ತೊಂದು–ಇಪ್ಪತ್ತೆರಡಿರಬೇಕು.

“ ಏನಮ್ಮ ಶಾಲೂ... ತುಂಬ ಅಪರೂಪವಾಗಿ ಬಿಟ್ಟೆ? ಬಂದು ತಿಂಗಳಾದರೂ ಇತ್ತ ಕಡೆ ಬರಬಾರದೇ ? ಹಾಸ್ಟೇಲಿನ ಊಟ ನಿನಗೆ ಒಗ್ಗಿರಲಾರದು, ಆದರೆ ಮನೆಯೂಟ ಉಂಡೂ ಇಷ್ಟು ಬಚ್ಚಬೇಕೆ ? ”

“ ಅಲ್ಲಕ್ಕಾ ಎಲ್ಲಾ ಗೊತ್ತಿದ್ದೂ ಕೇಳ್ತಿರ್ರಲ್ಲಾ ? ತಾಯಿ ಇದ್ರೂ ನಾವೆಲ್ಲ ಅನಾಥರು. ನಲೂಕ್ಕಾ ಗಂಡನ ಮನೆಗೆ ಹೋದ ಮೇಲೆ ಈ ಮನೆ ಕನಸಿನಲ್ಲೂ ನೆನಸುತ್ತಿಲ್ಲವಂತೆ. ಅವ್ವಗೆ ತಾನಿನ್ನೂ ನನಗಿಂತ ಚಿಕ್ಕವಳು ಎನ್ನುವದು ಬೇಕಾಗಿದೆ. ಈಗ ನೋಡಿ ಇದ್ದ ಚಿನ್ನದ ಒಡವೆಯನ್ನೆಲ್ಲ ಮೈಮೇಲೆ ಹಾಕಿಕೊಂಡು

ಯಾವದೋ ಸಭಾಕ್ಕೆ ಹೋಗಿದ್ದಾಳೆ. ನನಗೆ ನಾಲ್ಕು ಸೀರೆ ಕೊಡಬೇಕಾದರೆ ಮೇಲು ಕೆಳಗಾಗುತ್ತಾಳೆ. ಕಪಾಟು ತುಂಬ ಸೀರೆ ಬಿದ್ದಿದೆ. ಮೊನ್ನೆ ನಡೆದ ಪ್ರಸಂಗ ನನ್ನ ಮನಸ್ಸಿಗೆ ತುಂಬ ನೋವು ಕೊಟ್ಟಿದೆ. ಅಪ್ಪಾ ಅಪ್ಪಾ ಫೇಡೆ ತಿನ್ನುತ್ತಿದ್ರು. ಪಾಪ, ನಮ್ಮ ನಲೂನ ಮಕ್ಕಳು ರಜೆಗೆ ಬಂದಿದ್ದಾರಲ್ವೆ ? ಅವಕ್ಕಾದರೂ ಕೊಡಬಾರದೇ ? ಅಜ್ಜಾ-ಅಜ್ಜಿಯಾದರೂ ಇವರು ಮೋಜು ಬಿಟ್ಟಿಲ್ಲ. ಅಣ್ಣನಿಗೆ ಹೆಣ್ಣು ನೋಡಲು ಹೊರಟಾಗ ಅವ್ವನ ಮಾತು ಕೇಳಬೇಕು ! ಆ ಹುಡುಗಿಯ ಬಣ್ಣ ನನ್ನ ಕಾಲಿನ ಬಣ್ಣಕ್ಕೂ ಇಲ್ಲ. ಮೂಗು ಚಪ್ಪಟೆ ಇನ್ನು ನಾಳೆ ಹುಟ್ಟುವ ಮಗು ಇವಳನ್ನೇ ಹೋಲಿ ಬಿಟ್ಟರೆ ? ಅಂತೂ ಅವ್ವನ್ನ ಬಿಟ್ಟೇ ಅಣ್ಣ ಅತ್ತಿಗೆಯನ್ನು ಒಪ್ಪಿದ. ಸೊಸೆಗೆ ಒಂದು ದಿನ ಸುಖ ಅನ್ನುವದನ್ನು ಕೊಡಲಿಲ್ಲ. ಅವಳೆ ದುರೇ ಹಂಗಿನ ಮಾತುಗಳು ಅಪ್ಪನೂ ಅದಕ್ಕೆ ಹೌದೆನ್ನಬೇಕೆ ? ಅಣ್ಣ ಆರೆಕ್ಷಣ ಅತ್ತಿಗೆ ಮಗುವನ್ನು ಅಲ್ಲಿ ಬಿಡದೆ ಬೆಂಗಳೂರಿಗೆ ಕರೆದೊಯ್ದ. ಈಗ ನೋಡಿ ಮೊಮ್ಮಕ್ಕಳು ಬಂದಿದ್ದಾರೆ. ಅವಕ್ಕೆ ಆಟ-ನೋಟ, ಊಟ-ತಿಂಡಿ ಹೋಗಲಿ ಒಂದು ಪ್ರೀತಿಯ ನುಡಿ! ಇಲ್ಲ-ಅದಾವುದೂ ಕೇಳಬೇಡಿ. ಜೈಲಿನಲ್ಲಿ ಎಷ್ಟು ಕಟ್ಟುನಿಟ್ಟೊ ಅಷ್ಟೇ ಕಟ್ಟುನಿಟ್ಟು ಈ ಮನೆಯಲ್ಲಿ. ಅತ್ತಲಿತ್ತಲಿನ ಹುಡುಗರು ತಪ್ಪಿಯೂ ಆಟಕ್ಕೆ ಬರಲಾರರು. ಮನೆಯಲ್ಲಿ ಯಾವ ಗಲಾಟೆ ಸದ್ದು, ಕಿರಚಾಟ, ರೇಡಿಯೋ, ಸಂಗೀತ ಯೇನೂ ಕೇಳುವಂತಿಲ್ಲ. ಮಕ್ಕಳಿಗೆ ಹಸಿವಾದರೆ ಅಕ್ಕ-ಪಕ್ಕದ ಪದ್ಮಮ್ಮ-ಶೀಲಕ್ಕನ ಮನೆಯೇ ಗತಿ. ಮನೆಯಲ್ಲಿ ಕೇಳಲು ಬಾಯೇ ಬಾರದು ಮೊಮ್ಮಕ್ಕಳಿಗೆ. ಇಂಥ ಮನೆಗೆ ಮನೆ ಎನ್ನುತ್ತಾರೆಯೇ ? ಸ್ಮಶಾನದ ನಿಶಬ್ದ-ನೀರವತೆ ಮನೆಯಲ್ಲಿ ತುಂಬಿಕೊಂಡಿದೆ. ಮನೆಗೆ ಬಂದ ಜನ— "ಈ ಮಕ್ಕಳು ಯಾರು ? ನಿಮಗೇನಾಗಬೇಕು ?" ಎಂದಾಗ— "ಇವು ನಮ್ಮ ನಲೂನ ಮಕ್ಕಳು ರಜೆಗೆ ಬಂದಿದ್ದಾರೆ. ಇವರು ಬಂದಮೇಲೆ ನನಗೆ ವಿಶ್ರಾಂತಿಯೇ ಇಲ್ಲದ ಹಾಗಾಗಿದೆ; ಅದು ಬೇಕು. ಇದು ಬೇಕು, ನನ್ನ ಕಟ್ಟಿಹಾಕಿದಂತಾಗಿದೆ. ಸರಿಯಾಗಿ ಒಂದು ಊಟವಿಲ್ಲ ಒಂದು ಕಣ್ತುಂಬ ನಿದ್ರೆ ಇಲ್ಲ. ಕಿವಿ ಕಿವುಡಾಗಿ ಬಿಟ್ಟಿದೆ ಇವರ ಗಲಾಟೆಯಿಂದ.

ಏಳು ಮಕ್ಕಳನ್ನು ಹೆತ್ತು, ಈಗ ಐವತ್ತೈದರ ಹೊಸ್ತಿಲಲ್ಲಿ ನಿಂತಿದ್ದ ಶ್ರೀಮತಿಯವರ ಬಾಯಿಯಲ್ಲಿ ಬಂದ ಮುಕ್ತಾಫಲಗಳಿವು. ಇಂಥ ಹೆಣ್ಣಿನಲ್ಲಿ ಆ ದಾ ವ ವಶೀಕರಣವಿದ್ದಿರಬೇಕು ? ಸಾಹೇಬರು ಕುರಿಮರಿಯಂತೆ ಕುಣಿಯುತ್ತಿರುವ ಕಾರಣ ? ಸಿರಿವಂತರ ಹೆಣ್ಣೆಂದೆ? ವಧೂ ಪರೀಕ್ಷೆಯಲ್ಲಿ ಕಾಲಿಗೆ, ಹಾಕಿದ ಚೈನದ ಕೆಳಗೆ ಹಸಿರುಗಟ್ಟಿದ್ದನ್ನು ಕಂಡು ಮೂಗು ಮುರಿದಿದ್ದರು ಸಾಹೇಬರು ಓದು ಬರೆಹ ಬಲ್ಲ ಸುಸಂಸ್ಕೃತ ಮಹಿಳೆ ಎನ್ನಲು ಅಪ್ಪಿತಪ್ಪಿ ಸಹಿಹಾಕುವ ಪ್ರಸಂಗ ಬಂದಾಗ ಮುಖನೋಡಿ ಪೆಚ್ಚಾದ

[ ೪೭ನೆಯ ಪುಟ ನೋಡಿರಿ ]

ಒಂದು ವಿವೇಚನೆ :

# ★ ಗೀತೆಯ ಶ್ರೀಕೃಷ್ಣ ★

ಶ್ರೀ ರಮಾನಂದ, ಎಂ. ಎ.

ಪರಮಾತ್ಮನ ಹತ್ತವತಾರಗಳಲ್ಲಿ ರಾಮ ಹಾಗು ಕೃಷ್ಣ ಇವರಷ್ಟು ಲೋಕಪ್ರಿಯರಾದವರು ವಿರಳ. ಬಹುತರವಾಗಿ ಹಿಂದಿನ ಕಾಲಕ್ಕೆ ಈ ಇಬ್ಬರೂ ಅವತಾರಿಕ ವ್ಯಕ್ತಿಗಳ ಭಕ್ತರಲ್ಲಿ ವಿದ್ವೇಷ ಭಾವನೆ ಇದ್ದಿರಬೇಕು. ರಾಮ ಕೃಷ್ಣ, ಹರಿಹರ ಎಂಬ ಜೋಡು ಹೆಸರುಗಳೆ ಇದಕ್ಕೆ ಸಾಕ್ಷಿ. ಆದರೆ ಇಂದು ಮಾತ್ರ ಹಿಂದಿನ ಪರಿಸ್ಥಿತಿ ಉಳಿದಿಲ್ಲ. ಎರಡೂ ಅವತಾರಿಕ ದೇವತೆಗಳನ್ನು ಲಕ್ಷಾಂತರ ಜನರು ಶ್ರದ್ಧೆಯಿಂದ ಪೂಜಿಸುತ್ತಿರುವರು. ರಾಮನವಮಿ, ರಾಮನು ಹುಟ್ಟಿದ ದಿನವೆಂದು ಆಚರಿಸಲಾಗುವ ಸ್ಥಳಗಳಲ್ಲಿ, ಕೃಷ್ಣಾಷ್ಟಮಿಯನ್ನು ಕೃಷ್ಣನ ಹುಟ್ಟು ಹಬ್ಬವೆಂದು ಅತೀವ ವಿಜೃಂಭಣೆಯಿಂದ ದೇಶದ ಮೂಲೆ ಮೂಲೆಗಳಲ್ಲಿ ಕೂಡ ಜನ ಆಚರಿಸುತ್ತಾರೆ.

ಈ ಎರಡು ಅವತಾರಗಳಲಿ ರಾಮ ಸುಲಭ ಗ್ರಾಹ್ಯ ದೇವತೆ. ಅವನ ಬಗ್ಗೆ ವಾದಗ್ರಸ್ಥ ಸಂಗತಿಗಳು ಅಪರೂಪ. ರಾಮನೆಂದರೆ ಆದರ್ಶ ವ್ಯಕ್ತಿ ಎಂದು ಎಲ್ಲರ ನಂಬುಗೆ. ಎಂಥ ವಿಪತ್ತುಗಳು ಬಂದರೂ ನ್ಯಾಯ ಪರಿಪಾಲನೆಗಾಗಿ ಅವನ ಹೆಸರು ಉಳಿದುಬಂದಿದೆ. ಪಿತೃ ಆಜ್ಞೆಯನ್ನಂತೂ ಅವ ಚಾಚು ತಪ್ಪದೆ ಪಾಲಿಸಿದ. ವನವಾಸಕ್ಕೆ ಹೋದ, ನಾರುಡಿ ಉಟ್ಟ, ಅವನ ಆದರ್ಶ ಪತ್ನಿ ಸೀತಾದೇವಿ ಕೂಡ ಅವನನ್ನು ನೆರಳಿನೋಪಾದಿಯಲ್ಲಿ ಸುಖದುಃಖಗಳೆರಡರಲ್ಲಿಯೂ ಹಿಂಬಾಲಿಸಿದಳು. ಅಂತೆ ಅವಳು ಪಂಚ ಕನ್ಯೆಯರಲ್ಲಿ ಬಂದಳು, ಪ್ರಾತಃಸ್ಮರಣೆಯ ಮಾತೆ ಆದಳು. ಶ್ರೀ ರಾಮನು ಮರ್ಯಾದಾ ಪುರುಷೋತ್ತಮ ನೆನಸಿದರೆ, ಶ್ರೀ ಕೃಷ್ಣ ಪೂರ್ಣ ಅವತಾರ. ತನ್ನ ಅಖಂಡ ಶಕ್ತಿಯನ್ನವ ಅವಿರತವಾಗಿ ಲೋಕಕಲ್ಯಾಣಕ್ಕಾಗಿ ಧಾರೆಯೆರೆದ.

ಶ್ರೀ ಕೃಷ್ಣನ ಪಾತ್ರ ಹಾಗೂ ಜೀವನ ತೊಡಕಿನದಾಗಿದೆ. ಅನೇಕ ವಾದಗ್ರಸ್ಥ ವಿಷಯಗಳು ಅವನ ಬಗೆಗೆ ಹುಟ್ಟಿಕೊಂಡಿವೆ. ಇಬ್ಬರು ಮೂವರು ಕೃಷ್ಣರು ಎಂದು ಕೂಡ ಕೆಲವರು ವಾದಿಸುವರು. ದೇವರ ಪುತ್ರ ಕೃಷ್ಣ ಎಂದು ಉಪನಿಷತ್ತು

ಸಾರುವದು. ಗೋಪಿಯರು ಮೋಹಿಸಿದ ಕೃಷ್ಣ ಬೇರೆ. ಕೆಲವರು ದೃಷ್ಟಿಯಲ್ಲಿ, ಶ್ರೀ ವ್ಯಾಸಮಹರ್ಷಿಗಳು ತಮ್ಮ ಅಪ್ರತಿಮ ಬುದ್ಧಿಮತ್ತೆಯಿಂದ ಶ್ರೀ ಕೃಷ್ಣನನ್ನು ನಿರ್ಮಿಸಿದರು, ಆದರೆ ಈ ಪಾತ್ರವೆ ಅದ್ಭುತವಾದದ್ದು. ಕಾವ್ಯ ಪ್ರತಿಭೆಯ ಮಂಥನದಿಂದ ಹೊರಬಂದಿದ್ದರೂ ಆ ಪಾತ್ರ, ಆ ವ್ಯಕ್ತಿತ್ವ ದಿವ್ಯವಾಗಿದೆ ಎಂಬಲ್ಲಿ ಸ್ವೀಕಾಂಶದ ಸಂದೇಹಕ್ಕೆ ಎಡೆ ಇಲ್ಲ.

ಶ್ರೀ ವ್ಯಾಸರು ನಿರ್ಮಿಸಿರುವ ಗೀತೆಯ ಶ್ರೀ ಕೃಷ್ಣ ಮಹಾ ವ್ಯಕ್ತಿ. ಆ ಪಾತ್ರದ ಅಭ್ಯಾಸ ಬಲು ರಂಜಕವಾದುದು; ಮಹಾಭಾರತ ರಂಗದಲ್ಲಿ ಕೃಷ್ಣನ ವ್ಯಕ್ತಿತ್ವ ಅನುಪಮವಾದುದು; ಭವ್ಯವಾದದು. ಅವ ತಾರವೆಂದರೇನೆಂಬುದು ಸುಲಭವಾಗಿ ಮೊದಲು ಅರ್ಥವಾಗುವದಗತ್ಯ. ಲೋಕದಲ್ಲಿ ಅನ್ಯಾಯ ಅತ್ಯಾಚಾರಗಳು ಅಸಹನೀಯವಾದಾಗ ದೇವರು ಮಾನವನ ರೂಪ ತಾಳಿ ಬಂದು ಎಲ್ಲವನ್ನು ಸರಿಪಡಿಸುವನು. ಪರಮಾತ್ಮನ ಶಕ್ತಿ ಅಪೂರ್ವ! ಅವನಿಗೆ ಅಶಕ್ಯವಾದ ಸಂಗತಿ ಯಾವುದು? ಲೀಲಾ ಸಾಮರ್ಥ್ಯದಿಂದ ನಿರ್ಮಿಸುವ, ಉರುಳಿಸುವವ. ಗೀತೆಯ ಶ್ರೀ ಕೃಷ್ಣನಲ್ಲಿಯಯ ಇಂತಹ 'ಕರ್ತುಮಕರ್ತುಮನ್ಯಥಾ ಕರ್ತುಂ' ಸಾಮರ್ಥ್ಯವಿರಲು ಸಾಕು.

ಭಗವದ್ಗೀತೆಯ ಆರಂಭದಿಂದಲೂ ಶ್ರೀಕೃಷ್ಣ ಅರ್ಜುನನ ಸಾರಥಿಯಾಗಿರುವ, ಅರ್ಜುನನು ಮಹಾ ಧನುರ್ಧಾರಿ! ತನ್ನ ಬಂಧುಬಾಂಧವರನ್ನು ಕೊಲ್ಲಲೇತು ಎಂದು ಅವ ಹೌಹಾರಿ ಹೋಗಿರುವ. ಆಗ ಶ್ರೀ ಕೃಷ್ಣ ಮೂಲಭೂತ ಕರ್ತವ್ಯ ಹೇಳಬೇಕಾಯಿತು. ಕರ್ತವ್ಯ, ಕಾರ್ಯರಹಸ್ಯಗಳ ಸ್ಫೋಟ ಆಗ ಆಯಿತು. ಇಷ್ಟಕ್ಕೆ ಅರ್ಜುನನಲ್ಲಿ ಜಾಗೃತಿ ಪೂರ್ಣವಾಗದಿರಲು ಶ್ರೀ ಕೃಷ್ಣನು ಆತ್ಮದ ಅಮೃತತತ್ವವನ್ನು ವಿವೇಚಿಸಬೇಕಾಗಿ ಬಂದಿತು. ಅರ್ಜುನನ ಅಹಂಕಾರಕ್ಕೆ ಆಗ ಪೆಟ್ಟು ಬಿದ್ದಿತು. "ನಾಹಂ ಕರ್ತಾ ಹರಿ ಕರ್ತಾ ನತ್ಪೂಜ್ಯ ಕರ್ಮ ಚೌಖಿಲಂ'' ಎಂಬ ತತ್ವ ಹೊರ ಹೊಮ್ಮಬೇಕಾಯಿತು. "ಯಂತ್ರಾರೂಢಾನಿಯಾಮಯ" ಅಂದಾಗ ಅರ್ಜುನನಿಗೆ ಹೊಣೆಗಾರಿಕೆಯ ಅರಿವಾಯ್ತು!

ಈಗ ಶ್ರೀಕೃಷ್ಣ ಉಪದೇಶಕ್ಕಾಗಿ ಮಾತ್ರ ಉಳಿಯಲಿಲ್ಲ. ಅರ್ಜುನನಿಗೆ ಅವನು ವಿಶ್ವರೂಪ ದರ್ಶಿಸಿದ. ಕೇವಲ ರಥವಾಹಕನಾಗದೆ ವಿಶ್ವವ್ಯಾಪಿ ಶಕ್ತಿಯಾಗಿ ಮಿಂಚಿದ. ಆಗ ಆ ರೂಪದ ಅಪೂರ್ವತೆ ನೋಡಲು ಅರ್ಜುನನಿಗೆ ದಿವ್ಯಚಕ್ಷು ಬೇಕಾಯಿತು. ಅದನ್ನು ಆಗ ಶ್ರೀಕೃಷ್ಣ ದಯಪಾಲಿಸಿದ. ಅರ್ಜುನನ ಚಿಂತೆ ಸಂಶಯ ಸಚ್ಛಿನ್ನವಾದುವು. ಆಗ ಅರ್ಜುನ ಮೊದಲಿನಂತೆ ಮಹಾವೀರನಾಗುವ ಸಂಕಲ್ಪಕ್ಕೆ ಮೊರೆ ಹೋದ. ಶಸ್ತ್ರಾಸ್ತ್ರಗಳನ್ನು ಹಿಡಿದ, ತಾನು ಮಾಡುವೆನು ಎಂಬ ಜಂಭ ಅಳಿದು ಹೋಯ್ತು, ನವ ಚೈತನ್ಯಸ್ಫುರಿಸಿತು.

ಬಹುತರವಾಗಿ ಜಗತ್ತಿನ ಯಾವ ಪುರಾಣದಲ್ಲಿಯೂ ಇಂತಹ ಅಪೂರ್ವ ಘಟನೆ ನಡದುದು ನಾವು ಕೇಳಿಲ್ಲ. ಮನುಷ್ಯ ದೇವರೆದುರಿಗೆ ಬಂದು ಜಾಗತಿಕ ತತ್ವ

ಯೋಧನ ಗುಣ ಚರ್ಚಿಸಿದುದು ಹಿಂದೂ ಪುರಾಣಗಳ ವೈಶಿಷ್ಠ ಮೊಟ್ಟ ಮೊದಲಿನದು. ಇಂದು ಶ್ರೀ ವ್ಯಾಸ ಮಹರ್ಷಿಗಳ ಸ್ವಕಪೂಲ ದಿವ್ಯ ಮಾದರಿ.

ಗೀತೆಯನ್ನು ಕೂಲಂಕಷವಾಗಿ ಬೆದಕಿ ನೋಡಿದರೆ, ಮಾನವ ಅತಿ ಮಾನವನಾಗಲು ಸಾಧ್ಯವಿದೆ ಎಂದು ಕಂಡುಬರುವದು. ಕ್ಷತ್ರಿಯನು ಜಾಗತಿಕ ತತ್ವವರಿತು ಮಹತ್ಕಾರ್ಯ ಸಾಧಿಸಲು ಹೆಣಗಿದುದು ಸಾಮಾನ್ಯರ ದೃಷ್ಟಿಯಿಂದ ಅಪೂರ್ವ ಅನುಭವ. ಅರ್ಜುನನಿಗೆ ನಿವೃತ್ತ ಇಲ್ಲವೆ 'ಮುಕ್ತ ಕರ್ಮವನ್ನು' ಸಾಧಿಸಿದ ಕೊನೆಯ ಪರಿಣಾಮ. ಅರ್ಜುನನು ತನ್ನ ಸರ್ವಶಕ್ತಿಯುಕ್ತ ರೀತಿಯಲ್ಲಿ ವ್ಯಯಿಸಿದ ತಾತ್ವಿಕ ಹಾಗು ಮಾನಸಿಕ ವಿಚಾರಸರಣಿಯಿಂದಲೂ ಕೃಷ್ಣಾರ್ಜುನರ ದಿವ್ಯ ಸಂವಾದ ಮಹತ್ವದ್ದು. ಹೆಚ್ಚು ಹೆಚ್ಚು ಆಳವಾಗಿ ಯೋಚಿಸಿದಂತೆ ಗೀತೆಯಲ್ಲಿ ಅನರ್ಘ್ಯ ರತ್ನಗಳು ಉದಿಸಿ ಬೆಳಕಿಗೆ ಬರುವವು. ಅದೆಲ್ಲ ವ್ಯಕ್ತಿಯು ಬಲಾಬಲ ಅವಲಂಬಿಸಿದೆ. 'ಯದ್ಯದಾಚರತಿ ಶ್ರೇಷ್ಠ. ತತ್ತ ದೇವೇತರೆ ಜನಾಃ', 'ನಿಯತಂ ಕುರು ಕರ್ಮ ತ್ವಂ', 'ಸುಖೆದುಃಖೆ ಸಮೇಕೃತ್ವಾ ಲಾಚೌ ಜಯಾ ಜಯೌ' ತತ್ಮಾತ ಶಾಸ್ತ್ರಂ ಪ್ರಮಾಣಂ ತೆ ಕಾರ್ಯಾಕಾರ್ಯ ವ್ಯವಸ್ಥಿತೌ, 'ನ ಬುಧ್ಧಿ ಭೇದಂ ಜನಯೇತ್ ಅಜ್ಞಾನಾತ್ ಕರ್ಮಸಂಗಿನಾಂ' ಮುಂತಾದವು ವಿಜಯಕ್ಕು ಆಣೆ ಮುತ್ತುಗಳು. ಮನುಷ್ಯನಿಗೆ ಅಖಂಡ ಸಂಸ್ಕಾರ ಒದಗಿಸುವ ಆದರ್ಶ ಇವು. ಇದೀಗ ಗೀತಾಚಾರ್ಯನ ಮಹತಿ ಅಪ್ರತಿಮ ಮೇಲ್ಮೆ!

ಯತ್ರ ಯೋಗೀಶ್ವರ ಕೃಷ್ಣ
ಯತ್ರಪಾರ್ಥೋ ಧನುರ್ಧರಃ ।
ತತ್ರಶ್ರೀರ್ವಿಜಯೊ ಭುರ್ವೇ ಧೃವಾ
ನೀತಿರ್ಮತಿರ್ಮಮ ॥

* * *



"ಇನ್ನೆಂಥ ಸಮಾಜವಾದಿ ಸರಕಾರವೇ ಬರಲಿ ಅಥವಾ ಹೊಸದಾಗಿ ಸೃಷ್ಟಿಯಾಗಲಿ, ನಮ್ಮ ನಮ್ಮ ಮಕ್ಕಳನ್ನು ನಾವು ಪ್ರೀತಿಸುವದಕ್ಕಿಂತ ಅಧಿಕವಾಗಿ, ಮಲತಾಯಿಗಿಂತ ಕೀಳಾದ ಸರಕಾರ ಪ್ರೀತಿಸಬಲ್ಲದೆಂದು ನಾನು ತಿಳಿಯಲಾರೆ."

—ಶಿವರಾಮ ಕಾರಂತ

[ ೭ನೇ ಪುಟದಿಂದ ]

Is all the truth I know
or seek, O, Sage"
—Savitri p. 813

ಸತ್ಯವಂತರ ಆತ್ಮಗಳಿಗೆ ನವಸರ್ಗವಿಧಾನ ಸಮರ್ಥಳಾದ ಸಾವಿತ್ರಿ ಹೇಳುವ ಮಂತ್ರ · 'To love is to live'. ಚತುರ್ಮುಖ ಯೋಗದಲ್ಲಿಯೇ ಏಕ ಕಾಲಕ್ಕೆ ಭಗವದ್ಭಕ್ತಿಯಿಂದ ಜೀವನವು, ಜೀವನದಿಂದ ಭಗವದ್ಭಕ್ತಿಯು ಹೊರ ಹೊಮ್ಮುವುದು. ಅದು ವನಮಾನವನ ಅಂತರ್ಯಾಗ ದೀಕ್ಷೆ.

---

[ ೩೮ನೆಯು ಪುಟದಿಂದ ಬಂದುದು ]

ಇದರ ಮಹತ್ವ ಅಷ್ಟಿಷ್ಟಲ್ಲ. ಇದರ ಉಪಯೋಗದಿಂದ ಸೈನಿಕ ನಿರೀಕ್ಷಕರು ರಾತ್ರಿಯಲ್ಲಿಯೂ ಕೂಡ ಹಗಲಿನಂತೆಯೇ ಸ್ಪಷ್ಟವಾಗಿ ವಸ್ತುಗಳನ್ನು ನೋಡಬಹುದು ಆದರೆ ಸದಾಕಾಲವೂ ನಾವು ನೋಡ ಬಯಸುವ ವಸ್ತುಗಳಿಂದ ರಕ್ತಾತೀತ ಕಿರಣ ಗಳು ಹೊರಟೇತೀರುತ್ತವೆ ಎಂಬ ನಿಯಮ ವೆಲ್ಲಿಯದು? ವಸ್ತುಗಳು ಬಿಸಿಯಾಗಿದ್ದರೆ (ವಿಮಾನದ ಎಂಜಿನ್ನು, ಉಗಿಹಡಗದ ಹೊಗೆಗೊಳವೆ, ಮೋಟಾರು, ಟ್ರಾಮುಗಳ ಲ್ಲಿಯ ಯಂತ್ರಗಳು ಕಂಡುಬಂದಾವು) ಇನ್ನುಳಿದ ವಸ್ತುಗಳ ವಿವರಣೆಗಳ ಗತಿ ಏನು? ಅದಕ್ಕಾಗಿ ಇಂಥ ದೂರದರ್ಶಕ ಗಳ ಜೊತೆಯಲ್ಲಿಯೇ ರಕ್ತಾತೀತ ಕಿರಣ ಗಳನ್ನು ಉತ್ಪಾದಿಸಬಲ್ಲ ಸರ್ಚಲಾಯ್ಟು (Search light) ಗಳನ್ನು ಉಪಯೋ ಗಿಸುತ್ತಾರೆ. ವಸ್ತುಗಳಿಂದ ಈ ಕಿರಣ ಗಳು ಹುಟ್ಟದಿದ್ದರೂ ಪರಾವರ್ತನೆ ಯಾಗಲು ಯಾವ ಅಭ್ಯಂತರವಿಲ್ಲವಷ್ಟೇ. ವಸ್ತುಗಳ ಪ್ರತಿಬಿಂಬಗಳ ಸ್ಪಷ್ಟತೆ ಮಾತ್ರs ತುಸು ಕಡಿಮೆಯಾದೀತು. ಏನನ್ನೂ ನೋಡುವದು ಸಾಧ್ಯವಿರದಾಗ ಇದು ಸಹಸ್ರಪಾಲು ಮೇಲಲ್ಲವೆ?

---

[ ೩೨ನೆಯು ಪುಟದಿಂದ ಬಂದುದು ]

ನಾವಿಬ್ಬರs!... ಒಂದಿಷ್ಟುಹಾಲು—ಶಿರಾ! ...... ಓ Sorry! ನಮ್ಮದೇ ಶಿರ ಹೋದೀತು!...... ಏನು ರಾಯಪ್ಪ ನಾಯಕನ ಫರಾಳ ?... ಹೂಂ!... ನನ್ನ ಮಂತ್ರ ನನಗs ತಿರುಗಿಸಿದ್ಯಾ ?...ಆಗಲಿ! ಒಪ್ಪೊತ್ತಿನ ಏಕಾದಶಿ ಅಂದಮ್ಯಾಲೆ ಏನೂ ತಿಂಬೂದು ಬ್ಯಾಡ!... ನನ್ನ ಜೀವಾs ಮಾತ್ರ ನೀ ತಿನಬ್ಯಾಡಾ ಆತು ಏಕಾದಶಿ ಅಂತ!......

---

[ ೪೨ನೆಯು ಪುಟದಿಂದ ಬಂದುದು. ]

ವಂಡದಿ! ಹಾಗಾದರೆ ಇದಕ್ಕೆ ಕಾರಣ ? ಅತ್ತೆಗೊಂದು ಕಾಲ ಸೊಸೆಗೆ ಒಂದು ಕಾಲ— ಸಾಹೇಬರು "ತಮ್ಮ" ದಿನಗಳಲ್ಲಿ ತೆರೆಯ್ಯ ಮರೆಯಲ್ಲಿ ವೆ ರೆದುದನ್ನು ಈಗ ಮರೆಸಲು ಹೂಡಿದ ನಾಟಕಕ್ಕೆ ಈ ವೇಷ—

ಇಂಥ ಮನೆಯ ಬಾಗಿಲು ತೆರೆದಿದ್ದರೂ ತೆರೆದ ಮನದಿಂದ ಯಾರು ಹೋಗಲಿ ಸಾಧ್ಯ? ಅಂತೆ ನವ ನಂಪತಿಗಳಂತೆ ಎದುರ ಬದುರು ಕುಳಿತು ದಿನ ದೂಡುವುದನ್ನು ನಾನು ನನ್ನ ಮನೆಯ ಬಾಗಿಲಿನಿಂದ ದಿನವೂ ನೋಡುತ್ತಿದ್ದೇನೆ. ಇಂಥವರು ಸ್ನೇಹ ಜೀವಿ ಹೇಗಾದರು ? ನನ್ನ ಮಾತಿಗೆ ನೀವು ಈಗಾದರೂ ಒಪ್ಪುತ್ತೀರಲ್ಲವೆ ?

* * *

ಬರ ೧೧, ೧೯೬೬ ರಿಂದ ೧೩ನೆಯ ಅಕ್ಟೋಬರಿನವರೆಗ ಗುಲ್ಬುರ್ಗಾದಲ್ಲಿಯ ೬ ಪಂಚಾಯತಿಗಳನ್ನು ಹಾಗು ತಾಲೂಕಾ ಅಭಿವೃದ್ಧಿ ಮಂಡಳಗಳನ್ನು ಅಕ್ಟೋಬರ ೧೫ರಿಂದ ೧೭ರ ವರೆಗೆ ಧಾರವಾಡ ಜಿಲ್ಲೆಯ ಆರು ಪಂಚಾಯತಿಗಳು ಹಾಗು ಎರಡು ತಾಲೂಕು ಅಭಿವೃದ್ಧಿ ಮಂಡಳ ಗಳನ್ನು, ಅಕ್ಟೊಬರ ೧೮ರಿಂದ ೨೦ರ ವರೆಗೆ ಮೈಸೂರ ಜಿಲ್ಲೆಯ ಕೆಲವು ಪಂಚಾ ಯತಿಗಳು ಹಾಗು ತಾಲೂಕಾಭಿವೃದ್ಧಿ ಮಂಡಳಗಳನ್ನು ಸಂದರ್ಶಿಸಿ ಪಂಚಾಯತಿ ರಾಜ್ಯಾಡಳಿತೆಯ ಒಂದು ಪ್ರತ್ಯಕ್ಷ ದರ್ಶನ ವನ್ನು ಪಡೆದರು. ಈ ತಂಡದ ಅಧ್ಯಕ್ಷ ರಾದ ಶ್ರೀ ರಾಜಾರಾಮ ಅವರು ಅಭಿ ಪ್ರಾಯ ಇಂತಿದೆ. "ಪಂಚಾಯತಿ ಆಡಳಿತೆ ಯಲ್ಲಿ ತೊಡಗಿಸಿರುವ ಅನೇಕ ಸದಸ್ಯರು ಕೊಂಡಜ್ಜಿ ಬಸಪ್ಪನವರ ಮಸೂದೆ ಜಾರಿಗೆ ಬರಬೇಕೆಂಬ ಅಭಿಪ್ರಾಯವನ್ನು ವ್ಯಕ್ತಪಡಿ ಸಿದ್ದಾರೆ. ಪಂಚಾಯತಿ ರಾಜ್ಯ ಪ್ರಾರಂಭ ವಾಗಿ ಗ್ರಾಮಗಳಲ್ಲಿ ಪಂಚಾಯತಿಗಳ ಸ್ಥಾಪನೆಯಿಂದಾಗಿ ಗ್ರಾಮಜೀವನ ಜಾಗ್ರ ತಗೊಂಡಿದೆ. ಸಾಮಾನ್ಯವಾಗಿ ಸರ್ವ ತೋಮುಖ ಪ್ರಗತಿ ಕಂಡುಬಂದಿರುತ್ತದೆ. ಗ್ರಾಮಗಳಲ್ಲಿ ಅಭಿವೃದ್ಧಿ ಕಾರ್ಯಗಳಿಗೆ ತೋರುತ್ತಿರುವ ಉತ್ಸಾಹವನ್ನು ಕಂಡಾಗ ಪ್ರಜಾಸತ್ತಾತ್ಮಕ ರಾಜ್ಯ ಪದ್ಧತಿಯು ನಮ್ಮ ದೇಶದಲ್ಲಿ ಚನ್ನಾಗಿ ನೆಲೆಯೂರಿದೆ. ಇನ್ನು ಹತ್ತು ವರ್ಷಗಳಲ್ಲಿ ಪಂಚಾಯತಿ ರಾಜ್ಯಾಡಳಿತ ಸಂಸ್ಥೆಗಳು ಬಹಳ ಉತ್ತಮ ವಾಗಿ ಕಾರ್ಯ ರಂಗದಲ್ಲಿ ಸ್ಥಾಪಿತವಾಗು ತ್ತವೆಂಬುದರಲ್ಲಿ ಸಂದೇಹವಿಲ್ಲ. ಆಗ ನಮ್ಮ ದೇಶದಲ್ಲಿ ನಿಜವಾದ ಗ್ರಾಮೀಣ ಸ್ವರಾ ಜ್ಯದ ಕನಸು ನನಸಾಗುತ್ತದೆ."

"ಧಾರವಾಡ ಜಿಲ್ಲೆಯ ಗ್ರಾಮಗಳ ಮಹಿಳಾ ಮಂಡಳಗಳ ಕಾರ್ಯ ನಮ್ಮ ಗಮನ ಸಳೆಯಿತು. ಪ್ರತಿ ಗ್ರಾಮ ಕ್ಕೊಂದು ಮಹಿಳಾ ಮಂಡಳ ಹೆಣ್ಣು ಮಕ್ಕಳು ಗ್ರಾಮಾಭಿವೃದ್ಧಿಯ ಕಾರ್ಯ ದಲ್ಲಿ ಹೆಚ್ಚು ಆಸ್ತೆಯನ್ನು ವಹಿಸಿ ಕೆಲಸ ಮಾಡುವದನ್ನು ನಾವು ಕಂಡೆವು. ಇಲ್ಲಿಯ ಹೆಣ್ಣು ಮಕ್ಕಳು ಒಕ್ಕಲುತನಕ್ಕೆ ಸಂಬಂಧಿ ಸಿದ ಕೆಲಸಗಳನ್ನು ಮಾಡುತ್ತಾ ಆಹಾರ ಧಾನ್ಯ ಉತ್ಪಾದನೆಯನ್ನು ಹೆಚ್ಚಿಸಲು ದುಡಿಯುವದನ್ನು ನೋಡಿ ಸಂತೋಷ ಪಟ್ಟಿದ್ದೇವೆ. ಧಾರವಾಡ ಜಿಲ್ಲೆಯ ಈ ಕಾರ್ಯ ಆದರ್ಶಪ್ರಾಯವಾದುದರಿಂದ ಇತರರು ಇದನ್ನು ಅನುಸರಿಸಬೇಕು".

ಶ್ರೀ ರಾಜಾರಾಮರವರ ಅಭಿಪ್ರಾಯ ದಲ್ಲಿ ರಾಜಕೀಯ ಪಕ್ಷಗಳು ಗ್ರಾಮಪಂಚಾ ಯತಿಗಳ ತಾಕಲಾಟಕ್ಕೆ ಬೀಳಬಾರದು. ಪಂಚಾಯತಿ ರಾಜ್ಯದ ಕಾರ್ಯಾಚರಣೆಯು ಪಕ್ಷಗಳರಾಜಕೀಯದಿಂದ ದೂರವಿರಬೇಕು.

ಸಣ್ಣ ಕತೆ :

# ಸ್ವಾಮೀಜಿ

ಶ್ರೀ ವರದರಾಜ ಹುಯಿಲಗೋಳ,
ಎಂ. ಎ., ಬಿ. ಟಿ,

★ ★ ★

ಸ್ವಾಮೀಜಿಯವರ ಪಾದಗಳನ್ನು ಮುಟ್ಟಿ ಮುಟ್ಟಿ ನಮಸ್ಕರಿಸುತಿದ್ದರು. ಹೆಂಗಸರು, ಗಂಡಸರು, ಹುಡುಗರು ಎಲ್ಲರೂ ಗಟ್ಟಿಯಾಗಿ ಎರಡೂ ಕೈಗಳಿಂದ ಹಿಡಿದು ವದಿಸುತ್ತಿದ್ದರು.

ಸ್ವಾಮೀಜಿಯವರಿಗೆ ಈ ರೀತಿಯು ಮೊದಮೊದಲು ವಿಚಿತ್ರವಾದ ಅನುಭವವನ್ನು ತರಹತ್ತಿತು. ಈಗ ಒಂದು ತಿಂಗಳಿಂದ ಅವ್ಯಾಹತವಾಗಿ ಜನರು ಹಾಗೆ ನಡೆದುಕೊಳ್ಳುವದನ್ನು ನೋಡಿ ಅವರಿಗೂ ರೂಢಿಯಾದಂತಾಗಿದೆ. ಆದರೂ ಅವರ ಮನಸ್ಸಿನಲ್ಲಿ ಅನೇಕ ವಿಚಾರಗಳು ಬರದೇ ಹೋಗುವದಿಲ್ಲ. ಪದವೀಧರರಾಗಿ ಸುಮ್ಮನೇ ಎಲ್ಲಿಯಾದರೂ ನೌಕರಿಹಿಡಿದು ಕೊಂಡು ಹೊಟ್ಟೆ ಹೊರಕೊಳ್ಳಬಹುದಿತ್ತಲ್ಲ! ಸುಮ್ಮನೇ ಬಂದು ಒಂದು ಮಠದ ಆದಿಪತ್ಯವನ್ನು ಪಡೆದು, ಭಕ್ತರಿಂದ ಬೆನ್ನು ಚಪ್ಪರಿಸಿಕೊಂಡು, ಢಾಂಬಿಕ ಧರ್ಮದ ಪದ್ಧತಿಯನ್ನು ಅನುಸರಿಸುವದರಲ್ಲಿ ಯಾವ ಹಿತ ಅಡಗಿಕೊಂಡಿದೆ? ಮನುಷ್ಯರು ಮನುಷ್ಯರಿಗೆ ತಲೆಬಾಗಿ ನಮಸ್ಕರಿಸುವದರಲ್ಲಿ ಯಾವ ಗೌರವವಿದೆ? ಸರಿಸಮಾನತೆ ಇದೆ ?

ಅಂದು—ಆದಿನ—ಕಾಲೇಜ ಜೀವನದ ಕೊನೆಯ ವರ್ಷದಲ್ಲಿರುವಾಗ ದೇವರ ಅಂತಃಪ್ರೇರಣೆಯಾಗದೆಯೆ ಇದ್ದರೆ ಜಗದ್ಗುರು ರಾಜೇಂದ್ರ ಸ್ವಾಮಿಗಳ ಜೀವನದ ರೀತಿಯು ಬೇರೆಯಾಗಬಹುದಿತ್ತು. ದೂರ ದೂರ ಊರ ಹೊರಗೆ ತಿರುಗಾಡಿ ಮನೆಗೆ ತಿರುಗಿ ಬರುವಾಗ ಒಮ್ಮೆಲೆ ಕಾರ್ಮೋಡ ಮುಸುಕಿತು. ಗುಡುಗು ಮಿಂಚುಗಳ ಆರ್ಭಟೆ ಜೋರಾಯಿತು. ರಾಜೇಂದ್ರರ ಮನಸ್ಸು ಅಳುಕಿತು; ಮೈ ನಡುಗಿತು ಸುತ್ತಲು ಕತ್ತಲೆಯೆ ಕತ್ತಲು ದೇಹವನ್ನು ತೋಯಿಸಿಕೊಂಡು ಕೊನೆಗೆ ಮರಳಿ ಬಂದರು. ರಾತ್ರಿ ಸುಧೀರ್ಘವಾದ ಕನಸು! ಕತ್ತಲೆ ಮಿಂಚು! ಕತ್ತಲೆ ಮಿಂಚು! ಯಾವುದೋ ಸಾಕ್ಷಾತ್ಕಾರ!

ಬೆಳಗಿನಲ್ಲಿ ಎದ್ದಾಗ ಮನಸ್ಸು ಬಹಳ ಹಗುರಾಗಿದ್ದಿತು. ಹಕ್ಕಿಯಂತೆ ಹಾರಾಡುತ್ತಿದ್ದಿತು. ಗಾಳಿಗಿಂತ ವೇಗದಿಂದ ಓಡುತ್ತಿತ್ತು! ತುಸುದಿನಗಳಲ್ಲಿ ಕೋಣೆಯ

ಕಪಾಟುಗಳು ಅಧ್ಯಾತ್ಮ ಪುಸ್ತಕಗಳಿಂದ ತುಂಬಿದವು. ರಾಮಕೃಷ್ಣ ಪರಮಹಂಸ, ವಿವೇಕಾನಂದ, ಅರವಿಂದ ಮಹರ್ಷಿ ಮುಂತಾದ ಮಹರ್ಷಿಗಳ ಹೊತ್ತಿಗೆಗಳು ಕೋಣೆಯ ತುಂಬ ಕಂಡವು. ಅಧ್ಯಾತ್ಮದ ವಿಷಯವೇ ಅವರ ಪರೀಕ್ಷೆಯ ವಿಷಯ ವಾದುದರಿಂದ ಆ ಗ್ರಂಥಗಳನ್ನು ಓದಲು ಮತ್ತಷ್ಟು ಆನಂದವಾಗುತ್ತಿದ್ದಿತು.

ಪರೀಕ್ಷೆ ಮುಗಿಯುವದೊಂದೆ ತಡ... ರಾಜೇಂದ್ರರು ಮನೆಗೆ ಶರಣು ಹೊಡೆದು ದೂರ ಹೋದರು. ಕಾವೇರಿ ನದಿಯ ನಡುನೀರಿನಲ್ಲಿ ಒಂದು ದ್ವೀಪ. ಅಲ್ಲಿ ಯಾರೋ ಪುರಾತನ ಕಾಲದಲ್ಲಿ ಕಟ್ಟಿಸಿದ ಚಿಕ್ಕ ಈಶ್ವರದೇವಾಲಯ. ದೇವಾಲಯದ ಸುತ್ತಲೂ ತೆಂಗಿನ ಮರಗಳು ನೀಳವಾಗಿ ಬೆಳೆದಿದ್ದವು. ಅಲ್ಲಿ ಅಪೂರ್ವವಾದ ಶಾಂತಿ! ಬಂಡೆಗಳಲ್ಲಿ ಹಾದುಬರುವ ನೀರಿನ ಸಪ್ಪಳವೇ, ಸಪ್ಪಳ. ರಾಜೇಂದ್ರರು ಆ ದೇವಾಲಯದಲ್ಲಿ ಕುಳಿತು ಪದ್ಮಾಸನಸ್ಥ ರಾಗಿ 'ಶಾಂತಿಃ! ಶಾಂತಿಃ! ಶಾಂತಿಃ!' ಎಂದು ಜಪ ಪ್ರಾರಂಭಿಸಿದರು.

ರಾಜೇಂದ್ರರಿಗೆ ಹಲವರು ತಲೆಕೆಟ್ಟಿದೆ ಎಂದರು— ಲಗ್ನವಾಗದಿದ್ದಕ್ಕೆ ಕೆಲವರು ಹುಚ್ಚೆ ಹಿಡಿದಿದೆ ಎಂದರು! ಕೆಲವು ರಾಜಕಾರಣಿಗಳು ಯಾವುದೋ ಗುಪ್ತ ಕಾರಸ್ಥಾನ ನಡೆಸಲು ಹೀಗೆ ನಟಿಸುವ ನೆಂದರು. ಸನ್ಮಾರ್ಗಗಳಲ್ಲಿ ನಡೆದ ವಿಭೂತಿಗಳ ತಪೋಬಲ ಸಾಮಾನ್ಯರಿಗೆ ಹೇಗೆ ಗೊತ್ತಾಗಬೇಕು. ಟೀಕಿಸುವದೊಂದೆ ಅವರ ಚಟವು; ತಂದೆ-ತಾಯಿಗಳಿಗೆ ಅಳುವದೊಂದೆ ಉಳಿವು.

ದೇವಗಿರಿಯ ಮಠಾಧಿಪತ್ಯವನ್ನು ವಹಿಸುವದು ರಾಜೇಂದ್ರರಿಗೆ ಬೇಕಾಗಿರ ಲಿಲ್ಲ. ಆರೇಳು ವರುಷಗಳಲ್ಲಿಯೆ ಇವರ ತಪ ಪ್ರಭಾವವು ಸಮೀಪದಲ್ಲಿಯ ದೇವಗಿರಿಯ ಜನರಿಗೆ ಮುಟ್ಟಿದ್ದಿತು; ಮನವರಿಕೆಯೂ ಆಗಿತ್ತು. ಅವರು ಡೋಣಿಗಳಲ್ಲಿ ಕುಳಿತು ಈಶ್ವರ ದೇವಾಲ ಯಕ್ಕೆ ಬಂದು ರಾಜೇಂದ್ರರ ಸಂಗಡ ಪ್ರೀತಿಯಿಂದ ಚರ್ಚೆಗಳನ್ನು ಮಾಡಿ ಹೋಗುತ್ತಿದ್ದರು. ಅವರೆಲ್ಲರಿಗೂ ಸಮಾ ಧಾನವಾಗುವಂತೆ ಅವರು ಉತ್ತರಕೊಡು ತ್ತಿದ್ದರು. ಇವರ ಮಹಿಮೆಯು ಹಬ್ಬಿದ ಕೂಡಲೆ ವಾರಸದಾರರಿಲ್ಲದ ದೇವಗಿರಿಯ ಸ್ವಾಮಿಯವರಿಂದ ರಾಜೇಂದ್ರರಿಗೆ ಕಾಯಿ ಕೊಡಸಿದರು. ಜನರ ಜುಲುಮೆಗಾಗಿ ಅವರು ಅದನ್ನು ಸ್ವೀಕರಿಸಬೇಕಾಯಿತು ಆಗ ಅವರು ಜಗದ್ಗುರು ರಾಜೇಂದ್ರ ಸ್ವಾಮಿಗಳಾದರು.

ಮಠಾದಿಪತಿಗಳಾದ ಮೇಲಿನ ಜೀವನ ಮೊತ್ತ ಮೊದಲಿನ ಜೀವನದಲ್ಲಿ ಅಪರಂ- ಪಾರ ಭೇದವು ಸ್ವಾಮಿಜಿಯವರಿಗೆ ಅನಿಸ ತೊಡಗಿತು. ನೀರಿನ ತಿಗಳ ಮೇಲೆ ನಿಂತ ಈಶ್ವರ ದೇವಾಲಯದಲ್ಲಿ ಕಳೆದ ಏಕಾಂತ ಜೀವನದ ಸೊಗಸೇ ಅಪೂರ್ವ ನಿರ್ಮಲ ವಾದ ಪ್ರೇಮವು ಎಲ್ಲೆಡೆಗಳಲ್ಲಿ ಹೊರ ಸೂಸಿ ಹರಿಯುತಿತ್ತು. ದೇವರೂ ಸಹ ಅವರ ಹೃದಯವನ್ನು ವಿಕಸಿತವಾಗಿ ಮಾಡುತಿದ್ದನು.

ಈಗ ಸ್ವಾಮೀಜಿಯವರ ಹತ್ತಿರ ಮೂಢ ನಂಬಿಕೆಯ ಜನರೇ ಹೆಚ್ಚು. ಬರಿ ಆಡಂಬರದ ಔದಾರ್ಯ. ದೇವಗಿರಿಯ ಮಠಾಧಿಪತ್ಯವನ್ನು ಬಿಟ್ಟು ಸರ್ವಜ್ಞನಂತೆ ತಿರುಗಾಡಿದರೆ ಜನರು ತಮಗೆ ಏನೂ ಬೆಲೆ ಕಟ್ಟುವದಿಲ್ಲೆಂದು ಅವರಿಗೆ ಗೊತ್ತು.

ಸಂಜೆ ಮಠದ ಮುಂದಿನ ತೋಟದಲ್ಲಿ ಹೀಗೆ ಅನೇಕ ವಿಚಾರಗಳಲ್ಲಿ ಮಗ್ನರಾಗಿದ್ದರು. ದೂರದಲ್ಲಿ ದೇವಗಿರಿಯ...... ಪರ್ವತ ಶಿಖರಗಳು ಕಾಣುತಿದ್ದವು ಸೂರ್ಯ ಕೆಂಪುವರ್ಣದ ಓಕಳಿ ಆಡಿ ಶಿಖರಗಳ ಕಡೆಗೆ ಓಡಿ ಹೋಗುತಿದ್ದನು.

"ಸ್ವಾಮೀಜಿ" ದಿವಾನರು ನುಡಿದರು.

ಮೊದಲೆ ಅವರ ಮೈಬಣ್ಣ ಕೆಂಪು ಕಣ್ಣುಗಳು ತೇಜಸ್ಸುಳ್ಳವು. ಅವರು ಮುಖ ಹೊರಳಿಸಿದಾಗ ನೇಸರನ ಕೆಂಪು ಕಿರಣಗಳು ಅವರ ಮುಖದ ಮೇಲೆ ಆಟ ಮಾಡುತಿದ್ದವು, ದಿವಾನರು ಆ ತೇಜಸ್ಸನ್ನು ಕಂಡು ಭಯಭಕ್ತಿಯಿಂದ ಅವರ ಪಾದ ಮುಟ್ಟಿ ಮತ್ತೊಮ್ಮೆ ನಮಸ್ಕಾರ ಮಾಡಿದನು. ಸ್ವಾಮೀಜಿ ತಡೆಹಿಡಿಯಲಾರದ ತಮ್ಮ ಕೋಪವನ್ನು ಬಿಗಿಹಿಡಿದುಕೊಂಡು ದಿವಾನರು ಒಂದು ಲಕ್ಕೋಟೆಯನ್ನು ತೋರಿಸಿದರು, ಸ್ವಾಮೀಜಿ ಅದನ್ನೋದಿ ತಮ್ಮ ಒಪ್ಪಿಗೆಯನ್ನು ಸೂಚಿಸಿದರು. ಅದರಂತೆ ಅದೇ ದಿನ ತಂತಿಯನ್ನು ಕಳುಹಿಸಿ ಆಯಿತು.

ರಾಜೇಂದ್ರರು ಸ್ವಾಮೀಜಿಯರಾದ ಮೇಲೆ ಇದೇ ಮೊದಲ ಸಲ ತಮ್ಮ ಸ್ಥಳವನ್ನು ಬಿಟ್ಟು ಹೊರಡುವದು ದೇವಗಿರಿಯ ಸಂಸ್ಥಾನದ ಮಠವೆಂದರೆ ಬಹಳ ಪ್ರಖ್ಯಾತಿ ಈ ಮಠದಲ್ಲಿ ಇದ್ದ ಸ್ವಾಮಿಜಿಯವರು ಅನೇಕ ಸಂಘಗಳಿಗೆ ಧನ ಸಹಾಯವನ್ನು ಕೊಟ್ಟಿದ್ದರು. ಮಠದ ಆಸ್ತಿಯೂ ದಿನದಿನದ ಪ್ರಾಪ್ತಿಯೂ ವಿಪುಲವಾದರಿಂದ ಅವರ ದಾನಧರ್ಮ ವ್ಯಾಪ್ತಿಯೂ ಸಾಕಷ್ಟಿತ್ತು. ಮಠದ ರೂಢಿಯಂತೆ ಸ್ವಾಮೀಜಿ ತಮ್ಮ ಪ್ರವಾಸ ಕೈಕೊಂಡರು.

ಒಂದು ರಾತ್ರಿಯ ಪ್ರವಾಸವನ್ನು ಮುಗಿಸಿ ನಿಲ್ದಾಣದಲ್ಲಿ ಇಳಿಯುವಾಗ ಸ್ವಾಮೀಜಿ ಅನೇಕ ಮುಖಗಳನ್ನು ಕಂಡರು. ಊರಿನ ಶ್ರೀಮಂತ ಜನರು ಅನೇಕ ಸಂಘ ಸಂಸ್ಥೆಗಳ ಅಧ್ಯಕ್ಷರು, ಉಪಾಧ್ಯಕ್ಷರು, ಕಾರ್ಯದರ್ಶಿಗಳು ಮಠದ ಭಕ್ತರೂ ಪೂಮಾಲೆಗಳನ್ನು ಹಿಡಿದು ಕೊಂಡು ನಿಂತಿದ್ದರು. ಸ್ವಾಮೀಜಿ ತಾವಾಗಿಯೇ ರೈಲಿನಿಂದ ಕೆಳಗಿಳಿಯಬೇಕೆಂದರೆ, ಜನರು ಅವರ ಕೈಹಿಡಿದು ಕೆಳಗಿಳಿಸಿದರು. ದಿವಾಣ ಅವರ ಮುಖಾಂತರ ಅನೇಕ ಜನರ ಪರಿಚಯವೂ ಪ್ರಾರಂಭವಾಯಿತು. ಹೂಮಾಲೆಗಳು ಸ್ವಾಮೀಜಿಯವರ ಕೊರಳನ್ನಲಂಕರಿಸುತ್ತಿದ್ದವು. ಸ್ವಾಮೀಜಿ ಅವುಗಳನ್ನು ತೆಗೆಯಲು ಹೋದರು, ಆದರೆ ಸನೀಹದಲ್ಲಿ ನಿಂತಿದ್ದ ದಿವಾನರು ಬೇಡವೆಂದು ಸೂಚಿಸಿದರು. ಹೊರಲಾರದಷ್ಟು ಹೂಮಾಲೆಗಳೂ ಅದನ್ನು ತಾಳಿಕೊಂಡು ಎಲ್ಲರನ್ನು ನೋಡಿದೊಡನೆ ಮುಗುಳುನಗೆ ನಗುತ್ತ ಸ್ವಾಮೀಜಿ ಹೊರಬಂದರು.

ನಿಲ್ದಾಣದ ಹೊರಗೆ ಹೂಗಳಿಂದ ಅಲಂಕೃತವಾದ ಕಾರು ಸಜ್ಜಾಗಿ ನಿಂತಿತ್ತು; ಸ್ವಾಮಿಜಿಯವರನ್ನು ಆಮಂತ್ರಿಸಿದ ನೂತನ ಶಿಕ್ಷಣ ಸಂಸ್ಥೆಯ ಸಂಚಾಲಕರು ಅವರನು ಅದರಲ್ಲಿ ಕುಳ್ಳಿರಿಸಿದರು.

ತುಬಾಕಿಗಳು ಹಾರಿದವು, ಬೇಂಡುಗಳು ಬಾರಿಸಿದವು ಎಲ್ಲೆಲ್ಲಿಯೂ ಜಯಜಯ ಕಾರ ನಾದವು ಮೊಳಗಿತು.

ಸ್ವಾಮೀಜಿ ಮಂದಹಾಸದಿಂದ ಕುಳಿತಿದ್ದರು; ತಲೆಯಲ್ಲಿ ಬ್ರಹ್ಮಾಂಡವೇ ಅಲ್ಲೋಲ ಕಲ್ಲೋಲವಾಗುತಿತ್ತು.

ಸಂಜೆ ವಿಸ್ತಾರವಾದ ಪಟಾಂಗಣದಲ್ಲಿ ಸಭೆ. ಜನರು ಕಿಕ್ಕಿರಿದಿದ್ದರು. ಸ್ವಾಮೀಜಿಯವರ ಎಡಬಲಗಳೆಡೆಯಲ್ಲಿ ಬೆಳ್ಳಿಯ ಬೆತ್ತಗಳನ್ನು ಹಿಡಿದುಕೊಂಡು ಸೇವಕರು ಬಹು ಗಂಭೀರವಾಗಿ ನಿಂತಿದ್ದರು. ಹಿಂದೆ ಒಬ್ಬ ಸೇವಕ ಚಾಮರವನ್ನು ಹಿಡಿದುಕೊಂಡಿದ್ದ. ರಂಗಸ್ಥಲದ ಎದುರಿಗೆ ಅನೇಕ ಜನರು ಸ್ವಾಮೀಜಿಯವರು ಆಸನಸ್ಥರಾಗಿದ್ದರು.

ಸ್ವಾಮೀಜಿ ಉಶ್ಶೆಂದು ಉಸಿರುಗರೆದರು ಟೇಬಲ್ ಹತ್ತಿರ ನಿಂತು ವರದಿಯನ್ನು ಓದುತ್ತಿದ್ದ ಕಾರ್ಯದರ್ಶಿಗಳು ಮುಖ ಹೊರಳಿಸಿ ನೋಡಿದರು.

ಸ್ವಾಮೀಜಿ ಮತ್ತೆ ಮಂದಸ್ಮಿತರಾದರು! ಪರಿಚಯ ಮಾಡಿ ಕೊಡುವ ಮಹನಿಯರು ಕುಣಿಕುಣಿದು ಜಿಗಿಜಿಗಿಯುತ್ತ ಕೈಗಳ ನಟನೆ ಮಾಡುತ್ತ ಸಾಮೀಜಿಯವರ ಅಪೂರ್ವವಾದ ಶಕ್ತಿಯನ್ನು ದಾನಗುಣ ಸಂಪನ್ನತೆಯನ್ನು ಅಗಾಧ ಶಬ್ದಗಳಲ್ಲಿ ಹೊಗಳುತ್ತಿದ್ದರು.

ಸ್ವಾಮೀಜಿ ಬೀಸಣಿಕೆಯಿಂದ ಗಾಳಿಬೀಸಿಕೊಂಡು ಆ ಪೀಠದಿಂದ ಎದ್ದು ಎದುರಿಗೆ ನೆಲದ ಮೇಲೆ ಕುಳಿತು ಜನರ ಮಧ್ಯದಲ್ಲಿ ಜೀವನದ ಸೊಗಸನ್ನು ಸವಿಯಬೇಕೆಂದರು. ಸ್ವಲ್ಪ ಹಾಗೂ ಹೀಗೂ ಚಡಪಡಿಸಿದರು.

ದಿವಾಣರು ಕಣ್ಣುಗಳನ್ನು ಹೊರಳಿಸಿದರು! ಇಬ್ಬರೂ ಸೇವಕರು ಎದೆ ಸೆಟಿಸಿ ನಿಂತುಕೊಂಡರು! ಪರಿಚಯ ಮಾಡಿ ಕೊಡುವ ಮಹನಿಯರು ಸ್ವಾಮೀಜಿಯವರು ಪದವೀಧರರಾಗಿರುವದನ್ನು ತಮ್ಮ ಸಂಸ್ಥೆಯನ್ನು ದಾನದಿಂದ ಉದ್ಧರಿಸಬೇಕೆಂದೂ ಬಿನ್ನವಿಸಿಕೊಂಡರು.

ಸ್ವಾಮೀಜಿಯವರಿಗೆ ಬಿನ್ನವತ್ತಳೆಯನ್ನು ಅರ್ಪಿಸಿದ್ದು ಆಯಿತು. ಪುಸ್ತಕದ ಅಂಗಡಿ, ಸ್ಟೆಶನರಿ ಅಂಗಡಿ, ಟೇಲರಿಂಗ ಅಂಗಡಿ ಮುಂತಾದ ಅಂಗಡಿಗಳ ಮಾಲಿಕರು ಸ್ವಾಮೀಜಿಯವರ ಪಾದಧೂಳಿ ತಮ್ಮಲ್ಲಿ ಬೀಳಬೇಕೆಂದು ಬಿನ್ನವಿಸಿಕೊಂಡದ್ದೂ ಆಯಿತು.

ತಮ್ಮ ಭಾಷಣದಲ್ಲಿ ಸ್ವಾಮೀಜಿ ಎದ್ದು ನಿಂತು ಸುಮ್ಮನೇ ಐದು ನಿಮಿಷಗಳ ವರೆಗೆ ಸುತ್ತಲೂ ನೋಡಿದರು.

ಎಲ್ಲ ಕಡೆಗೂ ಸ್ತಬ್ಧತೆ ಉಂಟಾಯಿತು. ಸ್ವಾಮೀಜಿ ಗರ್ಜಿಸಿದರು. — "ದೇಶವು ಮುನ್ನಡೆಯಬೇಕಾದರೆ ಜನರು ಇನ್ನು

ಕಳಗಿಳಿಯಬೇಕು—" ಜನರು ಗಾಬರಿಯಾಗಿ ನೋಡಿದರು. ಸ್ವಾಮೀಜಿ ಮತ್ತೆ ಹೇಳಿದರು"—ಕೆಳಗಿಳಿಯಬೇಕು; ಎತ್ತರವಾದ ಪೀಠ ಅಲಂಕಾರಗಳನ್ನು ಬಿಟ್ಟು ಸಾಮಾನ್ಯ ಜನರ ಜೊತೆಗೆ ಹೋಗಬೇಕು. ಅಲ್ಲಿ ನಿಜವಾದ ಜೀವನವಿದೆ. ಜೀವನದ ಸಹಜತೆ ಇದೆ. ನಾವು ದೊಡ್ಡವರು ಎನಿಸಿಕೊಳ್ಳುವವರು ಒಳಗೊಂದು ಹೊರಗೊಂದು ಮಾಡುತ್ತಿದ್ದೇವೆ. ನಿರ್ಮಲ ಹೃದಯವಿಲ್ಲ, ಪ್ರೀತಿಯಿಲ್ಲ. ನನ್ನ ಮಾತುಗಳನ್ನು ಸೂಕ್ಷ್ಮವಾಗಿ ವಿಚಾರಿಸಿ, ನಿಮ್ಮ ಹೃದಯ ಬಾಗಿಲನ್ನು ತೆರೆದು ನೋಡಿ—ಪ್ರೀತಿ ಇದೆಯೆ? ಎಲ್ಲ ಪ್ರಾಣಿಗಳ ಮೇಲೆ ಪ್ರೀತಿ ಇದೆಯೆ?

ಹೀಗೆ ಹೇಳುತ್ತ ಸ್ವಾಮಿಜಿ ಸ್ಥಳದಲ್ಲಿ ಕುಸಿದು ಕುಳಿತು ಬಿಟ್ಟರು.

ಜನರು ಕಕ್ಕಾವಿಕ್ಕಿಯಾಗಿ ಸ್ವಾಮಿಜಿಯವರ ಕಡೆಗೆ ನೋಡಿದರು. ಸ್ವಾಮೀಜಿ ಎದ್ದು ನಿಂತು ನಮಸ್ಕಾರ ಮಾಡಿ ಕುಳಿತುಕೊಂಡು ಬಿಟ್ಟರು.

ದೇವಗಿರಿಗೆ ತಿರುಗಿ ಹೋಗುವ ಮುಂದೆ ರೈಲಿನಲ್ಲಿ ದಿವಾನರು ತಾವು ಭೇಟಿಕೊಟ್ಟು ಸಂಘ ಸಂಸ್ಥೆಗಳಿಗೆ ಹಣವನ್ನು ದಾನವಾಗಿ ಕೊಟ್ಟ ವರದಿಯನ್ನು ಒಪ್ಪಿಸಿದರು. ಐದುನೂರು ರೂಪಾಯಿಗಳ ಮೇಲ್ಪಟ್ಟು ಪ್ರತಿಯೊಂದು ಅಂಗಡಿ ಸಂಸ್ಥೆಗಳಿಗೆ ಹಣ ಕೊಟ್ಟುದುದನ್ನು ಸ್ವಾಮೀಜಿ ಓದಿದರು.

ಸ್ವಲ್ಪ ದಿನ ಅದನ್ನು ತಡೆಯಬೇಕೆಂದು ದಿವಾಣರಿಗೆ ಸ್ವಾಮೀಜಿ ಸೂಚಿಸಿದರು. ತಾವು ಅನುಭವ ಪಟ್ಟುಕೊಳ್ಳಬೇಕೆಂಬ ಸುದ್ದಿಯನ್ನು ಹೇಳಿದರು.

ದಿವಾಣರು ಏನೂ ಮಾತನಾಡಲಿಲ್ಲ. ಸುಮ್ಮನೆ ಸೂಚನೆಗೆ ಬರದೆ ಇದ್ದದ್ದು ಸಭೆಯಲ್ಲಿ ದಾನದ ಬಗ್ಗೆ ಯಾವ ಮಾತನ್ನು ಹೇಳದಿರುವದು ಅವರಿಗೆ ಬಹಳ ಅಸಮಾಧಾನವನ್ನುಂಟು ಮಾಡಿತು.

ಮಠದಲ್ಲಿ ಜನರಿಗೆ ಯಾವ ರೀತಿಯಿಂದಲೂ ಧನಸಹಾಯ ಮಾಡಲಿಲ್ಲ. ಸ್ವಾಮೀಜಿಯವರ ಸ್ವಾರ್ಥದ ಬಗ್ಗೆ ಎಲ್ಲ ಕಡೆಗೂ ಪ್ರಚಾರಗೊಳಿಸಿದರು.

ಸಂಘಸಂಸ್ಥೆಗಳ ಜನರು ತಮಗೆ ದಿವಾಣರು ಕೊಟ್ಟ ವಾಗ್ದಾನ ಫಲಿಸುವದಿಲ್ಲೆಂಬ ಸುದ್ದಿ ಕೇಳಿ ಸ್ವಾಮೀಜಿಯವರ ವಿರುದ್ಧ ಪ್ರಕಟಣೆಯನ್ನು ಕೊಟ್ಟುದು ಆಯಿತು.

ಸ್ವಾಮೀಜಿಯವರಿಗೆ ಅನೇಕ ಪತ್ರಗಳು ಬರಹತ್ತಿದವು. ಪತ್ರಿಕೆಗಳ ಸುದ್ದಿಯನ್ನು ನೋಡಿದರೂ ಅವರ ಮನಸ್ಸು ಉದ್ವಿಗ್ನಗೊಳ್ಳಲಿಲ್ಲ. ತಮ್ಮ ಪರೀಕ್ಷೆ ಪಾಸಾಯಿತೆಂದು ಅವರಿಗೆ——ಅರಿಕೆಯಾಯಿತು. ಮಾನಮರ್ಯಾದೆ ಎಲ್ಲವೂ ಢಾಂಬಿಕ. ಒಳಒಳಗೆ ಬರಿ ದುಡ್ಡಿನ ಆಶೆ. ಪ್ರೀತಿಯಿಲ್ಲ, ಅಂಥಃಕರಣವಿಲ್ಲ. ದೊಡ್ಡ ಪ್ರಶ್ನೆಗಳನ್ನು ತಿಳಿದುಕೊಳ್ಳಬೇಕೆಂಬ ಹವ್ಯಾಸವಿಲ್ಲ. ಅವರ ಒಂದು ದಿನದ ಪ್ರವಾಸದಲ್ಲಿ ಇದು ಬಹಳ ಅನುಭವಕ್ಕೆ ಬಂದಿತು.

ಮಠದ ಮುಂದಿನ ತೋಟದಲ್ಲಿ ನಿಂತುಕೊಂಡಿದ್ದರು ಆಕಾಶದಲ್ಲಿ ಸ್ವಚ್ಛಂದವಾಗಿ

ಹಾರುತ್ತಿರುವ ಹಕ್ಕಿ ಒಂದು ಗಿಡದಲ್ಲಿ ಬಂದು ಕುಳಿತುಕೊಂಡಿತು. ಐದು ನಿಮಿಷಗಳಾದ ನಂತರ ಗಿಡಗಳ ಎಲೆಗಳ ಸಂಗಡ ಗುದ್ದಾಡಿ ಮತ್ತೆ ಹಾರಿಹೋಯಿತು.

ಈ ಚಿತ್ರ ಸ್ವಾಮಿಜಿಯವ ಕಣ್ಣೆದುರಿಗೆ ಕಟ್ಟಿತು. ತಮ್ಮ ಮೊದಲಿನ ದಿನಗಳನ್ನು ನೆನೆಸಿಕೊಂಡರು ನೀರಿನಲೆಗಳ ಮೇಲಿರುವ ಈಶ್ವರ ಮೂರ್ತಿ ನರ್ತನ ಮಾಡಿದಂತಾಯಿತು!

ಮಠದ ಮುಂದೆಯೇ ಒಂದು ದಾರಿ. ಅಲ್ಲಿಂದ ಒಂದು ನಿಳ್ದಾರಿ ಒಡೆದು ದೇವಗಿರಿಯ ಜರೆಗುಂಟ ಹಾಯ್ದು ದೂರದೂರ ಹೋಗಿ ಕ್ಷಿತಿಜದಲ್ಲಿ ಲೀನವಾಗಿತ್ತು.

ಮರುದಿನ ಸ್ವಾಮೀಜಿ ಅದೃಶ್ಯರಾಗಿದ್ದರು. ಮಠದಲ್ಲಿ ಅವರ ಸುಳಿವೇ ಇರಲಿಲ್ಲ.

ಅವರ ತಪಃಸಿದ್ಧಿ ಬೇರೆ ದಾರಿಯಲ್ಲಿಯೇ ಇತ್ತು.

* * *



ಇವರಿಗೆ ಆಹಾರ ಪರಿಸ್ಥಿತಿ ಹೇಗೆ ಗೊತ್ತಾದೀತು ?



# ಅಬ್ರಾಹಮ ಲಿಂಕನ್‌ರ ಅಪ್ರತಿಮ ಪಾಟೀಸವಾಲು

[ ಅಬ್ರಾಹಮ ಲಿಂಕನ್‌ರು ಅಮೇರಿಕಾ ದೇಶದ ಅಧ್ಯಕ್ಷರಾಗಿ ಸಲ್ಲಿಸಿದ ಸೇವೆ ಅಮೋಘ, ಅಮರ. ಅವರ ಸೇವೆಯ ಬಗ್ಗೆ ಅನೇಕರಿಗೆ ಪರಿಚಯವಿದೆ. ಆದರೆ ಅವರು ಅತಿ ಚಾಣಾಕ್ಷ ವಕೀಲರು ಆಗಿದ್ದರು. ಅಪಾದಿತರ ಪರವಾಗಿ ಅವರು ತಮ್ಮ ಪ್ರಥಮ ಕೊಲೆ ಖಟ್ಲೆ ನಡೆಸಿದಾಗ ಅವರು ಮಾಡಿದ ಪಾಟೀ ಸವಾಲು ಅವರು ಮಾಡಿದ 'ಗೇಟಿಸ್ಬರ್ಗ ಭಾಷಣ' ಮಾಡಿದಂತೆಯೇ ಪ್ರಸಿದ್ಧಿ ಪಡೆದಿದೆಯೆಂದೂ ಅನೇಕರಿಗೆ ಗೊತ್ತಿರಲಾರದು. ಅಬ್ರಾಹಮ ಲಿಂಕನ್‌ರು ಲಾಕವುಡ್ ಕೊಲೆ ಖಟ್ಲೆಯಲ್ಲಿ ಆರೋಪಿ ಗ್ರೆಸನ್ ಎಂಬವನ ಪರವಾಗಿ ವಕಾಲತ್ತು ವಹಿಸಿ, ಈ ಖಟ್ಲೆಯಲ್ಲಿ ಮುಖ್ಯಸಾಕ್ಷಿಯೂ, ಪ್ರತ್ಯಕ್ಷದರ್ಶಿಯೂ ಆದ ಸೋಮ್ವೆನ್ ಎಂಬವನನ್ನು ಪರೀಕ್ಷಿಸಿದಾಗ ಮಾಡಿದ ಪಾಟೀ ಸವಾಲು (Cross examination) ಅದಕ್ಕೆ ಉಪಯೋಗಿಸಿದ ತಂತ್ರ, ಬಹಳ ಸ್ವಾರಸ್ಯವಾಗಿದೆ.

ಇವರ 'ನ್ಯಾಯಾಲಯದ ಯುಕ್ತಿ' ಜನಪ್ರಿಯವಾಗಿದೆ. ಅಬ್ರಾಹಮ ಲಿಂಕನ್‌ರು ನಡೆಸಿದ ಈ ಖಟ್ಲೆಯ ಸಾರಾಂಶ ಹಾಗೂ ಪಾಟೀಸವಾಲಿನ ಪೂರ್ತಿ ಪಾಠ ಇಲ್ಲಿ ಕೊಡಲಾಗಿದೆ. ]

ಅಗಸ್ಟ ೯ ೧೮—ರಂದು ಸಂಜೆ, ಒಂದು ಶಿಬಿರ ಸಭೆಯಲ್ಲಿ ಗ್ರೆಸನ್ ಎಂಬವನು, ಲಾಕವುಡ್ ಎಂಬವನನ್ನು ಕೊಲೆ ಮಾಡಿ ಆ ಸ್ಥಳದಿಂದ ಫರಾರಿಯಾದನೆಂಬ ಆರೋಪಕ್ಕೆ ಗುರಿಮಾಡಲಾದ. ಈ ದೃಶ್ಯವನ್ನು ಸಾಮ್ವೆನ್ ನೋಡಿದ್ದನು. ನ್ಯಾಯ ವಿಚಾರಣೆಗೆ ಗುರಿಪಡಿಸುವ ಮೊದಲೇ ಗ್ರೆಸನನ್ನು ಜನರು ಸಿಕ್ಕಿಸುವ ಪ್ರಸಂಗ

ಎರಡು ಬಾರಿ ಬಂದಿತ್ತು. ಸೋವೈನನ ಸಾಕ್ಷಿಯು ದೃಢತೆಯ ಫಲವಾಗಿ ಗ್ರೇಸನ್‌ನ ತಾಯಿ ಹಿರಿಯ ಹಾಗು ಅನುಭವಿಕ ವಕೀಲರಿಗಾಗಿ ಹುಡುಕಿ ಅವರಾರೂ ದೊರೆಯಲಿಲ್ಲವಾದ್ದರಿಂದ ತರುಣ ಅಬ್ರಹಾಮ ಲಿಂಕನ್‌ರಿಗೆ ಖಟ್ಲೆಯನ್ನು ಒಪ್ಪಿಸಿದಳು. ಖಟ್ಲೆಯ ವಿಚಾರಣೆ ಪ್ರಾರಂಭವಾಯಿತು. ಲಿಂಕನ್‌ರು ಜ್ಯೂರಿಯ ನೇಮಕವನ್ನು ವಿರೋಧಿಸಲಿಲ್ಲ; ಒಬ್ಬರ ನಂತರ ಒಬ್ಬರ ಸಾಕ್ಷಿ ನಡೆದಾಗ ಯಾವ ಸಾಕ್ಷಿಯು ಪಾಟಿಸವಾಲನ್ನು ಮಾಡ ಲಿಲ್ಲ. ನ್ಯಾಯಾಲಯದಲ್ಲಿ ನೆರೆದವರೆಲ್ಲರಿಗೆ ಆಶ್ಚರ್ಯವೇ ಆಶ್ಚರ್ಯ—ಜನ ನ್ಯಾಯಾಲಯ ವನ್ನು ತುಂಬಿದ್ದರು. ಲಿಂಕನ್‌ರು ಒಬ್ಬರ ಸಾಕ್ಷಿಯನ್ನು ಮಾತ್ರ ಪಾಟಿಸವಾಲ ಮಾಡಿ ದರು. ಅವನದೇ ಕೊನೆಯ ಸಾಕ್ಷಿ, ಅತಿ ಮುಖ್ಯವಾದ ಸಾಕ್ಷಿ. ಅವನು ಕೊಲೆ ಯಾದವನ ಹಾಗೂ ಕೊಲೆಮಾಡಿದವನ ಪರಿಚಯುವಿದೆಯೆಂದು, ಲಾಕವುಡ್‌ನನ್ನು ಗ್ರೇಸನ್‌ನು ಗುಂಡಿಕ್ಕಿ ಓಡಿಹೋದುದನ್ನು ತಾನು ನೋಡಿದೆನೆಂದು, ಲಾಕವುಡ್‌ನಿಗೆ ಗುಂಡು ತಾಗಿದ ನಂತರ ಪ್ರಥಮ ಚಿಕಿತ್ಸೆ ತಾನು ಕೊಡಲು ಹೋಗಿ ನೋಡಿ ದರೆ ಅವನು ಮೃತಪಟ್ಟಿದುದನ್ನು ನೋಡಿ ದುದಾಗಿಯೂ ಸಾಕ್ಷ್ಯಕೊಟ್ಟಿದ್ದನು.

ಈ ಖಟ್ಲೆಯಲ್ಲಿಯ ಸಾಕ್ಷಿ–ಪುರಾವೆ ಗಳನ್ನು ವೀಕ್ಷಿಸಿದ ಯಾರಾದರೂ ಆರೋಪಿ ಕೊಲೆಗಾರನೆಂದು ತಿರ್ಮಾನಕ್ಕೆ ಬರುವಂತೆ ಇತ್ತು. ಪಾಪ ಗ್ರೆಸನ್‌ನ ತಾಯಿಗೆ ಉಭಯ ಸಂಕಟ. ಏಳಿಇಲ್ಲದೆ ತರುಣ ಹಾಗೂ ಅನುಭವ ಶೂನ್ಯ ವಕೀಲನಿಗೆ ತಾನು ವಕಾಲತ್ತು ಕೊಟ್ಟದ್ದು. ಅವನು ಒಂದು ಸಾಕ್ಷಿಯನ್ನೂ ಅಡ್ಡಸವಾಲು ಮಾಡಿಲ್ಲ. ಖಟ್ಲೆ ಪ್ರಾರಂಭವಾದಾಗಿನಿಂದ ಮೌನ ಮುದ್ರೆ ಧರಿಸಿ ನಿಂತಿದ್ದಾನೆ. ಉಕ್ಕಿಬರುವ ದುಃಖವನ್ನು ಹತ್ತಿಕ್ಕಿಕೊಂಡು ಸುಮ್ಮನೆ ಕುಳಿತಿದ್ದಳು.

ಕೊನೆಗೆ ಅಬ್ರಾಹಮ ಎದ್ದರು. ಬಾಯಿ ಬಿಟ್ಟರು. ಈ ಉದ್ದನೆಯ ವ್ಯಕ್ತಿ ನಿಂತು ಬಲಿಷ್ಠ ಸಾಕ್ಷಿದಾರನನ್ನು ಒಂದುಕ್ಷಣ ದಿಟ್ಟಿಸಿ ನೋಡಿದರು, ಪುಸ್ತಕ ಅಥವಾ ಟಿಪ್ಪಣಿಯ ಸಹಾಯವಿಲ್ಲದೆ ನಿಧಾನವಾಗಿ ಪ್ರಶ್ನೆಗಳ ಸುರಿಮಳೆಯನ್ನು ಪ್ರಾರಂಭಿ ಸಿದರು.

ಲಿಂಕನ್ :— ನೀನು ಲಾಕವುಡ್‌ನ ಜೋಡಿ ಕೊಲೆಯಾಗುವ ಮೊದಲಿದ್ದು, ಲಾಕವುಡ್‌ನನ್ನು ಗುಂಡಿಕ್ಕುವದನ್ನು ನೋಡಿದೆ.

ಸಾಕ್ಷಿದಾರ :— ಹೌದು.

ಲಿಂ :— ನೀನು ಅವರಿಗೆ ಬಹಳ ಹತ್ತಿರವಾಗಿ ನಿಂತಿದ್ದೆ.

ಸಾ :— ಇಲ್ಲ ಇಪ್ಪತ್ತು ಅಡಿ ದೂರದಲ್ಲಿದ್ದೆ.

ಲಿಂ :— ಅದು ಹತ್ತು ಅಡಿ ಇರಬಹು ದಲ್ಲವೇ ?

ಸಾ :— ಇಲ್ಲ, ಅದು ಇಪ್ಪತ್ತು ಅಡಿ ಅಥವಾ ಇನ್ನೂ ಹೆಚ್ಚಿಗೆ ಇತ್ತು.

ಲಿಂ :— ಅದು ಬಯಲಿನಲ್ಲಿ.

ಸಾ :— ಇಲ್ಲ ಮರಗಳ ನಡುವೆ.

ಲಿಂ :— ಯಾವ ಮರಗಳು ?

ಸಾ :— ಹೊಂಗೆ ಮರಗಳು.

ಲಿಂ :— ಅಗಸ್ಟ ತಿಂಗಳಲ್ಲಿ ಎಲೆಗಳು ದಟ್ಟ ವಾಗಿರುತ್ತವೆ.

ಸಾ :— ಸಾಧಾರಣವಾಗಿ.

ಲಿಂ :— ಬಂದೂಕನ್ನು ಉಪಯೋಗಿಸ ಲಾಯಿತೆಂದು ನಿನ್ನ ಭಾವನೆಯೆ.

ಸಾ :— ಅದರಂತೆಯೆ ಇದೆ.

ಲಿಂ:— ನೀನು ಆರೋಪಿ ಗುಂಡಿಕ್ಕುವದನ್ನು ನೋಡಿದೆ, ಆ ಬಂದೂಕಿನ ಕೊಳವೆ ಯಾವ ದಿಕ್ಕಿನಲ್ಲಿತ್ತು, ಎಲ್ಲಾ ಕಾಣು ತ್ತಿತ್ತು.

ಸಾ :— ಹೌದು.

ಲಿಂ:— ಇದು ಶಿಬಿರ ಸ್ಥಳಕ್ಕೆ ಎಷ್ಟು ಸಮೀ ಪದಲ್ಲಿತ್ತು?

ಸಾ :— ಮುಕ್ಕಾಲು ಮೈಲು ದೂರದ ಲ್ಲಿತ್ತು.

ಲಿಂ:— ಆಗ ಬೆಳಕು ಎಲ್ಲಿತ್ತು.

ಸಾ :— ಶಿಬಿರದ ಸ್ಥಂಭದ ಮೇಲೆ.

ಲಿಂ:— ಮುಕ್ಕಾಲು ಮೈಲು ದೂರದಲ್ಲಿ?

ಸಾ :— ಹೌದು ಅದನ್ನು ಈಗಲೇ ಹೇಳಿ ದ್ದೇನೆ.

ಲಿಂ:—ಆಗ ಲಾಕ್‌ವುಡ್ ಅಥವಾ ಗ್ರೆಸನ್‌ನ ಬಳಿ ಒಂದು ಮೇಣಬತ್ತಿಯನ್ನು ನೋಡಲಿಲ್ಲವೆ?

ಸಾ :— ಇಲ್ಲಿ ಮೇಣಬತ್ತಿ ಏತಕ್ಕೆ ಬೇಕು.

ಲಿಂ:— ಹಾಗಾದರೆ ನೀನು ಗುಂಡಿಕ್ಕುವ ದನ್ನು ಹೇಗೆ ನೋಡಿದೆ.

ಸಾ :— ಬೆಳದಿಂಗಳಿನಲ್ಲಿ (ಕೆಣಕಿಸುತ್ತ)

ಲಿಂ :— ನೀನು ಗುಂಡಿಕ್ಕುವದನ್ನು ರಾತ್ರಿ ಹತ್ತು ಗಂಟೆಗೆ ನೋಡಿದೆ. ಹೊಂಗೆ ಮರಗಳ ನಡುವೆ ದೀಪದಿಂದ ಮುಕ್ಕಾಲು ಮೈಲು ದೂರದಲ್ಲಿ, ಬಂದೂಕಿನ ಕೊಳವೆಯನ್ನು ನೋಡಿ ದೆ; ಆರೋಪಿ ಗುಂಡಿಕ್ಕುವದನ್ನು ನೋಡಿದೆ, ಇಪ್ಪತ್ತು ಅಡಿಯ ಅಂತ ರದಿಂದ ನೋಡಿದೆ ಎಲ್ಲವನ್ನೂ ಬೆಳ ದಿಂಗಳಿನಲ್ಲಿ ನೋಡಿದೆ? ಶಿಬಿರದ ಬೆಳಕಿನ ಸುಮಾರು ಒಂದು ಮೈಲಿ ಅಂತರದಿಂದ ನೋಡಿದೆ?

ಸಾ :— ಹೌದು ಹಾಗೆಂದು ನಾನು ಈಗಾ ಗಲೆ ಹೇಳಿದ್ದೇನೆ.

ಈ ಹೊತ್ತಿಗೆ ನ್ಯಾಯಾಲಯದಲ್ಲಿ ಕುತೂಹಲ ತುಂಬಿತ್ತು. ನಿಶ್ಶಬ್ದದಿಂದ ಅಲ್ಲಿ ನಡೆದ ಒಂದೊಂದು ಶಬ್ದವನ್ನು ಅಲ್ಲಿ ನಡೆದ ಒಂದೊಂದು ಪದವನ್ನು ಜನ ಗಮನ ದಿಂದ ಕೇಳುತ್ತಿದ್ದರು. ಆಗ ಲಿಂಕನ್ ತನ್ನ ಕೋಟಿನ ಕಿಸೆಯಿಂದ ನೀಲಿ ಬಣ್ಣದ ಪಂಚಾಂಗವನ್ನು ಎಳೆದು ಸಾವಧಾನವಾಗಿ ಅದನ್ನು ತೆಗೆದು, ಪುರಾವೆಯಾಗಿ ಕೊಟ್ಟು ಅದನ್ನು ಜ್ಯೂರಿ ಹಾಗೂ ನ್ಯಾಯಾ ಧೀಶರಿಗೆ ತೋರಿಸಿ, ಅದರ ಒಂದು ಪುಟ ದಿಂದ ಸ್ಪಷ್ಟವಾಗಿ ಎಲ್ಲರಿಗೂ ತಿಳಿಯು ವಂತೆ ಓದಲಾರಂಭಿಸಿದ. ಅಂದು ರಾತ್ರಿ ಚಂದ್ರನು ಉದಯಿಸಿರಲೇ ಇಲ್ಲ. ಮರುದಿನ ಒಂದು ಗಂಟೆಗೆ ಚಂದ್ರೋ ದಯವಾಗಿತ್ತೆಂದು ಪಂಚಾಂಗದಲ್ಲಿತ್ತು.

ನ್ಯಾಯಾಲಯದಲ್ಲಿ ಕುತೂಹಲ ಶಿಖರ

ಕ್ಕೇರಿತು. ಆಗ ಲಿಂಕನ್‌ರು ಸಾಕ್ಷಿದಾರನ ಬಂಧನ ತಕ್ಷಣವಾಗಬೇಕೆಂದು ಆಜ್ಞೆ ಯಿತ್ತರು.

" ಈ ಗುನ್ಹೆಯಿಂದ ತಾನು ಪಾರಾಗ ಬೇಕೆಂಬ ಉದ್ದೇಶವಿದ್ದಾಗಮಾತ್ರ ಈತನು ಇವನಿಗೆ ಹಾನಿ ಮಾಡಿದವನ ಬಗ್ಗೆ ಇಂತಹ ಸುಳ್ಳು ಹೇಳಲು ಸಾಧ್ಯ" ಎಂದು ಲಿಂಕನ್ನ ರವರ ವಾದದ ಧಾಟಿ, ಅವರ ಹಿಂದೆ ಅಡ ಗಿದ್ದ ಧೃಢತೆಯ ಫಲವಾಗಿ ನ್ಯಾಯಾ ಲಯ ಸೊವೈನನ ಬಂಧನವನ್ನು ಆಜ್ಞಾ ಪಿಸಿತು. ಈ ಅನಿರೀಕ್ಷಿತ ಪ್ರಸಂಗ ಸೊವೈನನ್ನು ಕುಸಿದು ಬೀಳುವಂತೆ ಮಾಡಿತು. ತಾನೇ ಲಾಕ್‌ವುಡ್‌ನನ್ನು ಕೊಂದವನೆಂದು ಒಪ್ಪಿಕೊಂಡ. ಆದರೆ ತಾನು ಉದ್ದೇಶಪೂರಿತವಾಗಿ ಕೊಲೆ ಮಾಡ ಲಿಲ್ಲವೆಂದು ವಿನಂತಿಸಿಕೊಂಡ.

ಲಿಂಕನ್‌ರ ಅಪ್ರತಿಮ ಪಾಟೀ ಸವಾಲಿನ ಚಾತುರ್ಯ ಗ್ರೆಸನನ್ನು ಫಾಸಿ ದಂಡದಿಂದ ಪಾರುಮಾಡಿತು. ಆಗ ಗ್ರೆಸನ್‌ನ ತಾಯಿ ದೇವರಿಗೆ ಸಾವಿರ ಮೇಣಬತ್ತಿ ಹಚ್ಚಿರ ಬೇಕು.

●●●



---

ಸಂಸತ್ತಿನಲ್ಲಿ—



ಏನಾದರೂ ಗೊಂದಲವೆಬ್ಬಿರಿ ಹೊರಗೆ ಹೋಗೋಣ ನಡೆ.
ಇಂದು ಊರಲ್ಲಿ ಒಳ್ಳೆಯ ಸಿನೇಮಾ ಬಂದಿದೆ !

# ತುಂತುರ ನಗೆ

ಶಿಕ್ಷಕರೊಬ್ಬರು ತಮ್ಮ ವಿದ್ಯಾರ್ಥಿಗಳನ್ನು ಪ್ರಾಣಿಸಂಗ್ರಹಾಲಯ (Zoo) ವನ್ನು ನೋಡಲು ಕರೆದುಕೊಂಡು ಹೋಗಿದ್ದರು. ಬೇರೆ ಬೇರೆ ಮೃಗಗಳ ಬಗ್ಗೆ ಉತ್ತರಿ ವಿದ್ಯಾರ್ಥಿಗಳನ್ನು ಕೇಳುತ್ತಲೇ ಇದ್ದರು.

ಶಿ:– ಸಿಂಹಾನ ಗೂಡಿನಲ್ಲಿ ಯಾಕ ಹಾಕ್ಯಾರೆ?

ವಿ:– ಬಿಟ್ಟರೆ ನಮ್ಮನ್ನು ತಿನ್ನುತ್ತೆ ಅಂತ ಸಾರ್.

ಕೊಕ್ಕರೆಯತ್ತ ಬಂದಾಗ, ಕೊಕ್ಕರೆಯು ಒಂದೇ ಕಾಲ ಮೇಲೆ ಯಾಕೆ ನಿಲ್ಲುತ್ತೆ?

ಈ ಪ್ರಶ್ನೆಗೆ ವಿದ್ಯಾರ್ಥಿಗಳ ಉತ್ತರ ವಿಲ್ಲ. ಆದರೆ ಒಬ್ಬ ಧೈರ್ಯಶಾಲಿ ವಿದ್ಯಾರ್ಥಿ ತಲೆ ಕೆರೆದುಕೊಳ್ಳುತ್ತ "ಸಾರ" ಎಂದ.

ಶಿ:– ಏನೋ ಅದು?

ವಿ:–ಇದಕ್ಕೆ ಇನ್ನೊಂದು ಕಾಲು ಮೇಲೆತ್ತಿದರೆ ನೆಲಕ್ಕೆ ಬೀಳುತ್ತೇನೆಂದು ಗೊತ್ತಿರಬೇಕು.

* * *

'ಭಾರತವು ಪ್ರಗತಿಪರ' ಇದು ಬಹಳ ಸಂಶಯಾಸ್ಪದವಾದ ಮಾತು, ಎಂದು ಒಬ್ಬ ಪುರೋಗಾಮಿ ಪ್ರತಿನಿಧಿ ಹೇಳುತ್ತಿದ್ದ. ಇದಕ್ಕೆ ಕಾರಣವನ್ನು ಕೇಳಲು 'ಭಾರತೀಯರೆ! ನೀವು ಎದ್ದೇಳಿ!' ಎಂದೊಡನೆ ನಮ್ಮವರು ಚಹಾ ಕುಡಿಯುವದಕ್ಕೆ ಏಳುತ್ತಾರೆ. ದೇಶೋದ್ಧಾರ ಭಾವನೆ ಅವರಲ್ಲಿ ಮೂಡೋದೇ ಇಲ್ಲ.

* * *

ಒಂದು ಕ್ಲಿಷ್ಟಕರವಾದ ಸಮಸ್ಯೆಯನ್ನು ಎದುರಿಸುತ್ತಿದ್ದ ನ್ಯಾಯಾಧೀಶ ಸ್ವಗತ ಮಾತನಾಡಿಕೊಳ್ಳುತ್ತಿದ್ದನು. 'ಇದನ್ನು ಬಗೆಹರಿಸಲು ಬೃಹಸ್ಪತಿಯು ಸಲಹೆ ಬೇಕು' ಎಂದು.

ಅದನ್ನು ಕೇಳಿದ ನ್ಯಾಯಾಲಯದ ಪೇದೆ ಹೊರಗೆ ಹೋಗಿ ಒದರಿಯೇಬಿಟ್ಟ ಮೂರು ಸಲ.

"ಬೃಹಸ್ಪತಿ"

"ಬೃಹಸ್ಪತಿ"

"ಬೃಹಸ್ಪತಿ"

ಯಾರೂ ಹಾಜರಾಗದೆ ಇದ್ದುದನ್ನು ಕಂಡು ನ್ಯಾಯಾಧೀಶರ ಮುಂದೆ ಬಂದು ನಿಂತು "ಗೈರ ಹಾಜರ" ಎಂದ.

* * *



ಮಾಧವಿ

ತಮ್ಮ ವ್ಯಾಪಾರವನ್ನು ಹೆಚ್ಚಿಸಿ, ತಮ್ಮ ಪದಾರ್ಥಗಳನ್ನು ಹೆಚ್ಚು ಜನಪ್ರಿಯಗೊಳಿಸಲು ಒಂದು ಬಿಸ್ಕಿಟ ಕಂಪನಿಯವರು ಪ್ರಸಾರವನ್ನು ಪ್ರಾರಂಭಿಸಿದರು. ಈ ಪ್ರಸಾರದಲ್ಲಿ ನಾವಿನ್ಯತೆಯನ್ನು ತೋರಿಸಲು ಬಿಸ್ಕಿಟುಗಳನ್ನು ಪುಕ್ಕಟೆ ಹಂಚುವ ತಂತ್ರವನ್ನು ಹೂಡಿದರು. ಒಬ್ಬ ಗ್ರಾಹಕ ಈ ಬಿಸ್ಕೀಟ ಪ್ರದರ್ಶನ ಅಂಗಡಿಗೆ ಬಂದವನೇ ಒಂದು ಪೌಂಡು ಬಿಸ್ಕಿಟ ಪಾಕೀಟಿಗೆ ಹಣ ಕೊಡಲು ಹೋದಂತೆಯೇ ಅಲ್ಲಿಯ ಮಾರಾಟಗಾರ ಎರಡು ಸ್ಯಾಂಪಲ ಬಿಸ್ಕಿಟನ್ನು ಪುಕ್ಕಟೆಯಾಗಿ ಕೊಟ್ಟು ಅದನ್ನು ತೆಗೆದು ತಿಂದವನೆ ಆ ಗ್ರಾಹಕ ತಾನು ತೆಗೆದುಕೊಂಡಿದ್ದ ಒಂದು ಪೌಂಡ ಬಿಸ್ಕಿಟ ಪಾಕೀಟನ್ನು ಪರತ ಕೊಟ್ಟು ಸೊಟ್ಟ ಮಾರಿ ಮಾಡಿಕೊಂಡು ತನ್ನ ದಾರಿ ಹಿಡಿದ.

* * *

ಅದು ಬಹಳ ಜನದಟ್ಟಣಿ, ವಾಹನಗಳ ಓಡಾಟವಿರುವ ರಸ್ತೆ. ಒಬ್ಬ ಲಾರಿ ಡ್ರ್ಯಾವ್ಹರನು ತನ್ನ ಲಾರಿಯನ್ನು ಅಲ್ಲಲ್ಲಿ ನಿಲ್ಲಿಸುತ್ತಿದ್ದ. ಇಳಿದು ಹಿಂದೆ ಹೋಗಿ ಪಕ್ಕಗಳಲ್ಲಿ ಕೆಲ ನಿಮಿಷಗಳಲ್ಲಿ ಬಡೆದು ನಂತರ ಹಿಂತಿರುಗಿ ಮತ್ತೆ ಲಾರಿಯನ್ನು ನಡೆಸುತ್ತಿದ್ದ. ಇದರಿಂದ ವಾಹನ ಸಾರಿಗೆಗೆ ತೊಂದರೆಯಾಗುತ್ತಿತ್ತು ಅಲ್ಲದೆ ಒಬ್ಬ ಪೋಲೀಸನ ಕುತೂಹಲವನ್ನು ಕೆರಳಿಸಿತು. ಅವನ ಬೆನ್ನು ಹತ್ತಿ ಇವನ ರೀತಿಯನ್ನು ಗಮನಿಸುತ್ತಿದ್ದ. ನಾಲ್ಕನೆಯ ಬಾರಿ ಈ ಡ್ರ್ಯಾವ್ಹರ ಗಾಡಿಯನ್ನು ನಿಲ್ಲಿಸಿದ ಕೂಡಲೆ ಪಕ್ಕದಲ್ಲಿ ಬಂದು ಬಡಿಯಹತ್ತಿದ. ಈ ಪೋಲಿಸ ಅವನ ಹಿಂದೆಯೇ ಹೋದವನೆ 'ನಿನ್ನ ಕೃತ್ಯ ನನಗೆ ಕುತೂಹಲವನ್ನುಂಟು ಮಾಡಿದೆ. ಆಗಾಗ ನಿಲ್ಲಿಸಿ ಟ್ರಕ್ಕಿನ ಪಕ್ಕದಲ್ಲಿ ಬಡಿಯುತ್ತೀ ಯಾಕೆ?' ಎಂದು ಕೇಳಿದ.

"ಕಾರಣವೇ. ಬಹಳ ಸರಳವಾಗಿದೆ. ಈ ಟ್ರಕ್ಕು ಕೇವಲ ಐದು ಟನ್ನ ಭಾರವನ್ನು ಹೊರುವಂಥದು, ಆದರೆ ನಾನು ಆರು ಟನ್ನ ತೂಕವುಳ್ಳ ಪಾರಿವಾಳಗಳನ್ನು ಇದರಲ್ಲಿ ಹೇರಿದ್ದೇನೆ. ಒಂದು ಟನ್ ಪಾರಿವಾಳಗಳನ್ನು ಯಾವಾಗಲೂ ಗಗನದಲ್ಲಿ ಇಡಬೇಕಲ್ಲವೆ !"

* * *

ಒಬ್ಬ ವ್ಯಾಪಾರಿ ತನ್ನ ಅಂಗಡಿಯಲ್ಲಿಯ ಗ್ಯಾಸ ಬರನರನ್ನು ಮರೆತು ಚಾಲೂ ಇಟ್ಟು ಅಂಗಡಿಯನ್ನು ಬಂದು ಮಾಡಿಕೊಂಡು ರಾತ್ರಿಯಲ್ಲಿ ಹೋದನು. ಮರುದಿನ ಮುಂಜಾನೆ ಅಂಗಡಿಗೆ ಬಂದು ಗ್ಯಾಸ ಬರನರನ್ನು ಹಚ್ಚಲು ಹೋದಾಗ ಕಡ್ಡಿ ಕೆರೆದ. ಗ್ಯಾಸ ತುಂಬಿದ್ದ ಅಂಗಡಿ ಒಮ್ಮೆಲೆ ಸ್ಫೋಟವಾಯಿತು, ಅಲ್ಲದೆ ಬಾಗಿಲಿನ ಮುಖಾಂತರ ರಸ್ತೆಗೆ ಒಗೆಯಿತು.

ಒಬ್ಬ ದಾರಿಹೋಕ ಇವನು ರಸ್ತೆಯ ಮಧ್ಯದಲ್ಲಿ ಬಿದ್ದುದನ್ನು ಕಂಡು ಪೆಟ್ಟು ಹತ್ತಿತೆ ಎಂದು ಕೇಳಿದ.

ಇಷ್ಟರಲ್ಲಿ ಹತ್ತಿ ಉರಿಯುತ್ತಿರುವ ಅಂಗಡಿಯ ಕಡೆಗೆ ಕಣ್ಣೇರಿಕ್ಕುತ ನೋಡಿದವನೇ

"ಇಲ್ಲಿ ಸುಡುವ ಮೊದಲೇ ಹೊರಬಿದ್ದೆ" ಎಂದ.

* * *

## ನಗಿಸಿದವರಿಗೆ ಒಂದು ಸಾವಿರ ಡಾಲರ

ಈ ಶತಮಾನದ ಆರಂಭದಲ್ಲಿ ರಂಗಭೂಮಿಯ ಮಂಚಗಳಲ್ಲಿ ಎಲ್ಲರನ್ನು ಮೀರಿಸಿದವಳೆಂದರೆ ಒಬ್ಬಿ ಸ್ತ್ರೀ. ಈಕೆ ದೇಶದಾದ್ಯಂತ "ಗಂಭೀರಗಾರ್ತಿ" ಎಂದು ಹೆಸರಿಟ್ಟುಕೊಂಡು ಪ್ರವಾಸ ಮಾಡಿದಳು. ೧೯೦೮ರಲ್ಲಿ ನ್ಯೂಯಾರ್ಕಿನ ವ್ಹಿಕ್ಟೋರಿಯಾ ಥಿಯೆಟರಿನಲ್ಲಿ ಒಂದು ಸವಾಲು ಹಚ್ಚಿದಳು. ಯಾರಾದರೂ ತನ್ನನ್ನು ನಗೆಸಿದಲ್ಲಿ ಒಂದು ಸಾವಿರ ಡಾಲರು ಬಹುಮಾನ ಕೊಡುವದಾಗಿ ಸಾರಿದಳು. ಈ ಸವಾಲು ನಗರದ ಅನೇಕ ವಿದೂಷಕರ ಕಿವಿ ಮುಟ್ಟಿತು. ಇತರರನ್ನು ನಗೆಸುವ ವಿದೂಷಕರು ತಮ್ಮ ಶಕ್ತಿ ಸಾಮರ್ಥ್ಯಗಳ ಪೂರ್ಣ ವಿಶ್ವಾಸ ತಾಳಿದವರಾದ್ದರಿಂದ ಈ ಸವಾಲನ್ನು ಸ್ವೀಕರಿಸಿದರು. ಈ ಗಂಭೀರಗಾರ್ತಿಯನ್ನು ನಗೆಸಿದರೆ ಬಹುಮಾನ ಅಲ್ಲದೆ ಕೀರ್ತಿಗೌರವಗಳೊಡನೆ ದೇಶದಾದ್ಯಂತ ಪ್ರಸಾರದ ಲಾಭವು ದೊರೆಯುವದೆಂಬ ಆಶೆ ಈ ಕೆಲಸಕ್ಕೆ ಪ್ರೇರಿಸಿತು. ವಾರಗಳು ಕಳೆದವು. ವಾರದಿಂದ ವಾರಕ್ಕೆ ವಿದೂಷಕರು ಅವಳನ್ನು ನಗೆಸಲು ಪ್ರಯತ್ನಿಸಿದರು. ನಿರಾಶೆಯನ್ನು ತಾಳಿದುದು ಆಯಿತು. ಮತ್ತೆ ಪ್ರಯತ್ನಿಸಿಯೂ ಆಯಿತು. ಮತ್ತೆ ಗಂಭೀರಗಾರ್ತಿ ಜನಪ್ರಿಯಳಾಗುತ್ತ ಹೆಸರಾಂತ ವಿದೂಷಕರ ಕೀರ್ತಿಗೆ ಹಾನಿಯನ್ನು ತಂದುಕೊಟ್ಟಳು. ಅವಳ ಮೇಲೆ ಕೆಂಡವನ್ನು ಕಾರುತ್ತ ಒಬ್ಬೊಬ್ಬರಾಗಿ ರಂಗಸ್ಥಲದಿಂದ ಎಲ್ಲರೂ ಹಿಂದೆ ಸರಿದರು. ಆದರೆ ಅನೇಕ ತಿಂಗಳ ತರುವಾಯ ಈ ಗಂಭೀರಗಾರ್ತಿ ಪಾರ್ಶ್ವವಾಯು ಪೀಡಿತಳಾಗಿ ಮುಖದ ನರಗಳು ನಿರ್ಜೀವಿಯಾಗಿವೆ ಎಂದು ತಿಳಿದಾಗ ಅವರ ದ್ವೇಷ-ವೈಷಮ್ಯಗಳಿಗೆ ಮೇರೆ ಎಲ್ಲಿ?

● ● ●



ನೀನು ಪರೀಕ್ಷೆ ಪಾಸಾಗಿದ್ದಿಯಲ್ಲವೇ ?
ನಾನಲ್ಲ ಸಾರ್, ನನ್ನ ತಂದೆ ಪಾಸು ಮಾಡಿಸಿದ್ದು.

# ವಿಯಟ್‌ನಾಮು ಸಮಸ್ಯೆ : ಪರಿಸ್ಥಿತಿ ಹಾಗೂ ಪರಿಹಾರ

ಶ್ರೀ ಕೆ. ಎಸ್. ಶರ್ಮ, ಎಂ. ಎ., ಎಲೆಲ್. ಬಿ , ಡಿ. ಪಿ ಎ.

[ ಜಗತ್ತಿನಾದ್ಯಂತ ಪ್ರಗತಿಶೀಲ ರಾಷ್ಟ್ರಗಳು, ಪ್ರಗತಿಪರ ಸಂಸ್ಥೆಗಳು ಜುಲೈ ೨೦ ರಂದು ವಿಯಟ್ನಾಮ್ ದಿನಾಚರಣೆ'ಯನ್ನು ಆಚರಿಸಿದರು. ೨೭ ವರ್ಷಗಳ ಹಿಂದೆ ವಿಯಟ್‌ನಾಮ್ ಪ್ರಜೆಗಳು ಶ್ರೀ ಹೋಚಿಮಿನ್‌ರ ನಾಯಕತ್ವದಲ್ಲಿ ಹೂಡಿದ ಸ್ವಾತಂತ್ರ್ಯ ಹೋರಾಟ ಇಂದಿಗೆ ಸಾವು–ಬದುಕಿನ ಹೋರಾಟವಾಗಿ, ಬಂಡವಾಳಶಾಹಿಗಳ ವಿರುದ್ಧ ಹೂಡಿದ ಸತತ–ಬಲಿಷ್ಠ ಹೋರಾಟವಾಗಿ ನಡೆದೇ ಇದೆ. ದಕ್ಷಿಣ ವಿಯಟ್‌ನಾಮ್‌ವನ್ನು ರಚಿಸಿ, ಅದರ ಬೆನ್ನು ಬಿದ್ದು ಪ್ರಗತಿಪರ–ಸ್ವಾತಂತ್ರ್ಯಪ್ರಿಯ ಉತ್ತರ ವಿಯಟ್‌ನಾಮ್ ಪ್ರಜೆಗಳ ಆಹುತಿಗೈಯಬೇಕೆಂಬ ಅಮೇರಿಕನ್ನರಿಗೆ 'ಮರೆಯದ ಪಾಠ' ಕಲಿಸುತ್ತಿರುವ ವಿಯಟ್‌ಕಾಂಗ್‌ದ ಪ್ರಜೆಗಳ ಸಾಹಸ ಅಪ್ರತಿಮ. ಉತ್ತರ ವಿಯಟ್‌ನಾಮ್‌ವನ್ನು ನಾಶಗೊಳಿಸಬೇಕೆಂದು ಅಮೇರಿಕನ್ ಸರ್ಕಾರ ೧೯೫೦ ರಿಂದ ೧೯೬೫ ರ ವರೆಗೆ ೨೨೪೦ ಕೋಟಿ ಡಾಲರ್ (ರೂ. ೧,೬೭,೦೦೦ ಕೋಟಿ) ಖರ್ಚು ಮಾಡಿದ್ದಾರೆ. ೭೭,೮೨೦ ಸೈನಿಕರನ್ನು ೪೩,೮೨೦ ಆಧುನಿಕ ವಿಮಾನಗಳನ್ನು ಕಳೆದುಕೊಂಡಿದ್ದಾರೆ.

ಈ ಬಗ್ಗೆ ಮಾನವತಾವಾದಿ ಲಾರ್ಡ್ ಬರ್ಟರೆಂಡ್ ರಸಲ್‌ರವರು ೧೯೬೭ ರ ಮೇ-ದಲ್ಲಿ ಸ್ಟಾಕ್‌ಹೋಮದಲ್ಲಿ ವಿಶ್ವದ ಮಹಾನ್ ವ್ಯಕ್ತಿಗಳ ಸಮ್ಮುಖದಲ್ಲಿ ಅಮೇರಿಕದ ಯುದ್ಧಾಪರಾಧಿಗಳನ್ನು ಬಹಿರಂಗ ವಿಚಾರಣೆಗೆ ಗುರಿಪಡಿಸಿದ ವಿಷಯ ಗಮನಾರ್ಹ. ಈ ಲೇಖನದಲ್ಲಿ ವಿಯಟ್‌ನಾಮಿನ ಬಗ್ಗೆ ಒಂದು ಸಂಕ್ಷಿಪ್ತ ಪರಿಚಯ ಕೊಡಲಾಗಿದೆ. ]

— ಸಂ.

"ವಿಯೆತನಾಮ ಜನತೆ ನ್ಯಾಯಕ್ಕಾಗಿ ಹೋರಾಡುತ್ತಿರುವ ಜಾಗತಿಕ ಸೈನಿಕರು. ಅವರ ಹೋರಾಟದ ಕತೆಯು ಒಂದು ವೀರ ಮಹಾಕಾವ್ಯ. ಮಾನವರು ತೋರ ಬಹುದಾದ ಅಥವಾ ಹೊಂದಬಹುದಾದ ವೀರತನಕ್ಕೆ ಅವರ ಕೃತಿಗಳು ಶಾಶ್ವತ ಸೆನ ಪನ್ನು ನೀಡಬಲ್ಲವು. ಅವರು ಅತ್ಯುತ್ತಮ ಆದರ್ಶಕ್ಕೆ ಆತ್ಮಾರ್ಪಣೆ ಮಾಡಿಕೊಂಡಿದ್ದಾರೆ. ನಾವು ವಿಯೆತನಾಮ ಜನತೆಗೆ ನಮ್ಮ ಗೌರವಪೂರ್ವಕ ವಂದನೆಗಳನ್ನು ಅರ್ಪಿಸೋಣ"

ಅಂತರರಾಷ್ಟ್ರೀಯ ಖ್ಯಾತಿಯನ್ನು ಪಡೆದಿರುವ ವೇದಾಂತ ಶಾಸ್ತ್ರಜ್ಞ ಶ್ರೀ. ಬರ್ಟರೆಂಡ ರೆಸಲ್ಲರು ವಿಯತನಾಮ ಜನತೆಯ ಸ್ವಾತಂತ್ರ್ಯ ಹೋರಾಟದ ದುರಂತ ವಸ್ತುಸ್ಥಿತಿಯ ಬಗ್ಗೆ ಹೇಳಿರುವ ಮಾತು ಅಕ್ಷರಶಃ ಸತ್ಯವೇ ಆಗಿದೆ.

ಜಗತ್ತಿನಲ್ಲಿ ಯಾವುದೇ ಮಹಾರಾಜ್ಯ, ವಸಾಹತು ರಾಜ್ಯಗಳ ನಿರ್ಮಾಣ ಮಾಡಲು ಹೊರಟರೆ, ಅದರ ವಿಸ್ತರಣಾ ಧೋರಣೆಯನ್ನು ತಡೆಗಟ್ಟಬೇಕೆಂದೂ, ಜಗತ್ತಿನ ಎಲ್ಲ ರಾಷ್ಟ್ರಗಳು ಸ್ವಾತಂತ್ರ್ಯವನ್ನು ಪಡೆದು ತಮ್ಮತಮ್ಮ ರಾಜ್ಯಗಳನ್ನು ತಾವೇ ಆಳುವ ಕಾಲ ಸನ್ನಿಹಿತವಾಗಬೇಕೆಂದೂ ಪ್ರಗತಿಪರ ತತ್ವಪ್ರತಿಪಾದಕರು ಹೋರಾಡುತ್ತಿದ್ದಾರೆ. ಹೀಗಿರುವಾಗ ವಿಯತನಾಮ ಪ್ರಜೆಗಳ ಸ್ವಾತಂತ್ರ್ಯಕ್ಕೆ ಅವಮಾನ ಮಾಡಿ, 'ಅವರ ಸ್ವತಂತ್ರ ರಾಜ್ಯದ ಅಸ್ತಿತ್ವಕ್ಕೆ ಧಕ್ಕೆಯನ್ನು ತರುವಂತೆ ಬಂಡವಾಳಶಾಹಿ ರಾಷ್ಟ್ರವಾದ ಅಮೇರಿಕಾ ವರ್ತಿಸುತ್ತದೆ ಎಂಬ ಮಾತು ನಿರ್ವಿವಾದವಾಗಿದೆ. ಪ್ರಚಲಿತ ಅಂತರರಾಷ್ಟ್ರೀಯ ರಾಜಕೀಯ ರಂಗದಲ್ಲಿ ಪ್ರತಿದಿನವೂ ಪ್ರತಿಧ್ವನಿಸುತ್ತಿರುವ ವಿಯತನಾಮ ಸಮಸ್ಯೆ ಏನು? ಅಲ್ಲಿ ನೆಲಸಿರುವ ಭಯಾನಕ ಪರಿಸ್ಥಿತಿಯ ಹಿನ್ನೆಲೆ ಏನು? ಕ್ಲಿಷ್ಟ ಸಮಸ್ಯೆಯ ಪರಿಹಾರವೆಲ್ಲಿ ಎಂಬ ಅಂಶಗಳನ್ನು ಇಲ್ಲಿ ವಿವೇಚಿಸಲಾಗಿದೆ.

**ಹಿನ್ನೆಲೆ:—** ಇಂದಿಗೆ ಸುಮಾರು ನಾಲ್ವತ್ತು ವರ್ಷಗಳ ಹಿಂದೆ ವಿಯೆತನಾಮ ಜನತೆಯು ಡಾ॥ ಹೊಚಿ ಮಿನ್ನರ ನೇತೃತ್ವದಲ್ಲಿ ಫ್ರೆಂಚ ಆಡಳಿತದಿಂದ ವಿಮೋಚನೆಗೊಳ್ಳಲು ಸ್ವಾತಂತ್ರ್ಯ ಸಂಗ್ರಾಮವನ್ನು ಪ್ರಾರಂಭಿಸಿದರು. ಅಂದು ಪ್ರಾರಂಭವಾದ ಸಂಗ್ರಾಮ ಇಂದಿಗೂ ಮುಗಿದಿಲ್ಲ. ಅಮೇರಿಕದ ವಿಸ್ತರಣದಾಹದಿಂದ ಈ ಆಂತರಿಕ ಸಮಸ್ಯೆಯು ಒಂದು ಅಂತರಾಷ್ಟ್ರೀಯ ಸಮಸ್ಯೆಯಾಗಿ ಪರಿಣಮಿಸಿದೆ.

೧೮೫೮ ರಿಂದಲೂ ಫ್ರೆಂಚ ವಸಾಹತಾಗಿದ್ದ ವಿಯತನಾಮಿನ ಸ್ವಾತಂತ್ರ್ಯ ಸಂಗ್ರಾಮದ ನಾಂದಿಯಾಡದ್ದು ೧೯೨೦ರಲ್ಲಿ. ಹೋಚಿಮಿನ್ನರು ಆಗ ಇಂಡೋಚೀನಾ ಕಮ್ಯುನಿಷ್ಟ ಪಕ್ಷವನ್ನು ಸ್ಥಾಪಿಸಿ ಫ್ರೆಂಚ ಆಕ್ರಮಣಕಾರರನ್ನು ಹೊರದೂಡುವ ಸಿದ್ಧತೆಯನ್ನು ಪ್ರಾರಂಭಿಸಿದ್ದರು. ಇವರ ಪೂರ್ವಸಿದ್ಧತೆ, ಸಂಘಟನೆಗಳು ನಡೆದಿದ್ದಂತೆ ಎರಡನೆ ಮಹಾ ಯುದ್ಧ ತಲೆದೋರಿತು. ೧೯೪೦ ರಲ್ಲಿ ಜಪಾನಿಯರ ದಾಳಿಯನ್ನು ತಡೆಯಲಾರದೆ ಇಂಡೋಚೀನವನ್ನು ಜಪಾನಿಯರ ವಶಕ್ಕೆ ಒಪ್ಪಿಸಿ

ಕಾಲುಕಿತ್ತರು. ಆಗ ಡಾ॥ ಹೋಚಿ ಮಿನ್ನರು ಹೊಸ ಪ್ರತಿಗಾಮಿ ಶಕ್ತಿಯನ್ನು ಎದುರಿಸ ಬೇಕಾಯಿತು ಇದಕ್ಕಾಗಿ ಭೂಗತರಾಗಿದ್ದ ಹೋಚಿಮಿನ್ನರು ವಿಯೆತನಾಮಿನಲ್ಲಿದ್ದ ಎಲ್ಲ ರಾಷ್ಟ್ರೀಯವಾದಿ ಪಕ್ಷಗಳನ್ನು ಒಂದು ಗೂಡಿಸಿ "ವಿಯೆತಮಿನ್" ಎಂಬ ನೂತನ ಸಂಘವನ್ನು ಸ್ಥಾಪಿಸಿದರು. ವಿಯೆತ-ನಾಮವನ್ನು ಪರಕೀಯರ ಆಡಳಿತದಿಂದ ವಿಮೋಚನೆಗೊಳಿಸುವ ಏಕಮೇವ ಉದ್ದೇಶದಿಂದ ಪ್ರಾರಂಭವಾದ ಈ ಸಂಘದ ಯೋಧರಿಂದ ಜಪಾನಿಯರೊಡನೆ ಹೋರಾಡಲು ಗೊರಿಲ್ಲಾ ಯುದ್ಧ ತಂತ್ರವನ್ನು ಹೂಡಿದರು ಆಗ ಜಪಾನಿಯರ ವಿರುದ್ಧ ಮಹಾ ಯುದ್ಧದಲ್ಲಿ ತೊಡಗಿದ್ದ ಅಮೇರಿಕೆಗೆ ವಿಯೆತಮಿನ್ ಪಡೆಗಳು ಸಹಾಯ ಮಾಡುತ್ತಿದ್ದವು.

ಜಪಾನವು ೧೯೪೫ ರಲ್ಲಿ ಶರಣಾಗತಿಯನ್ನು ಒಪ್ಪಿಕೊಳ್ಳುವ ಸಮಯ ಬಂದಿತ್ತು. ಆಗ ವಿಯೆತನಾಮದ ಉತ್ತರದ ಬಹು ಭಾಗ ವಿಯತಮಿನ್‌ರ ವಶದಲ್ಲಿ ಬಂದಾಗಿತ್ತು. ೧೯೪೫ರ ಸಪ್ಟಂಬರ ೨ ರಂದು ಡಾ॥ ಹೋಚಿಮಿನ್‌ರ ಅಧ್ಯಕ್ಷತೆಯಲ್ಲಿ ವಿಯೆತನಾಮ ಪ್ರಜಾಪ್ರಭುತ್ವದ ರವಿ ಗಗನದಲ್ಲಿ ಮೂಡಿದನೆಂದರೆ ಆಶ್ಚರ್ಯವಾಗಬೇಕಿಲ್ಲ.

೧೯೪೬ ಜನೆವರಿ ೬ ರಂದು ವಿಯೆತ-ನಾಮ ಚುನಾವಣೆಗಳು ಪ್ರಜಾಪ್ರಭುತ್ವದ ಪಥದಲ್ಲಿ ನಡೆದವು. "ವಿಯೆತಮಿನ್" ಪಕ್ಷಕ್ಕೆ ಬಹುಮತ ದೊರೆಯಿತು. ೧೯೪೬ರ ಮಾರ್ಚ ೬ ರಂದು ಫ್ರೆಂಚ ಸರಕಾರ "ವಿಯೆತಮಿನ್" ಸರಕಾರಕ್ಕೆ ಮನ್ನಣೆ ನೀಡಿತು. ಆಗ ಡಾ॥ ಹೋಚಿಮಿನ್‌ರು ಇಂಡೊಚೀನಾ ಒಕ್ಕೂಟದಲ್ಲಿ ಸೇರಲು ಒಪ್ಪಿದ್ದರೆ ಅದರ ಕತೆಯೇ ಬೇರೆಯಾಗುತ್ತಿತ್ತು. ಆದರೆ ಸ್ವಾತಂತ್ರ್ಯಪ್ರಿಯರಾದ ವಿಯೆತನಾಮ ಜನರು ಒಪ್ಪಲಿಲ್ಲ. ಆದರೆ ಪ್ರತ್ಯೇಕ ಅಸ್ತಿತ್ವದಿಂದಲೇ ಅದರ ಪ್ರಗತಿ ಸಾಧ್ಯವೆಂದು ನಂಬಿದವರಾದ ಡಾ॥ ಹೋಚಿಮಿನ್ ಈ ಒಪ್ಪಂದಕ್ಕೆ ಒಪ್ಪಲಿಲ್ಲ. ಫ್ರೆಂಚ ಸೈನ್ಯವು ವಿಯೆತನಾಮವನ್ನು ಪ್ರವೇಶಿಸಲು ಒಂದು ಸಂಧಿಯನ್ನು ಹುಡುಕಿ ಇಂಡೋಚೀನದ ನೆಲವನ್ನು ಕಬಳಿಸಿದ ಚೀನಿಯರನ್ನು ಹೊರಗೆ ಹಾಕುವ ಅವಶ್ಯಕತೆಯನ್ನು ತೋರಿಸಿ ವಿಯೆತನಾಮಿಗೆ ಆಗಮಿಸಿದರು. ವಿಯೆತ-ನಾಮಿನಲ್ಲಿ ಮತ್ತೆ ಹೊಸ ವಸಾಹತವನ್ನು ಸ್ಥಾಪಿಸುವ ಉದ್ದೇಶದಿಂದ ಬಂದಿದ್ದ ಫ್ರೆಂಚ ಸೈನ್ಯವು ಇಂಡೊಚೀನಾದಿಂದ ಚೀನಿಯರನ್ನು ಓಡಿಸಿದ ನಂತರ ಶಾಂತಿಯುತವಾಗಿ ಹಿಂದಿರುಗದೆ, ವಿಯೆತನಾಮಿ-ನಲ್ಲೇ ನೆಲೆಯೂರಿತು. ಈ ಕ್ಲಿಷ್ಟತೆಯನ್ನು ಎದುರಿಸಲು ೧೯೪೬ ಡಿಶಂಬರ ೧೯ ರಂದು ಹಾನೊಯಿನಲ್ಲಿ "ವಿಯೆತಮಿನ್" ಹಾಗೂ ಫ್ರೆಂಚ ಪಡೆಗಳ ನಡುವೆ ಕದನವು ಪ್ರಾರಂಭವಾಯಿತು. ಭೀಕರ ಕದನ ಎಂಟುವರ್ಷಗಳ ಕಾಲನಡೆದು ೧೯೫೪ ಮೇ ೭ರಂದು ಡಿನ್‌ಬಿನ್‌ಫುನಲ್ಲಿ ಫ್ರೆಂಚ ಪಡೆಗಳ ಸೋಲಿನಲ್ಲಿ ಮುಕ್ತಾಯವಾಯಿತು. ೧೯೫೪ ಜುಲೈ ೨೦ ಮತ್ತು

೨೧ ರಂದು ಜಿನೆವಾದಲ್ಲಿ ಫ್ರೆಂಚ ಹಾಗೂ ವಿಯೆತಮಿನ್ ಸೇನಾನಾಯಕರು ಯುದ್ಧ ಸ್ಥಂಬನ ಒಪ್ಪಂದಕ್ಕೆ ಸಹಿ ಹಾಕಿದರು. ತಾತ್ಪೂರ್ತಿಕ ಪರಿಹಾರವೆಂದು ವಿಯೆತಮಿನ ಪಡೆಗಳನ್ನು ಉತ್ತರ ಭಾಗಕ್ಕೂ ಫ್ರೆಂಚ ಪಡೆಗಳನ್ನು ದಕ್ಷಿಣ ಭಾಗಕ್ಕೂ ಹಿಂತೆಗೆದು ಕೊಳ್ಳುವ ಈ ಒಪ್ಪಂದವೇ ದಕ್ಷಿಣ ವಿಯೆತನಾಮದ ಜನನಕ್ಕೆಕಾರಣವಾಯಿತು. ಅಂದಿನದಿನವೇ ಸಮಗ್ರ ವಿಯೆತನಾಮಿನ ರವಿ ಮುಳುಗಿದೆ.

ಇಂಡೊಚೀನಾದಲ್ಲಿ ಶಾಂತಿಯನ್ನು ಕಾಪಾಡಲು ಜಿನೇವಾದಲ್ಲಿ ಪುನಃ ಸಭೆ ಯನ್ನು ಸೇರಿಸಲಾಯಿತು. ಲಾವೊಸ, ಕಾಂಬೊಡಿಯಾ ಉತ್ತರ ಹಾಗೂ ದಕ್ಷಿಣ ವಿಯೆಟನಾಮು, ಚೀನಾ, ರಷ್ಯ, ಫ್ರಾನ್ಸ, ಬ್ರಿಟನ್ ಮತ್ತು ಅಮೇರಿಕದ ಪ್ರತಿನಿಧಿ ಗಳು ಘೋಷಣೆಗಳನ್ನು ಹೊರಡಿಸಿ ಕೆಳ ಕಂಡ ನಿರ್ಧಾರವನ್ನು ಕೈಕೊಂಡರು.

(೧) ವಿಯತನಾಮು, ಕಾಂಬೊಡಿಯಾ ಮತ್ತು ಲಾವೊಸಗಳನ್ನು ಸ್ವತಂತ್ರ ರಾಷ್ಟ್ರ ಗಳೆಂದು ಪರಿಗಣಿಸಿ ಅವುಗಳ ಆಂತರಿಕ ವ್ಯವಹಾರಗಳಲ್ಲಿ ಕೈಹಾಕದಿರುವದು.

(೨) ವಿಯತನಾಮಿನ ಸಧ್ಯದ ವಿಭ ಜನೆ ತಾತ್ಕಾಲಿಕವೆಂದು ಪರಿಗಣಿಸಿ ೧೯೫೬ ನೆಯ ಜುಲೈನಲ್ಲಿ ಅಂತರರಾಷ್ಟ್ರೀಯ ಮಂಡಲಿಯ ಹತೋಟಿಯಲ್ಲಿ ಸಾರ್ವತ್ರಿಕ ಚುನಾವಣೆಗಳು ನಡೆದು ವಿಯೆತನಾಮಿನ ಜನತೆಗೆ ಅವರ ರಾಜಕೀಯ ಭವಿಷ್ಯತ್ತನ್ನು ನಿರ್ಧರಿಸಲು ಅವಕಾಶ ನೀಡುವದು.

(೩) ವಿಯೆತನಾಮಿನಲ್ಲಿ ಯಾವುದೇ ಸೇನೆಯನ್ನು ನೆಲೆಸಲು ಅವಕಾಶ ನೀಡದಿ ರುವದು ಮತ್ತು ಉತ್ತರ ಹಾಗು ದಕ್ಷಿಣ ವಿಯೆತನಾಮ ವಿಭಾಗಗಳು ಪ್ರತ್ಯೇಕವಾಗಿ ಅನ್ಯ ರಾಷ್ಟ್ರಗಳೊಡನೆ ಯಾವುದೇ ಬಗೆಯ ಸೈನಿಕ ಒಪ್ಪಂದಗಳನ್ನು ಮಾಡಿ ಕೊಳ್ಳದಿರುವದು.

ಇದೇ ಜಿನೇವಾ ಒಪ್ಪಂದದ ಪ್ರಕಾರ ಉತ್ತರ ವಿಯಟನಾಮುವನ್ನು ವಿಯೆತ ಮಿನ್ ನಾಯಕರಾದ ಹೋಚಿಮಿನ್ ತಮ್ಮ ಆಡಳಿತಾಧೀನಕ್ಕೆ ಪಡೆದರು. ದಕ್ಷಿಣ ವಿಯೆತನಾಮುವನ್ನು ಫ್ರೆಂಚರ ಒಪ್ಪಿಗೆ ಯಿಂದ ಸಾರ್ವಭೌಮ ಶ್ರೀ ಭಾವೊಹಾಯ ಅವರಿಗೆ ಒಪ್ಪಿಸಲಾಯಿತು. ಈ ಒಪ್ಪಂದವು ೧೨ ವರ್ಷಗಳ ಹಿಂದೆ ಜರುಗಿದ್ದರೂ ಉತ್ತರ ವಿಯೆತನಾಮುನಲ್ಲಿ ಯಾವ ಆಡ ಳಿತೆ ಬದಲಾವಣೆಯೂ ಆಗದೆ ಅಲ್ಲಿಯ ಜನಪ್ರಿಯ ನಾಯಕರಾದ ಹೋಚಿಮಿನ್ ಅವರ ನೇತೃತ್ವದಲ್ಲಿ ರಾಜ್ಯಾಡಳಿತವು ಬಹು ದಕ್ಷತೆಯಿಂದ ಸಾಗಿದೆ. ದಕ್ಷಿಣ ವಿಯೆಟನಾಮುನಲ್ಲಿ ಆಡಳಿತಾಧಿಕಾರವು ಏಳೆಂಟು ಸಲ ಪಲ್ಲಟವಾಯಿತು. ಸುಭದ್ರ ಜನತಾ ಸರಕಾರದ ಸತ್ಕಾಲ ಇನ್ನೂ ಅಲ್ಲಿ ಒದಗುವವರಲ್ಲಿದೆ. ಈ ಹನ್ನೆರಡು ವರುಷ ಗಳಲ್ಲಿ ಒಂಭತ್ತು ಬಾರಿ ದಕ್ಷಿಣ ವಿಯಟ್-ನಾಮು ಸರಕಾರ ಬದಲಾಯಿತು, ಅಲ್ಲದೆ ಅಸ್ಥಿರ ಸರಕಾರವೇ ದಕ್ಷಿಣ ವಿಯೆಟ್-ನಾಮಿನ ಅಸ್ತಿತ್ವವಾದಂತಾಗಿದೆ.

೧೯೫೬ ರಲ್ಲಿ ವಿಯೆಟ್‌ನಾಮುದಲ್ಲಿ (ಉತ್ತರ ಹಾಗು ದಕ್ಷಿಣ) ಸಾರ್ವತ್ರಿಕ

ಚುನಾವಣೆಗಳು ನಡೆದು ಪ್ರಜಾ ಸರಕಾರ ನಡೆದಿದ್ದರೆ ಜಿನೇವಾ ಒಪ್ಪಂದ ಸಫಲತೆಯಲ್ಲಿ ಮುಕ್ತಾಯವಾಗುತ್ತಿತ್ತು. ವಿಯೆಟ್‌ನಾಮಿಗಳು ಅತುಲಾನಂದದಿಂದ ತಮ್ಮ ಅಭಿವೃದ್ಧಿಯಲ್ಲಿ ನಿಶ್ಚಿಂತೆಯಿಂದ ತೊಡಗಬಹುದಿತ್ತು, ಆದರೆ ಚುನಾವಣೆಗಳು ಜರುಗದೇ ವಿಯೆಟ್‌ನಾಮು ಏಕೀಕರಣ ಹಾಗೂ ಪ್ರಜಾರಾಜ್ಯ ಸ್ಥಾಪನೆಗಳ ಹಾದಿಯಲ್ಲಿ ಅಮೇರಿಕಾ ದೇಶದ ಬಂಡವಾಳಶಾಹಿತ್ವದ ಹಾಗು ಅವರ ವಿಸ್ತೀರ್ಣದಾಹ ಅಡ್ಡ ಬಂದು ಈ ಏಕೀಕೃತ ಕಲ್ಯಾಣರಾಜ್ಯ ರಚನೆಗೆ ಬೃಹದಾಕಾರದ ತೊಡಕನ್ನುಂಟು ಮಾಡಿತು. ೧೯೫೬ ರ ವೇಳೆಗೆ ಶ್ರೀ ಬಾವೊದಾಯ ಅವರನ್ನು ಅಧಿಕಾರದಿಂದ ಉರುಳಿಸಿ ಅಮೇರಿಕೆಯ ಕೈಗೊಂಬೆಯಾದ ಶ್ರೀ ಡೀಮ ಅವರನ್ನು ಅಧಿಕಾರಕ್ಕೆ ತಂದರು. ಅಮೇರಿಕಾ ಸರಕಾರದ ಸಹಾಯ ಹಾಗೂ ಸಹಕಾರಗಳನ್ನು ಡೀಮ್ ಪಡೆಯುತ್ತಿದ್ದ. ಅವರ ಸಲಹೆಯ ಮೇರೆಗೆ ೧೯೫೬ರಲ್ಲಿ ಚುನಾವಣೆಯನ್ನು ನಡೆಸಲು ಒಪ್ಪಲಿಲ್ಲ. ದಕ್ಷಿಣವಿಯೆತನಾಮು ತನ್ನ ಈ ಕೃತಿಯಿಂದ ಜಿನೇವಾ ಒಪ್ಪಂದದ ಉಲ್ಲಂಘನೆ ಮಾಡಿದಂತಾಗುತ್ತದೆಯಾದರೂ ಅಮೇರಿಕೆಯ ಪ್ರಭಾವಕ್ಕೆ ಒಳಗಾಗಿದ್ದ ಡೀಮ ಸರಕಾರ ಈ ಘಾತಕಕೃತ್ಯಕ್ಕೆ ಕೈಹಾಕಿತು. ಹೀಗೆ ಉಲ್ಲಂಘನೆ ಮಾಡಿ ಚುನಾವಣೆಗಳನ್ನು ನಡೆಸದಿರುವದಕ್ಕೆ ಕಾರಣ ಆಗಿನ ಅಮೇರಿಕೆಯ ಅಧ್ಯಕ್ಷ ಶ್ರೀ ಡ್ವೈಟ ಐಶೆನ್‌ಹೋವರವರ ಈ ಹೇಳಿಕೆಯಿಂದ ಅರಿಯಬಹುದು.

"I have never talked or corresponded with persons having knowledge in Indo-chinese affairs who did not agree that had the elections been conducted at the time of the fighting possibly 80 per cent of population would have voted for the communist Hochi minh as their leader farther than chief of state, —Bou Din

(Mandate for change)

ಸಾರ್ವತ್ರಿಕ ಚುನಾವಣೆ ನಡೆದರೆ ವಿಯೆಟನಾಮಿನ ಜನಪ್ರಿಯ ನಾಯಕ ಡಾಕ್ಟರ್ ಹೋಚಿಮಿನ್ ನಿಸ್ಸಂಶಯವಾಗಿ ಚುನಾಯಿತರಾಗುವರೆಂಬ ಭಯಕ್ಕೆ ಚುನಾವಣೆಯನ್ನು ನಡೆಸಗೊಡದೆ ಅಮೇರಿಕದ ಸರಕಾರವು ದಿಮನ ನಿರಂಕುಶ ಅಧಿಕಾರಕ್ಕೆ ಸಹಾಯ ಮಾಡತೊಡಗಿತು...ಜನತೆಯ ಪ್ರತಿಭಟನೆಗೆ ಉತ್ತರವಾಗಿ ದಕ್ಷಿಣವಿಯೆಟ್‌ನಾಮು ನಿರಂಕುಶ ಅಧಿಕಾರಿಗಳ ಗುಂಡಿನ ಹೆದರಿಕೆ ಇತ್ತು. ೧೯೬೩ ರ ಮೇ ತಿಂಗಳಲ್ಲಿ ಬುದ್ಧನ ಜಯಂತಿಯನ್ನು ಆಚರಿಸಲು ಬೌದ್ಧಮತೀಯರು,ದಕ್ಷಿಣ ವಿಯೆಟ್‌ನಾಮಿನಲ್ಲಿ ಸಭೆ ಸೇರಿದ್ದರೆ ಅವರ ಮೇಲೆ ಕ್ಯಾಥೊಲಿಕ ಕ್ರಿಶ್ಚಿಯನ್ ಜಾತಿಗೆ ಸೇರಿದ ಡೀಮ ಪೋಲಿಸ ಕ್ರಿಯೆ ತೆಗೆದುಕೊಂಡ. ಈ ನೀಚ ವರ್ತನೆ ಹಾಗು ದುರಾಡಳಿತೆ ಡೀಮರ ಪತನಕ್ಕೆ ಕಾರಣವಾಯಿತು.

ಡೀಮ ಪತನಕ್ಕೆ ಇನ್ನೊಂದು ಕಾರಣ ವಿತ್ತು. ಉತ್ತರ ವಿಯೆಟ್‌ನಾಮ ಜನತೆಯು ಡಾ॥ ಹೋಚಿಮಿನ್‌ರ ನೇತೃತ್ವದಲ್ಲಿ ಸಾಧಿಸಿದ ಪ್ರಗತಿ, ಅಲ್ಲಿ ಸುಪ್ತವಾಗಿ ನಡೆದಿದ್ದ ಸಾಮಾಜಿಕ ಕ್ರಾಂತಿ, ಇವುಗಳನ್ನು ನೋಡಿದ ದಕ್ಷಿಣ ವಿಯೆಟ್‌ನಾಮ ಜನತೆ ಪ್ರಗತಿಪರ ಮನೋವೃತ್ತಿಗೆ ಮನಸೋತು ಪರಕೀಯರ ನಿಯಂತ್ರಣದಿಂದಲೂ ಆಂತರಿಕ ನಿರಂಕುಶಾಧಿಕಾರದಿಂದಲೂ ಬಿಡುಗಡೆ ಹೊಂದಲು ತಯಾರಾದರು. ೧೯೬೦ ರ ಡಿಶೆಂಬರ ೩೦ ರಂದು ದಕ್ಷಿಣ ವಿಯೆಟ್‌ನಾಮಿನ ನಾಲ್ವತ್ತಕ್ಕೂ ಮಿಕ್ಕ ಸಂಘಸಂಸ್ಥೆಗಳು ವಿಲಯನಗೊಂಡು ರಾಷ್ಟ್ರೀಯ ವಿಮೋಚನಾರಂಗ (National liberation Front) ವನ್ನು ಸಿದ್ಧಗೊಳಿಸಿತು. ರಾಷ್ಟ್ರೀಯ ವಿಮೋಚನಾರಂಗ ಬಲವರ್ಧನೆ ಹೊಂದಿದ ಹಾಗೆ ಅಮೇರಿಕನ್ನರ ನೇರ ಹಸ್ತಕ್ಷೇಪವು ಪ್ರಾರಂಭವಾಯಿತು. ಶ್ರೀ ಡೀಮ ಅಮೇರಿಕೆಯ ಸೈನ್ಯ ಸಹಾಯವನ್ನು ಪಡೆದು ರಾಷ್ಟ್ರೀಯ ವಿಮೋಚನಾರಂಗವನ್ನು ಹತಮಾರಿಸಲು ಪ್ರಯತ್ನಿಸಿದ. ಮೂರು ವರ್ಷಗಳಕಾಲ ಹೋರಾಟ ಅವಿರತವಾಗಿ ಜರುಗಿತು. ಆದರೆ ೧೯೬೩ ರಲ್ಲಿ ಸಪ್ಟಂಬರ ೧ ರಂದು ನಡೆದ ಕ್ರಾಂತಿಯ ಪರಿಣಾಮವಾಗಿ ಡೀಮ ಸರಕಾರ ಉರುಳಿತು. ಆದರೆ ಜನತಾ ಸರಕಾರದ ಸ್ಥಾಪನೆ ಹಾಗು ವಿಯೆಟ್‌ನಾಮ ಏಕೀಕರಣ ಸಮಸ್ಯೆಗಳು ಇಂದಿಗೂ ಸಮಸ್ಯೆಗಳಾಗಿ ಉಳಿದಿವೆ. ಇದಕ್ಕೆ ಅಮೇರಿಕನ್ನರ ಜಿನೇವಾ ಒಪ್ಪಂದದ ಉಲ್ಲಂಘನೆ, ಹಾಗು ದಕ್ಷಿಣ ವಿಯೆಟ್‌ನಾಮಿನಲ್ಲಿ ಅವರ ನೆಲೆಯಾಗಿಸಿರುವ ಪ್ರಚಂಡ ಅಮೇರಿಕನ್ ಸೈನ್ಯಬಲಗಳೇ ಮುಖ್ಯ ಕಾರಣಗಳಾಗಿವೆ.

## ಅಮೇರಿಕೆಗೆ ಇಷ್ಟೇಕೆ (ಶ್ರದ್ಧೆ)—ಉತ್ಕಟತೆ

ಜಗತ್ತಿನ ಶಾಂತಿಸ್ಥಾಪನೆಗೆ ಜಗತ್ತಿನ ಎಲ್ಲ ರಾಷ್ಟ್ರಗಳಲ್ಲಿ ಸ್ವಾತಂತ್ರ್ಯ ಸ್ಥಾಪನೆ, ಪ್ರಜಾಸತ್ತಾತ್ಮಕ ರಾಜ್ಯಗಳ ಜನನ-ಪ್ರಗತಿಗಳಿಗಾಗಿಯೇ ತನ್ನ ಸರ್ವಸ್ವವನ್ನು ತ್ಯಾಗ ಮಾಡಿ ತನ್ನ ಕೈಮೀರಿ ಸಹಾಯ ಸಲ್ಲಿಸುವ ಸೋಗು ಹಾಕಿರುವ ಅಮೇರಿಕಾ ವಿಯೆಟನಾಮಿನಲ್ಲಿ ಯಾವ ವಿಧವಾದ ನಿಸ್ವಾರ್ಥ ಸೇವೆಯನ್ನು ಶಾಂತಿಸ್ಥಾಪನೆಗಾಗಿ ಸಲ್ಲಿಸುತ್ತಿದೆಯೆಂದು ಪರಿಶೀಲಿಸೋಣ. ಅಮೇರಿಕೆಯ ಅಧಿಕೃತ ಪತ್ರಿಕೆಗಳಲ್ಲಿ ಒಂದಾದ "ನ್ಯೂಯಾರ್ಕ ಟೈಮ್ಸ" ಪತ್ರಿಕೆಯು ೧೨ ನೇ ಫೆಬ್ರುವರಿ ೧೯೫೦ ರಲ್ಲಿ ಹೀಗೆ ಬರೆದಿದ್ದಿತು.

"Indo-china is worth a large gamble. In the north exportable tin, Tungston, Manganese, coal, timber and in South are rice, rubber, Tea, pepper and hides. Indo-China yielded dividends estimated at 300 million dallors per year."

[ "ಇಂಡೊಚೀನವು ಒಂದು ದೊಡ್ಡ ಜೂಜಿನ ಬೆಲೆಯುಳ್ಳದ್ದಾಗಿದೆ. ಉತ್ತರದಲ್ಲಿ ರಫ್ತು ಆಗಬಹುದಾದ ತವರು, ಟಂಗಸ್ಟನ್, ಸತವು, ಮ್ಯಾಂಗನೀಜ, ಕಲ್ಲಿದ್ದಲು ಹಾಗು ಮರದ ದಿಮ್ಮಿಗಳ, ಅಲ್ಲದೆ ದಕ್ಷಿಣದಲ್ಲಿ ಅಕ್ಕಿ, ರಬ್ಬರು, ಚಹ ಮೆಣಸು, ದನಕರುಗಳು ಹಾಗು ಚರ್ಮ ವಸ್ತುಗಳು ದೊರೆಯುತ್ತವೆ. ದ್ವಿತೀಯ ಮಹಾಯುದ್ಧದ ಮುನ್ನ ಇಂಡೊಚೀನವು ವರ್ಷಕ್ಕೆ ಸುಮಾರು ೩೦೦ ದಶಲಕ್ಷ ಡಾಲರುಗಳ ಯೋಜಿತ ಲಾಭಗಳಿಸಿತಂತೆ.]

೧೯೫೩ ರಲ್ಲಿ ಆಗಸ್ಟ ೪ ರಂದು ಅಂದಿನ ಅಧ್ಯಕ್ಷ ಶ್ರೀ ಡ್ವೈಟ ಐಶನ್‌ಹೋವರರವರು ಹೇಳಿದ ಮಾತುಗಳು ಕೆಳಗಿನಂತಿವೆ.

" Now let us assume we lost Indochina. If Indo-China goes, several things happen right way. The peninsula, the last bit of land hanging on down there would scarcely be definable. The tin and tungsten that we so greatly value from that area would cease coming... .. would be of most terrible significance to the U. S. A. our security, our power and ability to get certain things we need from the riches of Indo-China territory and from South east Asia "

[ ನಾವು ಇಂಡೊಚೀನಾವನ್ನು ಕಳೆದುಕೊಂಡೆವೆಂದು ಭಾವಿಸೋಣ...ಆಗ ಹೆಚ್ಚು ಮೌಲ್ಯ ನೀಡುವ ಅಲ್ಲಿನ ಮುಖ್ಯ ಉತ್ಪನ್ನವಾದ ತವರು ಹಾಗು ಟಂಗಸ್ಟನ್‌ಗಳು ನಮಗೆ ಪೂರೈಕೆಯಾಗುವದು ನಿಂತು ಹೋಗುತ್ತದೆ. ಇದು ಅಮೇರಿಕೆಗೆ ಬಹಳ ಮುಖ್ಯವಾದದ್ದು. ಈ ಘಟನೆಯು ಅಮೇರಿಕೆಯ ಭದ್ರತೆ, ಶಕ್ತಿ, ಇಂಡೋ-ಚೀನಾ ಪ್ರಾಂತಗಳಿಂದ ಪಡೆಯಬಹುದಾದ ಸಂಪತ್ತಿನ ಲಾಭ ಇವುಗಳ ದೃಷ್ಟಿಯಿಂದ ಬಹಳ ಮಹತ್ವಪೂರ್ಣವಾದದ್ದು. ]

ಅಮೇರಿಕನ್ ನಾಯಕರ ಘೋಷಣೆ ಹಾಗು ಅಮೇರಿಕನ್ನ ಸರಕಾರದ ನಿಲುವೆಯನ್ನು ಗಮನಿಸಿದರೆ ಅಮೇರಿಕನ್ನರಿಗೆ ವಿಯೆಟ್‌ನಾಮಿನ ಸಂಪತ್ತಿನ ದರೋಡೆ ಮಾಡುವ ಉದ್ದೇಶವಿದೆಯೆಂದು ಸ್ಪಷ್ಟವಾಗುತ್ತದೆ. ಸಾಮ್ರಾಜ್ಯಶಾಹಿಗಳಾದ ಅಮೇರಿಕನ್ನರು ವಿಯೆಟ್‌ನಾಮನ್ನು ತಮ್ಮ ವಸಾಹತುವನ್ನಾಗಿಸಿಕೊಳ್ಳಬೇಕೆಂಬ ಯೋಜನೆಯಿಂದ ಈ ಎಲ್ಲ ಕುಚೋದ್ಯಗಗಳನ್ನು ಕೈಗೊಳ್ಳುತ್ತಲಿದೆ.

ಕೊನೆಯಲ್ಲಿ ನಡೆದ ಜನರಲ್ ಕ್ವೆ (ದಕ್ಷಿಣ ವಿಯೆಟನಾಮಿನ ಸರ್ವಾಧಿಕಾರಿ) ಹಾಗು ಅಮೇರಿಕದ ಅಧ್ಯಕ್ಷ ಜಾನಸನ್ ಸಮಾವೇಷ ವಿಯೆಟನಾಮಿನಲ್ಲಿ ಅಮೇರಿಕನ್ನರು ಮಾಡುತ್ತಿರುವ ಹಸ್ತಕ್ಷೇಪಕ್ಕೆ ಒಂದು ಹೊಸ ಉಲ್ಲೇಖವನ್ನು ಒದಗಿಸುತ್ತದೆ.

ಅಧ್ಯಕ್ಷ ಜಾನಸನ್ ದಕ್ಷಿಣ ವಿಯೆಟನಾಮಿನ ನಾಯಕನನ್ನು ಸ್ವಾಗತಿಸುತ್ತ ಹೇಳಿದ ಮಾತು.

" We are here to talk especially of works of peace we will leave here determined not only to acheve victory over aggression, but also to win victory over hunger, and dispair."

[ ನಾವು ಮುಖ್ಯವಾಗಿ ಶಾಂತಿಯ ಚಟುವಟಿಕೆಗಳನ್ನು ಮಾತನಾಡಲು ಸೇರಿದ್ದೇವೆ. ದುರಾಕ್ರಮಣದ ಮೇಲೆ ಜಯವನ್ನು ಸಾಧಿಸಿಯೆ ತೀರುವೆವು ಎಂಬ ನಿರ್ಧಾರದಿಂದ ಈ ಮಾತುಕತೆ ಮುಗಿಸೋಣ, ಇಷ್ಟೆ ಅಲ್ಲದೆ ಹಸಿವು, ರೋಗ, ದುಃಖಗಳನ್ನು ಕೂಡಾ ಗೆಲ್ಲುವೆವೆಂಬ ಭರವಸೆ ತಾಳೋಣ '' ]

ಇದೇ ಸಮಯದಲ್ಲಿ ಜಾನಸನ್‌ರು ಪತ್ರಿಕಾಕರ್ತರಿಗೆ ಹೇಳಿದ ಮಾತುಗಳನ್ನು ನೋಡೋಣ.

" The road ahead may long and difficult. But we shall fight the battle against aggression in Viet-Nam. we shall fight the battle for social construction; and throughout the world, we shall fight the battle for peaee and we shall prevail "

[ನಮ್ಮ ಮುಂದಿರುವ ಹಾದಿಯು ಬಹಳ ಕಷ್ಟದಿಂದ ಕೂಡಿದ್ದು ಬಹಳ ದೀರ್ಘವಾದದ್ದು ಆಗಿರಬಹುದು. ಆದರೆ ನಾವು ವಿಯೆತನಾಮಿನಲ್ಲಿ ಆಕ್ರಮಣವನ್ನು ಎದುರಿಸುತ್ತೇವೆ. ನಾವು ಸಾಮಾಜಿಕ ರಚನೆಯನ್ನು ಕೂಡ ನಡೆಸುತ್ತೇವೆ. ಅಲ್ಲದೆ ಜಗತ್ತಿನಲ್ಲಿ ಶಾಂತಿಯುದ್ಧವನ್ನು ನಾವು ಹೋರಾಡುತ್ತೇವೆ. ನಾವು ಜಯಶಾಲಿಗಳಾಗಿಯೇ ತೀರುತ್ತೇವೆ.]

ಅಮೇರಿಕನ್ನರ ಮಾತಿಗೂ ಕೃತಿಗೂ ಇರುವ ಮಹದಂತರವನ್ನು ವಿಯೆತನಾಮಿನ ಯುದ್ಧ ನಿರೂಪಿಸುತ್ತದೆ.

ಅಮೇರಿಕನ್ನರ ಭಯಾನಕ ಯುದ್ಧ ತಂತ್ರ; ಕುಟಿಲ ನೀತಿ; ಬರಟ್ರೆಂಡ ರಸೆಲ್ಲರು ವಿಯೆತನಾಮಿನಲ್ಲಿ ಯುದ್ಧ ಮಾಡುತ್ತಿರುವ ಅಮೇರಿಕನ್ನ ಸೈನಿಕರಿಗೆ ಇತ್ತೀಚಿಗೆ ಒಂದು ಮನವಿಯನ್ನು ಬಿ. ಬಿ. ಸಿ. ಮುಖಾಂತರ ಬಿತ್ತರಿಸಿದ್ದಾರೆ. ಅಮೇರಿಕೆಯ ಸೈನಿಕರನ್ನು ವಿಯೆತನಾಮಿನಲ್ಲಿ ನಡೆಯುತ್ತಿರುವ ಅಧರ್ಮ ಯುದ್ಧದಲ್ಲಿ ಹೋರಾಡಲು ನಿರಾಕರಿಸಿರಿ, ಎಂದು ಸಾರಿದ್ದಾರೆ. ಈ ಮಹಾ ತತ್ವಜ್ಞಾನಿಯು ಮಾಡಿದ ಆಕಾಶವಾಣಿಯ ಪ್ರಸಾರದ ಕೆಲ ಭಾಗವನ್ನು ಇಲ್ಲಿ ಕೊಡಲಾಗಿದೆ.

"...You American Soldiers are you sent to protect the riches of few men of United States. The U.S forces have built an economic empire

which is being fought vigorously in Congo and especially in Viet-nam. If foreign power occupied the United States to steel American resources for itself and if a traitor government were established by force would you feel it was your government?

"...You are using Napalm which burns everything it touches. You are using phosphorus which eats like an acid those in its way. You are using fragmentation bombs and lucidogs which cut up into pieces and lacerate women and children in the villages hit, without discrimination".

[ಅಮೇರಿಕೆಯ ಸೈನಿಕರೆ!...ಅಮೇರಿಕೆಯಲ್ಲಿರುವ ಕೆಲವೇ ಜನರ ಆಸ್ತಿಯ ಅಭಿವೃದ್ಧಿಗಾಗಿ, ಅವರ ಬೊಕ್ಕಸದ ರಕ್ಷಣೆಗಾಗಿ ನೀವು ಹೋರಾಡುತ್ತಿದ್ದೀರಿ... ಅಮೇರಿಕೆಯ ಆಡಳಿತಕಾರರು ಜಗತ್ತಿನಲ್ಲಿ ಆರ್ಥಿಕ ಸಾಮ್ರಾಜ್ಯ ಒಂದನ್ನು ಕಟ್ಟಿದ್ದಾರೆ; ಇದನ್ನು ಕಾಂಗೊ, ವಿಯೆತನಾಮಗಳಲ್ಲಿ ಎದುರಿಸಲಾಗುತ್ತಿದೆ. ಯಾವದಾದರು ಪರರಾಷ್ಟ್ರವು ಅಮೇರಿಕೆಯಲ್ಲಿಯ ಸಂಪನ್ ಮೂಲಗಳನ್ನು ತಮ್ಮ ಸಲುವಾಗಿಯೇ ಉಪಯೋಗಿಸುವದಾದರೆ ಅಂತಹ ದೇಶದ್ರೋಹಿ ಸರಕಾರವನ್ನು ನಿಮ್ಮ ಸರಕಾರವೆಂದು ಭಾವಿಸುವಿರಾ?"

"ಮುಟ್ಟಿದ್ದನ್ನೆಲ್ಲಾ ಸುಡುವ ನೈಫಾಂ ಬಾಂಬುಗಳನ್ನು ನೀವು ಉಪಯೋಗಿಸುತ್ತಿದ್ದೀರಿ. ತನ್ನ ಹಾದಿಯಲ್ಲಿ ಬಂದುದೆಲ್ಲವನ್ನು ಆಮ್ಲದಂತೆ ತಿಂದುಹಾಕುವ ರಂಜಕವನ್ನು ಉಪಯೋಗಿಸುತ್ತೀರಿ. (ಫ್ರ್ಯಾಗಮೆಂಟೇಶನ್) ನೆಲಕ್ಕಪ್ಪಳಿಸಿದೊಡನೆ ಛಿದ್ರಮಾಡುವ ಬಾಂಬುಗಳನ್ನು ಉಪಯೋಗಿಸುತ್ತಿದ್ದೀರಿ. ಅಲ್ಲದೆ ಲೆಜಿಡಾಗಗಳನ್ನು ಉಪಯೋಗಿಸಿ ಸಣ್ಣಮಕ್ಕಳನ್ನು ಹೆಣ್ಣುಮಕ್ಕಳನ್ನು ನಿರ್ದಾಕ್ಷಿಣ್ಯವಾಗಿ ಕೊಲ್ಲುತ್ತಿದ್ದೀರಿ].

ಶ್ರೀ. ಬರ್ಟರೆಂಟ ರಸೆಲ್ಲರವರು ಅಮೇರಿಕೆಯ ಯುದ್ಧತಂತ್ರವನ್ನು ಖಂಡಿಸಿದ್ದಾರೆ. ಎರಡನೆಯ ಮಹಾ ಯುದ್ಧದಲ್ಲಿ ಹಿಟ್ಲರನು ಉಪಯೋಗಿಸಿದ ಯುದ್ಧತಂತ್ರಗಳಿಗಿಂತ ಭಯಾನಕ, ಅಮಾನುಷಕಾರಕವಾದ ಆಯುಧಗಳನ್ನು, ಗುಂಡುಮದ್ದುಗಳನ್ನು ವಿಯೆತನಾಮಿನ ಪ್ರಜೆಗಳ ಮೇಲೆ ಉಪಯೋಗಿಸಿದುದಕ್ಕೆ ಅಮೇರಿಕೆಯ ನಾಯಕರನ್ನು ಅಂತಾರಾಷ್ಟ್ರೀಯ ನ್ಯಾಯಾಲಯದಲ್ಲಿ ವಿಚಾರಣೆಗೆ ಗುರಿಪಡಿಸಿ ಶಿಕ್ಷಿಸಬೇಕೆಂದು ನುಡಿದಿದ್ದಾರೆ...ಜಗತ್ತಿನ ಇತರ ರಾಷ್ಟ್ರಗಳ ನೈಸರ್ಗಿಕ ಸಂಪತ್ತನ್ನು ಉಪಯೋಗಿಸಿಕೊಂಡು ಸಾಹುಕಾರರಾಗು

ತ್ತಿರುವ ಕೆಲ ಅಮೇರಿಕೆಯ ಉದ್ದಿಮೆದಾರರ ರಕ್ಷಣೆಗಾಗಿ ನೀವು ಹೋರಾಡುತ್ತಿದ್ದೀರಿ" ಎಂದು ರಸೆಲ್ಲರು ಹೇಳಿದ್ದಾರೆ. ಶಾಂತಿಯ ಮುಖವಾಡ ಧರಿಸಿರುವ ಅಮೇರಿಕಾ ದಕ್ಷಿಣ ವಿಯೆತನಾಮಿಗೆ ಸೈನಿಕ ನೆರವು ನೀಡಿ ಸ್ವಾರ್ಥಹಿತಕ್ಕಾಗಿ ಯುದ್ಧವನ್ನು ಮುಂದುವರಿಸುತ್ತಿದೆ. ಈ ಅರ್ಥಮರ್ಥ ಯುದ್ಧಕ್ಕೆ ದಿನದ ವೆಚ್ಚ ಎರಡು ದಶಲಕ್ಷ ಡಾಲರುಗಳು ಖರ್ಚಾಗುತ್ತವೆಯೆಂದರೆ ಆಶ್ಚರ್ಯವಾದೀತು. ದಕ್ಷಿಣ ವಿಯೆತನಾಮಿನಲ್ಲಿ ಎರಡು ಲಕ್ಷಕ್ಕೂ ಮಿಕ್ಕ ಅಮೇರಿಕೆಯ ಸೈನಿಕರಿದ್ದಾರೆ.

### ದಕ್ಷಿಣ ವಿಯೆಟನಾಮು ಅಧ್ಯಕ್ಷ ಡಾ॥ ಹೊಚಿಮಿನ್ ಅವರ ನಿಲುವು

ಕಳೆದ ೩೬ ವರ್ಷಗಳಿಂದಲೂ ವಿಯೆತನಾಮು ಜನತೆಯ ಸ್ವಾತಂತ್ರ್ಯ ಹೋರಾಟದಲ್ಲಿ ಮುಂದಾಳುತ್ವವನ್ನು ವಹಿಸಿರುವ ೭೬ ವರ್ಷ ವಯಸ್ಸಿನ ಹೋಚಿಮಿನ್ ಅವರ ಸಾಹಸ ಅಸಾಮಾನ್ಯವೆಂದು ಹೇಳಲೇಬೇಕು. ಇಷ್ಟು ಸಣ್ಣ ರಾಷ್ಟ್ರವಾದ ಉತ್ತರ ವಿಯೆತನಾಮು ವಿಪುಲ ಅಮೇರಿಕೆಯ ಅತ್ಯಾಧುನಿಕ ಶಸ್ತ್ರಸಜ್ಜಿತ ಸೇನೆಯೊಂದಿಗೆ ಧೃತಿಗೆಡದೇ ಹೋರಾಡುತ್ತಿದೆ ಎಂದರೆ ಅಲ್ಲಿಯ ಜನತೆಯ ಧೈರ್ಯ ಸಾಹಸಗಳು, ಅಚಲ ನಿರ್ಧಾರ ಹಾಗು ರಾಷ್ಟ್ರಾಭಿಮಾನವನ್ನು ಎತ್ತಿತೋರಿಸುತ್ತಿವೆಯೆಂದರೆ ಅತಿಶಯೋಕ್ತಿಯಾಗಲಾರದು. ಇದೆಲ್ಲಕ್ಕೂ ಅವರ ಬೆನ್ನೆಲುಬಾಗಿ ನಿಂತಿರುವ ದಿವ್ಯಮಾರ್ಗದರ್ಶಿ ಡಾ॥ ಹೋಚಿಮಿನ್ನರೇ ಕಾರಣ. ಇವರ ಮಾತಿನಲ್ಲಿ "ಈ ದುರಾಕ್ರಮಣಕ್ಕೆ ಸಾಮ್ರಾಜ್ಯಶಾಹಿ ಬಂಡವಾಳಶಾಹಿಗಳು ಕಾರಣರು. ಅಮೇರಿಕೆಯ ಪ್ರಜೆಗಳು ಒಳ್ಳೆಯವರು'' ಎನ್ನುತ್ತಾರೆ.

ಡಾ॥ ಹೋಚಿಮಿನ್ನರು ೧೯೬೬ ಜನವರಿ ೨೫ರಂದು ಒಂದು ಪ್ರಕಟನೆಯನ್ನು ಹೊರಡಿಸಿ ಅದರಲ್ಲಿ ನಾಲ್ಕು ಅಂಶವನ್ನು ಸೂಚಿಸಿದ್ದಾರೆ.

(೧) ಜಿನೇವಾ ಒಪ್ಪಂದದಲ್ಲಿ ಸೂಚಿತವಾಗಿದ್ದಂತೆ ಅಮೇರಿಕೆ ವಿಯೆಟನಾಮಿನಿಂದ ತನ್ನ ಸೇನೆಯನ್ನು ಹಿಂತೆಗೆದುಕೊಂಡು ಉತ್ತರ ವಿಯೆಟನಾಮು ಮೇಲೆ ತನ್ನ ಆಕ್ರಮಣವನ್ನು ನಿಲ್ಲಿಸುವದು.

(೨) ವಿಯೆಟನಾಮಿನ ಎರಡೂ ಭಾಗಗಳು ಮತ್ತೆ ಐಕ್ಯವಾಗುವ ವರೆಗೆ ಜಿನೇವಾ ಒಪ್ಪಂದದಲ್ಲಿ ಹೇಳಿರುವ ಪ್ರಕಾರ ಉತ್ತರ ಅಥವಾ ದಕ್ಷಿಣ ವಿಯೆಟನಾಮಿನೊಂದಿಗೆ ಪ್ರತ್ಯೇಕವಾದ ಯಾವ ಬಗೆಯ ಸೈನಿಕ ಒಪ್ಪಂದವಾಗಲೀ ಮಾಡಿಕೊಳ್ಳಬಾರದು.

(೩) ದ. ವಿಯೆಟನಾಮಿನ ಆಂತರಿಕ ವ್ಯವಹಾರಗಳನ್ನು ( National liberation front ) ರಾಷ್ಟ್ರೀಯ ವಿಮೋಚನಾ ರಂಗದ ಕಾರ್ಯಕ್ರಮದ ಅನುಗುಣವಾಗಿ ವಿಯೆಟನಾಮಿನ ಜನತೆ ತಾವೇ ರೂಪಿಸಿಕೊಳ್ಳುವರು.

(೪) ದಕ್ಷಿಣ ಅಥವಾ ಉತ್ತರ ವಿಯೆಟನಾಮಿನ ಐಕ್ಯತೆಯ ಭವಿತವ್ಯವನ್ನು ಆಯಾ ಪ್ರದೇಶದ ಜನತೆಗೆ ಬಿಡುವದು.

ಡಾ॥ ಹೋಚಿಮಿನ್‌ರ ಈ ನಾಲ್ಕು ಅಂಶಗಳು ಅಂಗೀಕೃತವಾಗಿ ಪಾಲಿಸಲ್ಪಟ್ಟರೆ, ಇಂದು ಅಂತರರಾಷ್ಟ್ರೀಯ ಸಮಸ್ಯೆಯಾಗಿರುವ ವಿಯೆಟನಾಮ ಸಮಸ್ಯೆ ಶಾಂತಿಯುತವಾಗಿ ಪರಿಹಾರ ಹೊಂದುವದು.

ಆದರೆ 'ವಿಭಜಿಸಿ ಆಳು' (Divide and rule) ತತ್ವವನ್ನು ರಕ್ತಗತವಾಗಿಸಿಕೊಂಡಿರುವ ಅಮೇರಿಕನ್ನರು ನ್ಯಾಯಸಮ್ಮತ ಪರಿಹಾರಕ್ಕೆ ಏಕೆ ಒಪ್ಪುತ್ತಾರೆ ? ಅಮೇರಿಕೆಯ ವಿಸ್ತರಣಾದಾಹ ಹಾಗು ಬಂಡವಾಳಶಾಹಿ ವಿಸ್ತಾರ ನೀತಿಗಳಿಗೆ ಜಗತ್ತಿನ ಎಲ್ಲ ರಾಷ್ಟ್ರಗಳ ಜನರೂ ಕೊಡಲಿ ಪೆಟ್ಟನ್ನು ಹಾಕದಿದ್ದರೆ ಅಮೇರಿಕೆಯ ಆರ್ಥಿಕ ಸಾಮ್ರಾಜ್ಯದ ದಾಹ ಈ ವಿಶ್ವವನ್ನೇ ನುಂಗೀತು. ಪ್ರಗತಿಪರ ಮನೋವೃತ್ತಿಯುಳ್ಳ, ಸ್ವತಂತ್ರ ಪ್ರೇಮ ತಾಳಿದ ಎಲ್ಲ ರಾಷ್ಟ್ರಗಳ ಜನತೆ ವಿಯೆಟನಾಮಿನ ಧರ್ಮಯುದ್ಧದಲ್ಲಿ ಸಹಾನುಭೂತಿ ತಾಳಿದವರಾಗಲಿ. ವಿಯೆಟನಾಮ ಶೀಘ್ರದಲ್ಲಿ ಏಕೀಕೃತ ರಾಷ್ಟ್ರವಾಗಲಿ. ಅವರಿಗೆ ಸ್ವಾತಂತ್ರ್ಯ ಪ್ರಾಪ್ತವಾಗಲಿ: ಜನತಾರಾಷ್ಟ್ರ ನಿರ್ಮಾಣವಾಗಲಿ. ವಿಯೆಟನಾಮಿನ ಶಾಂತಿ ಜಗತ್ತಿನ ಶಾಂತಿಗೆ ನಾಂದಿಯಾಗಲಿ.

*
* *

" ಇರೋದು ಜೀವನ;
ಮಾತಾಡೋದು ಸಾಹಿತ್ಯ;
ಭಾವನೆಯೇ ದೃಷ್ಟಿ;

ಜೀವನ, ಸಾಹಿತ್ಯ, ದೃಷ್ಟಿ ಇವುಗಳಲ್ಲಿ ಹೊಂದಿಕೆಯಾಗಿ ರಸಮಯವಾದಾಗ ಅದು ಅರಿವು ಆಗುತ್ತದೆ. ಈ ಅರಿವಿನ ರಸಾಸ್ವಾದನೆಯೇ ಪುರುಷನ ಕ್ರಮವಾಗಬೇಕು "

— ಡಾ॥ ದ. ರಾ. ಬೇಂದ್ರೆ





ಸಹಕಾರೀ ಶಿಲ್ಪಿ

# ಶ್ರೀ ವ್ಹಿ. ಎಸ್. ಬಸವನಾಳ

ಸಹಕಾರಕ್ಕೆ ಮತ್ತೊಂದು ಹೆಸರಾಗಿ ಕರ್ನಾಟಕದಲ್ಲಿ ಮೆರೆದ ಏಕೈಕ ವ್ಯಕ್ತಿ ಎಂದರೆ ಧಾರವಾಡದ ಶ್ರೀ ವಿರೂಪಾಕ್ಷಪ್ಪ ಶಿವಯೋಗಪ್ಪ ಬಸವನಾಳರು. ರಾಷ್ಟ್ರವು ಪ್ರಗತಿಪಥದಲ್ಲಿ ಸಾಗಬೇಕಾದರೆ ಸಹಕಾರದ ಶಕ್ತಿಯು ಕ್ರೋಢೀಕರಣವಾಗದೆ ಸಾಧ್ಯ ವಿಲ್ಲವೆಂದು ಮನಗಂಡು ೩೭ ವರ್ಷಗಳ ಹಿಂದೆಯೇ ಈ ಕ್ಷೇತ್ರವನ್ನು ಪ್ರವೇಶಿಸಿದ ಇವರು ತಮ್ಮ ಕೊನೆಯ ಉಸಿರಿನ ವರೆಗೆ ಸಹಕಾರದ ಸೇವೆಯಲ್ಲೇ ಜೀವನವನ್ನು ಸವೆಸಿದರು. ಕರ್ನಾಟಕದಲ್ಲಿ ಸಹಕಾರ ಚಳುವಳಿಯು ಭವ್ಯ ಆದರ್ಶದಿಂದ ತನ್ನ ಕಾರ್ಯವ್ಯಾಪ್ತಿಯನ್ನು ಹೊಂದಿದ್ದರೆ ಅದರಲ್ಲಿ ಶ್ರೀ ಬಸವನಾಳರ ಪಾತ್ರ ಹೆಮ್ಮೆಯದೆಂದು ಹೇಳಬಹುದು.

೧೯೦೩, ನವ್ಹಂಬರ ೧೭ ರಂದು ಶ್ರೀ ವಿರೂಪಾಕ್ಷಪ್ಪನವರು ಜನಿಸಿದರು. ಅಭಿಜಾತ ಬಸವನಾಳರ ಮನೆತನದಲ್ಲಿ ಜನ್ಮ ತಾಳಿದ ಇವರು ಪ್ರಾರಂಭದಲ್ಲಿಯೇ ತಮ್ಮ ಪ್ರತಿಭೆಯನ್ನು ವ್ಯಕ್ತಪಡಿಸಿದರು. ೧೯೨೫ ರಲ್ಲಿ ಬಿ. ಎ. ಪದವೀಧರರಾಗಿ, ಪುಣೆಗೆ ತೆರಳಿ ೧೯೨೮ರಲ್ಲಿ ಕಾಯದೆ ಪದವಿ ಪಡೆದರು. ಧಾರವಾಡದಲ್ಲಿ ವಕೀಲಿ ವೃತ್ತಿ ಪ್ರಾರಂಭಿಸಿ ತಮ್ಮ ಕಾಯ್ದೆ ಜ್ಞಾನ, ಕಾರ್ಯ ಪ್ರವೃತ್ತಿ, ಜಾಣ್ಮೆ, ಬುದ್ಧಿ-ಕುಶಲತೆಗಳ ಸಹಾಯದಿಂದ ಜನಪ್ರಿಯತೆ

## 'ಮಾಧವಿ'ಯ ಶ್ರದ್ಧಾಂಜಲಿ

ಪಡೆದರು. ಇವರ ಕಾರ್ಯ್ದಕುಶಲತೆಯನ್ನು ಗಮನಿಸಿದ ಅಂದಿನ ಸರಕಾರ ೧೯೩೯ ರಲ್ಲಿ ಇವರನ್ನು ಅಸಿಸ್ಟೆಂಟ್ ಪಬ್ಲಿಕ್ ಪ್ರಾಸಿಕ್ಯೂಟರ್ ಎಂದು ನೇಮಿಸಿಕೊಂಡಿತು.

## ಸಹಕಾರ ಕ್ಷೇತ್ರದ ಪ್ರವೇಶ

ಶ್ರೀ ವ್ಹಿ. ಎಸ್. ಬಸವನಾಳರು ೧೯೩೧ ರಲ್ಲಿ ಸಹಕಾರೀ ಕ್ಷೇತ್ರವನ್ನು ಪ್ರವೇಶಿಸಿದರು. ಧಾರವಾಡದ ಕೆ. ಸಿ. ಸಿ. ಬ್ಯಾಂಕ್‌ನಲ್ಲಿ ಓರ್ವ ಡೈರೆಕ್ಟರರಾಗಿ ಕಾರ್ಯ ಪ್ರಾರಂಭಿಸಿದ ಇವರು ೧೯೩೨ ರಲ್ಲಿಯೇ ಬ್ಯಾಂಕಿನ ಮ್ಯಾನೇಜಿಂಗ್ ಡೈರೆಕ್ಟರ್ ಹುದ್ದೆಗೇರಿದರು. ದೂರದೃಷ್ಟಿ, ಆಡಳಿತಾತ್ಮಕ ವಿಚಕ್ಷಣೆ, ಬುದ್ಧಿಕುಶಲತೆಗಳನ್ನು ಹೊಂದಿ ಸಹಕಾರದ ಸೇವೆಗೆ ದೀಕ್ಷೆ ತೊಟ್ಟ ಶ್ರೀ ಬಸವನಾಳರಿಗೆ ಕೆ.ಸಿ.ಸಿ. ಬ್ಯಾಂಕಿನ ಅಧ್ಯಕ್ಷಸ್ಥಾನ ೧೯೫೩ರಲ್ಲಿ ಲಭ್ಯವಾಯಿತು. ಇವರ ಯೋಗ್ಯ ಮಾರ್ಗದರ್ಶನದಲ್ಲಿ ಕೆ. ಸಿ. ಸಿ. ಬ್ಯಾಂಕ್ ರಾಷ್ಟ್ರದ ಪ್ರಥಮ ಐದು ಕೇಂದ್ರ ಸಹಕಾರಿ ಬ್ಯಾಂಕುಗಳಲ್ಲಿ ಒಂದಾಗುವ ಕೀರ್ತಿ ಪಡೆಯಿತು. ಇವರ ತ್ಯಾಗ–ಸೇವೆಗಳ ಫಲವಾಗಿ ಈ ಬ್ಯಾಂಕು ಭದ್ರತಳಹದಿಯ ಮೇಲೆ ನಿಂತು ೧೯೬೭ರಲ್ಲಿ ತನ್ನ ಸುವರ್ಣ ಮಹೋತ್ಸವ ಆಚರಿಸಿತು. ರೈತರ ಕಾಮಧೇನುವಾಗಿ ಸೇವೆ ಸಲ್ಲಿಸುತ್ತ, ರಾಷ್ಟ್ರ ಪ್ರಗತಿಗೆ ಈ ಬ್ಯಾಂಕು ನೆರವಾಗಿದೆ. ಉತ್ತರ ಕರ್ನಾಟಕದಲ್ಲಿಯ ಅನೇಕ ಸಹಕಾರಿ ಸಂಘಗಳು ಇವರ ಸೇವಾಲಾಭ ಪಡೆದಿವೆ. ಅನೇಕ ಸಂಘಗಳ ಜನಕರಾದ ಶ್ರೀ ಬಸವನಾಳರ ಆಶ್ರಯ ಲಾಭದಿಂದ ಬೆಳೆದ ಅನೇಕ ಸಹಕಾರೀ ಸಂಘಗಳು ಇಂದು ಸೇವಾ ಪಥದಲ್ಲಿ ಸಾಗಿವೆ. ಸಹಕಾರೀ ಕ್ಷೇತ್ರದಲ್ಲಿ ಅತಿ ಉಚ್ಚ ಸೇವಾ ಸ್ಥಾನವೆಂದು ಪರಿಗಣಿಸಲಾದ ಮೈಸೂರು ರಾಜ್ಯ ಅಪೆಕ್ಸ್ ಬ್ಯಾಂಕ್ ಅಧ್ಯಕ್ಷತೆ ೧೯೬೬ರ ನವ್ಹಂಬರದಲ್ಲಿ ಶ್ರೀ ಬಸವನಾಳರ ಪಾಲಿಗೆ ಬಂತು. "ನೀವು ಅಧ್ಯಕ್ಷರಾದರೆ ಒಮ್ಮತ ಸಾಧ್ಯ" ವೆಂದು ಎಲ್ಲ ನಿರ್ದೇಶಕರು ಶ್ರೀ ಬಸವನಾಳರಿಗೆ ಗಂಟುಬಿದ್ದಾಗ ಇವರು ಈ ಸ್ಥಾನವನ್ನು ಅಲಂಕರಿಸಿದರು. ಇವರ ಸೇವೆ ರಾಜ್ಯಮಟ್ಟದಲ್ಲಿ ಮನ್ನಣೆ ಪಡೆದಂತಾಯಿತು.

## ಸಾಹಿತ್ಯದಲ್ಲೂ ಮೇಲ್ಮೆ

ಸಾಹಿತ್ಯ ಕ್ಷೇತ್ರಕ್ಕೂ ಸಹಕಾರವನ್ನು ವಿಸ್ತರಿಸಿದಕೀರ್ತಿ ಶ್ರೀ ಬಸವನಾಳರಿಗೆ ಸಲ್ಲುತ್ತದೆ. ಕರ್ನಾಟಕ ಸಹಕಾರಿ ಸಾಹಿತ್ಯ ಸಂಘವನ್ನು ಸ್ಥಾಪಿಸಿ, ಈ ಸಂಘದಿಂದ ಉತ್ತಮ ಕೃತಿಗಳ ಪ್ರಕಟನೆಗೆ ನೆರವಾಗಿ, ಅವ್ಯಕ್ತ ಸಾಹಿತಿಗಳನ್ನು ವ್ಯಕ್ತಗೊಳಿಸುವುದು—ವ್ಯಕ್ತಸಾಹಿತಿಗಳನ್ನು ಅಭಿವ್ಯಕ್ತಗೊಳಿಸುವುದು ತನ್ನ ಗುರಿ ಎಂಬಂತೆ ದುಡಿದರು. ಇವರು ಸ್ವತಃ ಉತ್ತಮ ಸಾಹಿತಿಗಳು. ಇವರ "ದಂಡಯಾತ್ರೆ" ಕಾದಂಬರಿಗೆ ಕರ್ನಾಟಕ ವಿದ್ಯಾವರ್ಧಕ ಸಂಘದ ಬಹುಮಾನ ದೊರೆತಿದೆ. "ಜಯಕರ್ನಾಟಕ" ಪತ್ರಿಕೆಯ ಪ್ರಧಾನ ಸಂಪಾದಕರಾಗಿ ಪತ್ರಿಕೋದ್ಯಮದಲ್ಲೂ ತಮ್ಮ ಕಾರ್ಯ ಮಾಡಿದ್ದಾರೆ.

**ಷಷ್ಠ್ಯಬ್ದಿ ಸಮಾರಂಭ**

ನವ್ಹಂಬರ ೧೭, ೧೯೬೩ ರಂದು ಶ್ರೀ ವಿರೂಪಾಕ್ಷಪ್ಪನವರು ಅರವತ್ತರ ಹೊಸಲು ದಾಟಿದರು. ಇವರ ಸಾರ್ಥಕ ಜೀವನದ ಗೌರವಾರ್ಥ ಅನೇಕ ಸಂಘ ಸಂಸ್ಥೆಗಳು ಈ ಸಂದರ್ಭದಲ್ಲಿ ಇವರನ್ನು ಗೌರವಿಸಿದವು. ಇವರ ಷಷ್ಠ್ಯಬ್ದಿಯಂದು ಶ್ರೀ ಮ. ನಿ. ಪ್ರ. ಬಸವಲಿಂಗ ಮಹಾ ಸ್ವಾಮಿಗಳು ಇವರಿಗೆ "ಪರೋಪಕಾರ ನಿರತ" ಎಂಬ ಪ್ರಶಸ್ತಿಯನ್ನು ದಯ ಪಾಲಿಸಿದರು.

**ಸಾರ್ಥಕ ಜೀವಿಯ ಕಣ್ಮರೆ**

ದಿ. ೬-೭-೧೯೬೭ ಸಹಕಾರೀ ಕ್ಷೇತ್ರಕ್ಕೆ ಒಂದು ದುಃಖ ದಿನ. "ಸಹಕಾರೀ ಶಿಲ್ಪಿ" ಎಂಬ ಸಾರ್ಥಕ ನಾಮ ಪಡೆದ ಶ್ರೀ ವಿರೂಪಾಕ್ಷಪ್ಪ ಬಸವನಾಳರು ಅಂದು ಲಿಂಗೈಕ್ಯರಾದರು. ಕರ್ನಾಟಕವು ತನ್ನ ಓರ್ವ ಸುಪುತ್ರನನ್ನು ಕಳೆದುಕೊಂಡಿತು. ಅಂದು ಕರ್ನಾಟಕದ ಓರ್ವ ಮುತ್ಸದ್ದಿಯ ಕಣ್ಮರೆಯಾಯಿತು. ಬಹುಮುಖ ವ್ಯಕ್ತಿತ್ವದ ಶ್ರೀ ವ್ಹಿ. ಎಸ್. ಬಸವನಾಳರು ತಮ್ಮ ತ್ಯಾಗ-ಸೇವಾ ಕುಸುಮದಿಂದ ಅಮರ ಪರಿಮಳವನ್ನು ರಾಜ್ಯದಲ್ಲಿ ತುಂಬಿ ಇನ್ನಿಲ್ಲವಾಗಿದ್ದಾರೆ. ಅವರ ಆತ್ಮಕ್ಕೆ ಶಾಂತಿ ದೊರೆಯಲಿ.

●●●

"ಎಂತಹ ದೊಡ್ಡ ಬೆಟ್ಟವೂ ಪುಡಿಯಾಗಬೇಕು; ಎಷ್ಟು ತೂಕವಾದ ತೊಲೆಯೂ ಒಂದಲ್ಲೊಂದು ದಿನ ಮುರಿದು ಬೀಳುತ್ತದೆ. ಎಂತಹ ಜ್ಞಾನಿಯೂ ಗಿಡ ಬಳ್ಳಿಗಳಂತೆ, ಒಮ್ಮೆ ಬಾಡಿಹೋಗುತ್ತಾನೆ"

—ಕಿನ್‌ಫ್ಯೂಷಿಯಸ್



# ವಿದ್ಯಾರ್ಥಿ ಗಲಭೆ

[ ಕಳೆದ ಕೆಲ ವರ್ಷಗಳಿಂದ ರಾಷ್ಟ್ರವನ್ನು ಆವರಿಸಿರುವ ಅನೇಕ ಬೃಹತ್ ಸಮಸ್ಯೆಗಳಲ್ಲಿ 'ವಿದ್ಯಾರ್ಥಿ ಗಲಭೆ' ಒಂದಾಗಿದೆ. 'ಇಂದಿನ ವಿದ್ಯಾರ್ಥಿಗಳೇ ನಾಳಿನ ನಾಡಿನ ಮುಂದಾಳುಗಳು — ನಾಯಕರು' ಎಂಬ ದೃಷ್ಟಿಯಿಂದ ಈ ಸಮಸ್ಯೆಯನ್ನು ವೀಕ್ಷಿಸಿದಾಗ ಇವರ ಗಂಭೀರತೆಯು ಅರಿವಾಗುತ್ತದೆ. ಈ ಗಂಭೀರ ಸಮಸ್ಯೆಯನ್ನು ಈ ಮಾಲಿಕೆಯಲ್ಲಿ ತಜ್ಞರ ದೃಷ್ಟಿಯಿಂದ ವಿವೇಚಿಸಬೇಕೆಂಬ ಗುರಿಯಿದೆ. ಇಲ್ಲಿ ರಾಜಕೀಯ ಶಾಸ್ತ್ರಜ್ಞರಾದ ಪ್ರೊ॥ ಕೆ. ರಾಘವೇಂದ್ರರಾಯರ ಹಾಗೂ ಮನಶ್ಶಾಸ್ತ್ರಜ್ಞರಾದ ಡಾ॥ ಎರಾನ್‌ರವರ ವಿಶ್ಲೇಷಣೆಯನ್ನು ಒದಗಿಸಲಾಗಿದೆ. –ಸಂ.]

●●●

## ೧. ರಾಜಕೀಯ ಶಾಸ್ತ್ರಜ್ಞನ ದೃಷ್ಟಿ

ಪ್ರೊ॥ ಕೆ. ರಾಘವೇಂದ್ರರಾವ್



ರಾಷ್ಟ್ರದ ಕಲ್ಯಾಣ ಹಾಗೂ ಪ್ರಗತಿಗಳಲ್ಲಿ ಶ್ರದ್ಧೆಯುಳ್ಳ ಪ್ರತಿಯೊಬ್ಬನನ್ನೂ ಚಿಂತೆಗೀಡುಮಾಡುವಂತಹ ಸಮಸ್ಯೆಗಳಲ್ಲಿ 'ವಿದ್ಯಾರ್ಥಿ ಗಲಭೆ' ಒಂದು. ಅನೇಕ ಸಾಮಾಜಿಕ ಸಮಸ್ಯೆಗಳಂತೆ ವಿದ್ಯಾರ್ಥಿ ಗಲಭೆಗೆ ಒಂದೇ ಕಾರಣವೆಂದು ಹೇಳಲಾಗುವುದಿಲ್ಲ. ಇದರ ಸಂಪೂರ್ಣ ವಿಶ್ಲೇಷಣೆ ಮಾಡಿದರೆ ಬಹುಮುಖ–ಕಾರಣಗಳು ವ್ಯಕ್ತವಾಗುತ್ತವೆ. 'ವಿದ್ಯಾರ್ಥಿ ಗಲಭೆ'ಯನ್ನು ಅನೇಕರ ದೃಷ್ಟಿಕೋನಗಳಿಂದ ವಿವೇಚಿಸಬಹುದು— ಸಮಾಜ ಶಾಸ್ತ್ರಜ್ಞ, ನ್ಯಾಯಮೂರ್ತಿ, ಪೋಲೀಸಿನವ, ಶಿಕ್ಷಣ-ತಜ್ಞ, ಮುಂತಾಗಿ. ಆದರೆ ನಾನು ಈ ಸಮಸ್ಯೆಯನ್ನು ರಾಜಕೀಯ ಶಾಸ್ತ್ರಜ್ಞನ ದೃಷ್ಟಿಯಿಂದ ಪರಿಶೀಲಿಸಬಯಸುತ್ತೇನೆ. ಆದರೆ ಈ ಪರಿಶೀಲನೆಯಲ್ಲಿ ತೊಡಗುವ

ಪೂರ್ವದಲ್ಲಿ ಈ ಸಮಸ್ಯೆಯ ಗಂಭೀರತೆಯ ಬಗ್ಗೆ ಚಿಂತಿಸುವವರಿಗೆ ಎರಡು ಮುಖ್ಯ ಅಂಶಗಳನ್ನು ಗಮನಿಸಲು ಸೂಚಿಸುತ್ತೇನೆ.

ಮೊದಲನೆಯದಾಗಿ, 'ವಿದ್ಯಾರ್ಥಿಗಲಭೆ' ಎಂದಾಗ ಕೇವಲ ವಿದ್ಯಾರ್ಥಿಗಳಿಂದಲೇ ಸಂಭವಿಸುವ ಗಲಭೆಗೂ, ಸಮಾಜದ ಇತರ ಪುಂಡರಿಂದ ಸಂಭವಿಸುವ ಗಲಭೆಗೂ ಇರುವ ಅಂತರವನ್ನು ಅರಿಯಬೇಕು. ಗಲಭೆಯಾದಾಗ ಅದು ವಿದ್ಯಾರ್ಥಿಗಳಿಂದಲೇ ಪ್ರಾರಂಭವಾಯಿತೋ ಹೇಗೆ ಎಂದು ಅರಿಯುವುದೂ ಅವಶ್ಯಕವೇ. ಇದನ್ನು ಪರಿಶೀಲಿಸಿದರೆ ವಿದ್ಯಾರ್ಥಿಗಳಿಂದ ಸಂಭವಿಸಿದೆ ಎಂದು ಹೇಳಲಾಗುವ ಅನೇಕ ಹಿಂಸಾಕೃತಿಗಳ ಪ್ರಮಾಣವು ಸ್ವಾಭಾವಿಕವಾಗಿಯೇ ಕಡಿಮೆಯದೆನಿಸಿ ಗಂಭೀರ ಪರಿಸ್ಥಿತಿ ಎಂದು ಹೇಳಲ್ಪಡುವ 'ವಿದ್ಯಾರ್ಥಿಗಲಭೆ' ಕೇವಲ ಗಮನಾರ್ಹವಾದುದು ಎಂಬ ಪ್ರಮಾಣಕ್ಕೆ ಇಳಿಯುತ್ತದೆ.

ಎರಡನೆಯದಾಗಿ ಪತ್ರಿಕೆಗಳಲ್ಲಿ ಪ್ರಚಾರ. ಪತ್ರಿಕೆಗಳು ಗಂಭೀರವಾದ ಹಾಗೂ ಪ್ರಚಲಿತವಾದ ಸಮಸ್ಯೆಗಳಿಗೆ ಹಾಗೂ ಘಟನೆಗಳಿಗೆ ಹೆಚ್ಚು ಪ್ರಾಮುಖ್ಯತೆ ಕೊಡುವುದು ಯೋಗ್ಯವಾದರೂ ಅನೇಕಸಲ ಈ ಗಂಭೀರ ಘಟನೆಗಳ ಪ್ರಚಾರ ವಿಪರೀತ ಪ್ರಮಾಣವನ್ನು ಮುಟ್ಟುತ್ತವೆ. 'ವಿದ್ಯಾರ್ಥಿಗಲಭೆ'ಯ ವಿವೇಚನೆಯಲ್ಲಿ ಈ ಅಂಶಗಳಿಗೆ ಗಮನ ಕೊಟ್ಟು ಅಂಶತಃ ಈ ಸಮಸ್ಯೆ ಎಷ್ಟರಮಟ್ಟಿಗೆ ಗಂಭೀರವಾದುದೆಂದು ವಾಸ್ತವಿಕ ದೃಷ್ಟಿಯಿಂದ ವಿಚಾರಿಸಬೇಕು.

ರಾಜಕೀಯ ಶಾಸ್ತ್ರಜ್ಞನಾಗಿ ಇಂಥಹ ಸಮಸ್ಯೆಗಳಿಗೆ ಎರಡು ವಿಧವಾದ ರಾಜಕೀಯ-ಸಾಮಾಜಿಕ ಕಾರಣಗಳನ್ನು ಸೂಚಿಸಬಲ್ಲೆ. ಅದರಲ್ಲಿ ಒಂದು ದೀರ್ಘಾವಧಿಯವು; ಇನ್ನೊಂದು ಕ್ಷಿಪ್ರ ಅವಧಿಯವು. ಮೊದಲನೆಯ ವಿಧದ ಕಾರಣಗಳಲ್ಲಿ—(೧) ಸ್ವಾತಂತ್ರ್ಯ ಹೋರಾಟದ ಕಾಲದಿಂದ ಪರಂಪರಾನುಗತ ವರ್ತನೆಯಾಗಿ ಪಡೆದಿರುವ ಕಾಯ್ದೆಯನ್ನು ಉಲ್ಲಂಘಿಸುವ ಸಾಮೂಹಿಕ ಪ್ರೇರಣೆ. (೨) ನವೀನಕರಣದಿಂದ ಉಂಟಾಗಿರುವ ವಿಷಮಸ್ಥಿತಿ. ಮೊದಲನೆಯ ಕಾರಣಕ್ಕೆ ಕ್ಷಿಪ್ರ ಪರಿಹಾರ ಸಾಧ್ಯವಿಲ್ಲ. ನಮ್ಮ ಸ್ವಾತಂತ್ರ್ಯ ಹೋರಾಟದ ಬಗ್ಗೆ ರಚನಾತ್ಮಕ ಉಲ್ಲೇಖಗಳನ್ನು ಪ್ರಚಾರ ಮಾಡಿ ಹೋರಾಟದಲ್ಲಿ ಸಾಮೂಹಿಕ ಕ್ರಮದ ಪಾತ್ರದ ಮಿತಿಯನ್ನು ತಿಳಿಸಿ, ತಾತ್ವಿಕ ಪ್ರಧಾನ ದೃಷ್ಟಿಯನ್ನು ಬೆಳೆಸುವುದರಿಂದ ಸ್ವಲ್ಪ ಪರಿಹಾರ ಸಾಧ್ಯ. ಎರಡನೆಯ ಕಾರಣವು ಮತ್ತಷ್ಟು ಸಂಕೀರ್ಣವಾದುದು. ಇದರಿಂದ ಭಾರತೀಯ ಸಮಾಜದಲ್ಲಿ ಸಮಾಜಕ್ಕೂ ರಾಜಕೀಯ ಸಂಸ್ಥೆಗಳಿಗೂ ಅಂತರ ಉಂಟಾಗಿದೆ ನಮ್ಮ ಸಾಮಾಜಿಕ ರೂಢಿಗಳು ಹಾಗೂ ಸಂಸ್ಥೆಗಳು ಪರಂಪರಾನುಗತವಾದರೆ ರಾಜಕೀಯ ಕ್ರಮವು ನವ್ಯವಾದುದು. ಈ ಅಂತರವು ಮೌಲ್ಯಗಳ ಪತನಕ್ಕೆ ಎಡೆಗೊಡುತ್ತದೆ; ಇದಲ್ಲದೆ ನೀತಿಯುಕ್ತ ವಾತಾವರಣವು ಕ್ಷೀಣಗೊಂಡು ಗೊಂದಲಕ್ಕೆ ಕಾರಣವಾಗುತ್ತದೆ.

ಎರಡನೆಯ ವಿಧದಲ್ಲಿ ಕಾರಣಗಳು ಇಂತಿವೆ :

೧) ಎಲ್ಲ ರಂಗಗಳಲ್ಲಿಯ ನಮ್ಮ ಎಲ್ಲ ನಾಯಕರಲ್ಲಿ ಆವರಿಸಿರುವ ನೀತಿಯುಕ್ತ ಅಧಿಕಾರದ ಪತನ ಮತ್ತು

೨) ನಿರಾಶೆಗೊಂಡಿರುವ ರಾಜಕೀಯ ಪಕ್ಷಗಳು ಚುನಾವಣಾ ಕ್ರಮದಿಂದ ತಾವು ಸಾಧಿಸಲಾಗದ ರಾಜಕೀಯ ಮೇಲ್ಮೆಯನ್ನು ದೇಶದಲ್ಲಿ ಆಗಾಗ ಸಂಭವಿಸುವ ಘಟನೆಗಳ ಹಾಗೂ ಆ ಘಟನೆಗಳ ಹಿನ್ನೆಲೆಯಲ್ಲಿರುವ ಶಕ್ತಿಗಳ ಉಪಯೋಗದಿಂದ ಸಾಧಿಸಬೇಕೆಂಬ ಬಯಕೆ. ಮೊದಲನೆಯ ಕಾರಣವನ್ನು ವಿವೇಚಿಸಿದಾಗ, ನಮ್ಮ ರಾಜಕೀಯ ನಾಯಕರು ಒಂದು ಬಗೆಯ ಮೌಲ್ಯಗಳನ್ನು ಪ್ರಚಾರ ಮಾಡುತ್ತಾ ಅದಕ್ಕೆ ತದ್ವಿರುದ್ಧವಾದ ಹಾದಿಯಲ್ಲಿ ಅವರೇ ಸಾಗುತ್ತಿರುವಾಗ ವಿದ್ಯಾರ್ಥಿಗಳೂ ಅವರನ್ನು ಅನುಕರಿಸುವ ಪ್ರಯತ್ನಮಾಡಿದರೆ ಅದು ಸ್ವಾಭಾವಿಕವೇ ಎನ್ನಬೇಕು. ಎರಡನೆಯ ಕಾರಣವನ್ನು ಪರಿಶೀಲಿಸಿದರೆ ವಿರೋಧಿ ಪಕ್ಷಗಳು ಕಾಂಗ್ರೆಸ್ ಪಕ್ಷದಿಂದ ರಾಜಕೀಯ ಸೂತ್ರಗಳನ್ನು ಪೂರ್ತಿಯಾಗಿ ಕಸಿದುಕೊಳ್ಳಬೇಕೆಂಬ ಪ್ರಯತ್ನ ಇನ್ನೂ ಫಲಿಸಿಲ್ಲ. ಇದರಿಂದ ಕಳವಳಗೊಂಡ ವಿರೋಧೀ ಪಕ್ಷಗಳು ಕಾಂಗ್ರೆಸ್ ವಿರುದ್ಧ ಯಾವ ಚಳುವಳಿಯನ್ನಾದರೂ ಉಪಯೋಗಿಸಿ ಪರಿಹಾರ ಪಡೆಯಲು ಹಿಂಜರಿಯುವುದಿಲ್ಲ. ಕಾಂಗ್ರೆಸ್ ಪಕ್ಷವೂ ಕೂಡ ವಿದ್ಯಾರ್ಥಿಗಳನ್ನು ರಾಜಕೀಯ ಉದ್ದೇಶಕ್ಕೆ (ಈಗ ವಿದ್ಯಾರ್ಥಿಗಳನ್ನು ಉಪಯೋಗಿಸಿದಷ್ಟು ಪ್ರಮಾಣದಲ್ಲಿ ಅಲ್ಲ-ದಿದ್ದರೂ) ಉಪಯೋಗಿಸಿಕೊಂಡಿದ್ದರೆಂದು ಇಲ್ಲಿ ಗಮನಿಸಬೇಕಾಗಿದೆ. ನಮ್ಮ ರಾಜಕೀಯ ನಾಯಕರು ಉತ್ತಮ ವರ್ತನೆಯ ಆದರ್ಶವನ್ನು ರೂಪಿಸುವತನಕ ವಿದ್ಯಾರ್ಥಿಗಳೂ ಅಂತೆಯೇ ವರ್ತಿಸುವುದರಲ್ಲಿ ಸಂದೇಹವಿಲ್ಲ. ನಮ್ಮ ರಾಜಕೀಯ ಪಕ್ಷಗಳು ವಿದ್ಯಾರ್ಥಿಗಳನ್ನು ರಾಜಕೀಯಕ್ಕೆ ಉಪಯೋಗಿಸಿಕೊಳ್ಳುವುದರ ಬಗ್ಗೆ ಒಂದು ಗೌರವಯುತ ಒಪ್ಪಂದಕ್ಕೆ ಬರುವುದು ಅವಶ್ಯಕವಾಗಿದೆ. ಒಂದು ಪರಿಹಾರಮಾರ್ಗವೆಂದರೆ, ಪಕ್ಷಾತೀತ ಸರಕಾರದರಚನೆ.

ಕೊನೆಯದಾಗಿ ನಾನು ಒಂದು ಮಾತು ಹೇಳಬಯಸುತ್ತೇನೆ— ಈ ನನ್ನ ವಿಶ್ಲೇಷಣೆಯು ಈ ಸಮಸ್ಯೆಯ ಒಂದು ಅಂಶವನ್ನಷ್ಟೇ ವಿವೇಚಿಸಿದೆ; ಆದರೆ ಈ ಸಮಸ್ಯೆಯ ಇತರ ಅಂಶಗಳನ್ನು ಇತರ ಕ್ಷೇತ್ರಗಳಲ್ಲಿಯ ತಜ್ಞರು ಪರಿಶೀಲಿಸಿ, ಬೆಳಕನ್ನು ಬೀರುವ ಅವಶ್ಯಕತೆ ಮಾತ್ರ ಇದೆ. ಹಾಗಾದಲ್ಲಿ ಈ ಸಮಸ್ಯೆಯ ವಿಶ್ಲೇಷಣೆ ಸಂಪೂರ್ಣವಾಗುತ್ತದೆ.



## ೨. ಮನಶ್ಶಾಸ್ತ್ರಜ್ಞನ ದೃಷ್ಟಿ

### ಡಾ|| ಪಿ. ಜಿ. ಎರಾನ್

"ಸಮಾಜದ ವೈಜ್ಞಾನಿಕ ಅಭ್ಯಾಸ ಇತ್ತೀಚೆಗೆ ಪ್ರಾರಂಭವಾಗಿದೆ. ಇದು ನಮಗೆ ಸಂತೋಷವನ್ನಾದರು ಉಂಟು ಮಾಡಬಹುದು, ದುಃಖವನ್ನಾದರೂ ಉಂಟು ಮಾಡಬಹುದು. ಸಾಮಾಜಿಕ ಸಮಸ್ಯೆಗಳಿಗೆ ವೈಜ್ಞಾನಿಕ ಪದ್ಧತಿಯ ಅಭ್ಯಾಸ ಇತ್ತೀಚಿನದು. ಭೌತ ವಿಜ್ಞಾನ ದಲ್ಲಿ ವೈಜ್ಞಾನಿಕ ಪದ್ಧತಿ ಉಂಟು ಮಾಡಿದಷ್ಟು ಒಳ್ಳೆ ಫಲಿತಾಂಶ ಈ ಕ್ಷೇತ್ರದಲ್ಲಿ ಲಭ್ಯವಾಗಿರಲಿಕ್ಕಿಲ್ಲವಾದರೂ ಈ ಪ್ರಯೋಗ ನಿರಾಶಾದಾಯಕವಾಗೇನೂ ಇಲ್ಲ" ಎಂದು ಸುಪ್ರಸಿದ್ಧ ಸಮಾಜ ವಿಜ್ಞಾನಿ ಕಾಸ್ಪರ್ ನೇಗಲ್‌ರವರು ಹೇಳಿದ್ದಾರೆ.

"ವಿದ್ಯಾರ್ಥಿ ಗಲಭೆ" ಅಂಥದೇ ಒಂದು ಸಾಮಾಜಿಕ ಸಮಸ್ಯೆ. ಈ ಗಲಭೆಗಳ ವರ್ತನೆ ಅತಿರೇಕವೆಂದು ಭಾವಿಸಬೇಕಾಗಿಲ್ಲ. ಏಕೆಂದರೆ ಅನೇಕ ಶತಮಾನಗಳಿಂದಲೂ ವಿದ್ಯಾರ್ಥಿಗಳು ಅಧಿಕಾರಿಗಳ ವಿರುದ್ಧ ಆಂದೋಲನೆ ನಡೆಸುತ್ತ ಬಂದಿದ್ದಾರೆ. ಅದೂ ಅಲ್ಲದೆ ಈ ವರ್ತನೆಗೆ ರಾಷ್ಟ್ರೀಯ ಗಡಿಗಳ ನಿರ್ಬಂಧವೇನೂ ಇಲ್ಲ; ಕೆಲವು ಪೂರ್ವ ಏಶಿಯಾ ಹಾಗೂ ಲಾಟಿನ್ ಅಮೇರಿಕಾ ದೇಶಗಳಲ್ಲಂತೂ ಇದು ಸಾಂಕ್ರಾಮಿಕ ರೋಗವೇ ಆಗಿದೆ. ಈ ರೋಗದಿಂದ ಬಾಹಿರವಿದೆ ಎಂದು ತಿಳಿಯಲಾಗಿದ್ದ ಅಮೇರಿಕಾದಲ್ಲೂ 'ಬರ್ಕ್‌ಲೇ ಪ್ರಕರಣ'ದ ರೂಪದಲ್ಲಿ ಇದು ಪ್ರಕಟವಾಯಿತು. ಇಂತಹ ವರ್ತನೆಯು ಸುದೀರ್ಘ ಕಾಲ ನಡೆದರೆ, ಅಥವಾ ಆಗಾಗ ಈ ಗಲಭೆ ತಲೆದೋರಿದರೆ ಸಮಾಜದ ತಳಪಾಯವೇ ದುರ್ಬಲಗೊಂಡು ಸಮಾಜದ ಛಿದ್ರೀಕರಣ ತಲೆದೋರೀತು. ಇಂಥಹ ವರ್ತನೆಯ ನಿರ್ಮೂಲನೆಯನ್ನು ಮಾಡಬೇಕಾದಾಗಲಿ, ಇದನ್ನು ಹತ್ತಿಕ್ಕುವುದಕ್ಕಾಗಲಿ ಪ್ರಯತ್ನ ಮಾಡಬೇಕಾದರೆ ಇದರ ಮೂಲ ಹಾಗೂ ಇದಕ್ಕೆ ಕಾರಣಗಳ ಬಗ್ಗೆ ಆಳವಾಗಿ ಅಭ್ಯಾಸ ಮಾಡಬೇಕಾಗುತ್ತದೆ. ಕೇವಲ ತಾತ್ಪೂರ್ತಿಕ ಕ್ರಮಗಳನ್ನು ಕೈಕೊಂಡರೆ ತಾತ್ಪೂರ್ತಿಕ ಪರಿಹಾರ ದೊರೆತೀತೇ ಹೊರತು ಸಮಾಜವನ್ನು ಇಂಥಹ ಸಾಂಕ್ರಾಮಿಕದಿಂದ ಮುಕ್ತಮಾಡಲು ಸಹಕಾರಿಯಾಗುವುದಿಲ್ಲ.

ಈಗಿನ ಕಾಲೇಜ್ ವಿದ್ಯಾರ್ಥಿಗಳಲ್ಲಿ ಅನೇಕರು ೧೯೪೭ ಅಂದರೆ ಸ್ವಾತಂತ್ರ್ಯ ವರ್ಷದ ಕಾಲದಲ್ಲಿ ಜನಿಸಿದವರಿದ್ದಾರೆಂಬ ಮಾತು ಮಹತ್ವಪೂರ್ಣವಾಗಿ ಗಮನಿಸ ತಕ್ಕದ್ದಾಗಿದೆ. ಅಮೇರಿಕೆಯ 'ಯುದ್ಧ ಶಿಶುಗಳು' ಇದ್ದಂತೆ ಇವರು ನಮ್ಮ ದೇಶದ 'ಸ್ವಾತಂತ್ರ್ಯಶಿಶುಗಳು'. ಹೀಗಾಗಿ 'ಯುದ್ಧ ಶಿಶು'ಗಳಂತೆ ಇವರಲ್ಲೂ ಒಂದು ವಿಧದ ಪ್ರತ್ಯೇಕ ವರ್ತನಾ ರೀತಿ ಇರುತ್ತದೆ. ಈ ಸ್ವಾತಂತ್ರ್ಯ ಶಿಶುಗಳ ಪೀಳಿಗೆಗೆ ವಿದೇಶೀ ಆಡಳಿತ–ಅಧಿಕಾರಗಳಿಗೆ ತುತ್ತಾದ ಅನು-

ಭವ ಇಲ್ಲ. ಇವರಿಗೆ ಅಸಹಕಾರ ಚಳುವಳಿಯ ವರ್ತನೆಯ ಬಗ್ಗೆ ಅರಿವಿದ್ದರೂ ಇವರು ಮಾತ್ರ ಪ್ರಜಾಸತ್ತಾತ್ಮಕ ತತ್ವಗಳ ಪರಿಪಾಲನೆಯಿಂದ ಕೂಡಿದ ಸ್ವತಂತ್ರ ವಾತಾವರಣದಲ್ಲಿ ಬೆಳೆದವರು. ಈ ಕಾಲೇಜ್ ವಿದ್ಯಾರ್ಥಿಗಳು ಅಸಹನೀಯ ರೀತಿಯಲ್ಲಿ ವರ್ತಿಸಿದಾಗ ಅವರು ತಮ್ಮ ಹಿರಿಯರನ್ನು, ತಂದೆ–ತಾಯಿಗಳನ್ನು ಅನುಕರಿಸುತ್ತಿದ್ದಾರೆಂದು ಹೇಳಬೇಕು. ಇದೇ ವರ್ತನೆಯಲ್ಲಿ ಇಂದಿನ ವಿದ್ಯಾರ್ಥಿಗಳ ತಂದೆ ತಾಯಿಗಳು ತೊಡಗಿದಾಗ ಅದು ರಾಷ್ಟ್ರೀಯ ಹಿತಾಸಕ್ತಿಯ ಸ್ವಾತಂತ್ರ್ಯ ಚಳುವಳಿಯೆಂದು ಪರಿಗಣಿಸಲ್ಪಟ್ಟಿತು. ಆದರೆ ಅದೇ ವರ್ತನೆಯನ್ನು ಈಗ ಸಮಾಜಘಾತಕವೆಂದು ಕರೆಯಲಾಗುತ್ತಿದೆ; ಏಕೆಂದರೆ ಇದು ಈಗ ತನ್ನ ಸ್ಥಾನವನ್ನು ಕಳೆದುಕೊಂಡಿದೆ ಹಾಗೂ ಈಗಿನ ವಾತಾವರಣಕ್ಕೆ ಹೊಂದುವುದಿಲ್ಲ.

ಸ್ವಾತಂತ್ರ್ಯ ಬಂದಾಗಿನಿಂದಲೂ ಸರ್ಕಾರವು ತನ್ನ ಪ್ರಜೆಗಳು ಅದರಲ್ಲೂ ಯುವಕರು ಸ್ವಾತಂತ್ರ್ಯಪೂರ್ವ ಕಾಲಕ್ಕೆ ಮರಳುವುದನ್ನು ಅಪೇಕ್ಷಿಸುತ್ತಿಲ್ಲ. ಆದರೆ ಸ್ವಾತಂತ್ರ್ಯ ಹೋರಾಟದಿಂದ ಸಾಧಿಸಬೇಕಾಗಿದ್ದ ಗುರಿ ಸಂಪೂರ್ಣವಾಗಿ ಲಭ್ಯವಾಗಿಲ್ಲ; ಕೇವಲ ರಾಜಕೀಯ ಕ್ರಾಂತಿ ಸಾಧ್ಯವಾಯಿತೆ ಹೊರತು ಸಾಂಸ್ಕೃತಿಕ ಹಾಗೂ ಆರ್ಥಿಕ ಕ್ರಾಂತಿ ಸಾಧ್ಯವಾಗಲಿಲ್ಲ. ಗಡಿಯಾರದ ಲಂಬಕ ಅರ್ಧ ಹಾದಿ ಬಂದಾಗ ಅದನ್ನು ಹಿಂದೆ ಸಾಗಲು ಅಪೇಕ್ಷಿಸಿದರೆ ಹೇಗಾದೀತು ? ಈ ದೃಷ್ಟಿಯಿಂದ ಒಂದು ವಿಧದ ಮೌಲ್ಯಗಳ ಹೋರಾಟ ಪ್ರಾರಂಭವಾಗಿದ್ದು ಗುಂಪುಗಳ ಪರಸ್ಪರ ಕಾಳಗಕ್ಕೆ ಹಾದಿ ಮಾಡಿದೆ. ಈ ಸ್ಥಿತಿಯು ಸಮಾಜ ಶಾಸ್ತ್ರಜ್ಞರು ವರ್ಣಿಸುವ 'ಅನೋಮಿಕ್' ಸ್ಥಿತಿಗೆ ಸರಿಹೋಲುವಂತಿದೆ. ಸಮಾಜಶಾಸ್ತ್ರತಜ್ಞ **ಡುರ್ಖಿಮ್**ನು ಪ್ರಥಮತಃ ಈ ತತ್ವವನ್ನು ರೂಪಿಸಿದನು. ಅವನ ದೃಷ್ಟಿಯಲ್ಲಿ ಸಾಂಸ್ಕೃತಿಕ ರಚನೆ ಪತನಗೊಂಡಾಗ ಈ ಸ್ಥಿತಿ ಉಂಟಾಗುತ್ತದೆ. 'ಅನೋಮಿಕ್' ಸ್ಥಿತಿಯು ಸಮಾಜದಲ್ಲಿಯ ನಡತೆಯಮಟ್ಟ ಹಾಗೂ ಅದರ ಗುರಿಗಳಲ್ಲಿ ತೀಕ್ಷ್ಣ ವಿಭೇದ ಉಂಟಾದಾಗ ಉದ್ಭವವಾಗುತ್ತದೆ. **ಮೆರ್‌ಟನ್**‌ರವರ ದೃಷ್ಟಿಯಲ್ಲಿ 'ಅನೋಮಿಕ್ ಮಾನವನು' ಯಾವುದೂ ಮಟ್ಟವನ್ನು ಹೊಂದಿರುವುದಿಲ್ಲ. ಅವನಲ್ಲಿ ಅಸಂಬದ್ಧ ಆಕಾಂಕ್ಷೆಗಳು ಮಾತ್ರ ಇರುತ್ತವೆ; ಅವನಲ್ಲಿ ಅಖಂಡತ್ವದ ಪ್ರಜ್ಞೆ ಇರುವುದಿಲ್ಲ; ಅವನು ಇತರರಲ್ಲಿಯ ಮೌಲ್ಯಗಳನ್ನು ಅಪಹಾಸ್ಯ ಮಾಡುತ್ತಾನೆ; ಅವನು ಭೂತ–ಭವಿಷ್ಯಗಳ ಅನಿಶ್ಚಿತ ಜಂಜಾಟದಲ್ಲಿರುತ್ತಾನೆ." 'ಅನೋಮಿಕ್ ಮಾನವನ' ಈ ವರ್ಣನೆಯು 'ನಮ್ಮ ವಿದ್ಯಾರ್ಥಿಗಳು ಹೇಗೆ ಅನೋಮಿಕ್ ಮಾನವರು ? ' ಎಂಬ ವಿಶ್ಲೇಷಣೆಗೆ ಒಯ್ಯುತ್ತದೆ.

ಈ ಅಂಶವನ್ನೇ ಇಲ್ಲಿ ವಿವೇಚಿಸಲಾಗಿದೆ. 'ಅನೋಮಿಕ್ ವರ್ತನೆ'ಗೆ ಸಂಬಂಧಿಸಿದ ಅಂಶಗಳು ಇಂತಿವೆ.

**೧. ಸಮಾಜದ ನಾಯಕರು ಜನರ ಅವಶ್ಯಕತೆಗಳ ಬಗ್ಗೆ ಅಸಡ್ಡೆ ತಾಳಿದ್ದಾರೆಂಬ ಭಾವನೆ:—**

ಸಾಮಾನ್ಯವಾಗಿ ಇಂದಿನ ಸಮಾಜದಲ್ಲಿ ನಾಯಕರ ಬಗ್ಗೆ ಈ ಭಾವನೆ ಮೂಡಿರುವಂತೆ ತೋರುತ್ತದೆ. ಸಾರ್ವಜನಿಕರು ಸರ್ಕಾರದ ನಿರ್ಲಕ್ಷ್ಯ ಹಾಗೂ ಅಸಮರ್ಥತೆಯನ್ನು ದೂರಲು ಸಂಕೋಚಪಡುವುದಿಲ್ಲ. ಸರ್ಕಾರದ ಎಲ್ಲ ಹಂತಗಳಲ್ಲೂ ಲಂಚ-ಗುಳಿತನ ತಾಂಡವವಾಡುತ್ತಿರುವುದನ್ನು ನಮ್ಮ ನಾಯಕರೇ ಒಪ್ಪುತ್ತಾರೆ. ಸಮಾಜದ ನಾಯಕರನ್ನೇ ಆಗಲಿ, ಸರ್ಕಾರದ ನಾಯಕರನ್ನೇ ಆಗಲಿ ಜನ ಗೌರವ ಭಾವದಿಂದ ನೋಡುವುದಿಲ್ಲ. ಅವರನ್ನು ಸ್ವಾರ್ಥ ಸಾಧನೆಗಾಗಿ ಚುನಾಯಿತರಾದ ಸಮಯ ಸಾಧಕರೆಂದು ಜನ ಪರಿಗಣಿಸುತ್ತಾರೆ. "ಕಾಯ್ದೆಯಿಂದ ಕೆಲಮಟ್ಟಿಗೆ ಗೌರವವನ್ನು ಸಾಧಿಸಬಹುದು; ಆದರೆ ರಾಜಕೀಯ ತತ್ವ ಸಾಧನೆಯಿಂದ ಇದಕ್ಕಿಂತ ಹೆಚ್ಚು ಗೌರವ ಪಡೆಯಬಹುದು; ಆದರೆ ಇದಕ್ಕಿಂತ ಹೆಚ್ಚಾಗಿ ಪರಸ್ಪರ ಅಭಿಮಾನದ ಭಾವನೆ ವೈಯುಕ್ತಿಕವಾಗಿ ಪಡೆದಿದ್ದರೆ ಬಹಳ ಉತ್ತಮ." ಎಂದು ಬಿಸ್ಮಾರ್ಕನು ಹೇಳಿದ್ದಾನೆ. ಭಾರತದಲ್ಲಿ ಸ್ವಾತಂತ್ರ ಪೂರ್ವ ರಾಷ್ಟ್ರೀಯ ನಾಯಕರ ಬಗ್ಗೆ ಜನರಿಗಿದ್ದ ಅಭಿಮಾನ ಈಗ ಮಾಯವಾಗಿದೆ. ಈಗಿನ ವಾತಾವರಣದಲ್ಲಿ ವಿದ್ಯಾರ್ಥಿಗಳಿಂದ ಗೌರವವನ್ನು ಪಡೆಯಬಲ್ಲ ನಾಯಕರು ಯಾರೂ ಇರುವುದು ಅಸಂಭವವೂ, ಅಸಾಧ್ಯವೂ ಇದ್ದಂತಿದೆ.

**೨. ಕ್ರಮಬದ್ಧತೆಯನ್ನು ಕಳೆದುಕೊಂಡು ಮೂಲತಃ ಅನಿರೀಕ್ಷಿತವಾಗಿರುವ ಇಂದಿನ ಸಮಾಜದಲ್ಲಿ ಯಾವ ಸಾಧನೆಯೂ ಸಾಧ್ಯವಿಲ್ಲವೆಂಬ ಭಾವನೆ:—**

ವಿದ್ಯಾರ್ಥಿಯ ದೃಷ್ಟಿಯಿಂದ ಸಮಾಜವನ್ನು ವೀಕ್ಷಿಸಿದರೆ ಶೂನ್ಯಭಾವ ತೋರುವುದರಲ್ಲಿ ಸಂದೇಹವಿಲ್ಲ. ಒಂದನೆಯದಾಗಿ, ಸಮಾಜದಲ್ಲಿ ಪ್ರಜಾಸತ್ತೆ ಜಾರಿಯಲ್ಲಿದೆ ಎಂದರೂ ಕಾಲೇಜುಗಳಲ್ಲಾಗಲಿ, ತರಗತಿಗಳಲ್ಲಾಗಲೀ ಪ್ರಜಾಸತ್ತೆ ಹೆಸರಿಗೂ ಇಲ್ಲ. ಅಲ್ಲಿ ಶಿಕ್ಷಕನು ಅಧಿಕಾರಿ. ಅವನೇ ಯಾವುದನ್ನು ಕಲಿಸಬೇಕು, ಯಾವಾಗ ಕಲಿಸಬೇಕು ಎಂಬುದನ್ನು ನಿರ್ಧರಿಸುತ್ತಾನೆ. ಮಧ್ಯಕಾಲೀನ ಯೂರೋಪದಲ್ಲಿ ಪ್ರಾಧ್ಯಾಪಕರನ್ನು ವಿಶ್ವವಿದ್ಯಾಲಯಗಳಿಗೆ ಆರಿಸಲಾಗುತ್ತಿತ್ತು; ವಿದ್ಯಾರ್ಥಿಗಳು ಶಿಕ್ಷಕರನ್ನು ಬಾಡಿಗೆಗೆ ಸ್ವೀಕರಿಸುತ್ತಲೂ ಇದ್ದರೂ; ಅವರು ತಪ್ಪಿದಲ್ಲಿ ಛೀಮಾರಿಯೂ ಹಾಕುತ್ತಿದ್ದರು. ಹೀಗಿಲ್ಲ ಈಗಿನ ಶಿಕ್ಷಕರ ಆಯ್ಕೆ. ಇದಲ್ಲದೆ ಈಗಿನ ಸಮಾಜದ ವರ್ತನೆಯ ಬಗ್ಗೆ ನಿರೀಕ್ಷಿಸುವುದು ಅಸಾಧ್ಯದ ಮಾತು. ಭಾರತದಲ್ಲಿ ಇಂದಿನ ಪ್ರಜಾಸತ್ತೆಯಲ್ಲಿ ಪ್ರಜಾಸತ್ತಾತ್ಮಕವಾಗಿ ಚುನಾಯಿತರಾದ ಪ್ರತಿನಿಧಿಗಳನ್ನು ಯಾವುದಾದರೂ ನೆವದಿಂದ ಬಂಧಿಸುವ ಸನ್ನಿವೇಶಗಳಿಗೆ ಕೊರತೆಯಿಲ್ಲ. ಮತ್ತೆ ಕೆಲವೊಮ್ಮೆ ಚುನಾವಣಾ ರೀತಿಯಲ್ಲಲ್ಲದೇ ರಾಜಕೀಯ ಅಧಿಕಾರ ಪಡೆಯುವ ಘಟನೆಗಳಿಗೂ ಕೊರತೆಯಿಲ್ಲ. ರಾಜ್ಯಗಳ ಗಡಿ ಪ್ರಶ್ನೆ

ಅಥವಾ ರಾಷ್ಟ್ರಭಾಷೆಯ ಸಮಸ್ಯೆ ಬಂದಾಗ ಹಿರಿಯರ ವರ್ತನೆ ಅನುಕರಣೀಯವಲ್ಲ. ಎಲ್ಲರಿಗಿಂತಲೂ ಹೆಚ್ಚಾಗಿ ವಿದ್ಯಾರ್ಥಿಗಳು ಹಿರಿಯರ ಈ ಎಲ್ಲ ವರ್ತನೆಗಳ ಬಗ್ಗೆ ಜಾಗರೂಕತೆಯಿಂದ ಗಮನಿಸುತ್ತಾರೆ.

**೩. ಜೀವನದಲ್ಲಿ ಗುರಿ ಸಾಧನೆ ಅಸಾಧ್ಯವಾಗುತ್ತಿದೆ ಎಂಬ ಭಾವನೆ:—**

ಸಧ್ಯದ ಸ್ಥಿತಿಯನ್ನು ಗಮನಿಸಿದರೆ ದಿನ ದಿನಕ್ಕೆ ಹೆಚ್ಚುತ್ತಿರುವ ಕಾಲೇಜುಗಳಿಂದ ಹೆಚ್ಚು ಹೆಚ್ಚಾಗಿ ಪದವೀಧರರು ಹೊರ ಬರುತ್ತಿದ್ದಾರೆ. ಈ ಪದವೀಧರರಲ್ಲಿ ಅನೇಕರು ಕುಶಲತೆ ಹೊಂದಿದವರಲ್ಲ. ಇವರಲ್ಲಿ ಅನೇಕರು ಚೆನ್ನಾಗಿ ಓದಬಲ್ಲರು, ಬರೆಯ ಬಲ್ಲರೇ ಹೊರತು ಉತ್ಪಾದನೆ ಮಾಡಲಾರರು. ಇದು ನಮ್ಮ ಶಿಕ್ಷಣ ಪದ್ಧತಿ. ಈ ಸರಕಾರವೇಕೆ, ಯಾವ ಸರ-ಕಾರವೂ ಪ್ರತಿವರ್ಷ ಉತ್ತೀರ್ಣರಾಗುವ ಪದವೀಧರರಿಗೆ ಉದ್ಯೋಗವನ್ನು ಒದಗಿಸ ಲಾರದು. ಬಹುಶಃ ಖಾಸಗಿ ಉದ್ದಿಮೆ ಗಳು ಮಾತ್ರ ಈ ಕಾರ್ಯವನ್ನು ಯಶಸ್ವಿ ಯಾಗಿ ಮಾಡಬಲ್ಲದೆಂದು ತೋರುತ್ತದೆ. ಈ ಸ್ಥಿತಿ ದೇಶದಲ್ಲಿ ನಿರುದ್ಯೋಗಕ್ಕೆ ನೆಲೆ ಮಾಡಿಕೊಟ್ಟಿದೆ. ಇದಲ್ಲದೆ ವಿದ್ಯಾರ್ಥಿಗಳು ಅಲ್ಲಸಲ್ಲದ ವರ್ತನೆಯಲ್ಲಿ ತೊಡಗಿದರೆ ಅವ ರಿಗೆ ಏನೂ ಹಾನಿಯಾಗದಂತೆ ಇದೆ ಸ್ಥಿತಿ.

**೪. ತಾನು ಸ್ವೀಕರಿಸುವುದೆಲ್ಲಾ ಫಲವತ್ತಾಗಿದೆ ಎಂಬ ಭಾವನೆ:—**

ವೃತ್ತಿ ಕಾಲೇಜುಗಳನ್ನು ಹೊರತು ಪಡಿಸಿ ಇತರ ಕಾಲೇಜುಗಳಲ್ಲಿಯ ಶಿಕ್ಷಣ, ವಿದ್ಯಾರ್ಥಿಯ ಜೀವನದ ಗುರಿಗೆ ಸಂಬಂಧವೇ ಇಲ್ಲದಂತೆ ಇರುತ್ತದೆ. ಇದರರ್ಥ ಶಿಕ್ಷಣವು ನಿರರ್ಥಕ. ಕಾಲೇಜು ಶಿಕ್ಷಣವು ಉತ್ತಮ ಭವಿಶವ್ಯಕ್ಕೆ ಹಾದಿಯೂ ಅಲ್ಲ, ವಿದ್ಯಾಭ್ಯಾಸಾನಂತರ ಉದ್ಯೋಗವನ್ನು ಒದಗಿಸುವ ಶಕ್ತಿಯನ್ನೂ ಪಡೆದಿರುವುದಿಲ್ಲ ಜೀವನಕ್ಕೂ-ಶಿಕ್ಷಣಕ್ಕೂ ಸಾಮರಸ್ಯವಿಲ್ಲದಿರುವುದಕ್ಕೆ ಅನೇಕ ಕಾರಣ ಗಳಿವೆ. ನಮ್ಮ ಶಿಕ್ಷಣದ ಚರಿತ್ರೆ ಇದಕ್ಕೆ ಒಂದು ಕಾರಣ. ಬ್ರಿಟಿಷರಿಗೆ ಕಾರಕೂನರು ಬೇಕಾಗಿದ್ದರೇ ಹೊರತು ವಿಚಾರವಂತರಲ್ಲ. ಪುರಾತನ ಪದ್ಧತಿಯು ಈಗಿನ ಕಾಲಕ್ಕೆ ನಿರುಪಯೋಗವಾದರೂ ಅದನ್ನೇ ನಾವು ಜಾರಿಯಲ್ಲಿಟ್ಟುಕೊಂಡಿದ್ದೇವೆ. ಬಾಹ್ಯ ಪರೀಕ್ಷೆಗಳಿಂದ ವಿದ್ಯಾರ್ಥಿ ವರ್ಷದಾದ್ಯಂತ ಖಾಲಿ ಉಳಿಯುತ್ತಾನೆ ಅವನು ತನ್ನ ಬಗ್ಗೆ ಸಂಪೂರ್ಣ ಅರಿತಿರುವ ಶಿಕ್ಷಕನಿಗೆ ಬಾಧ್ಯನಲ್ಲ; ವರ್ಷದ ಕೊನೆಯಲ್ಲಿ ಬರುವ ಪ್ರಶ್ನೆ ಪತ್ರಿಕೆಗೆ ಅವನು ಬಾಧ್ಯನು. ಇದರಿಂದಾಗಿ ಶಿಕ್ಷಕ-ವಿದ್ಯಾರ್ಥಿಗಳ ಸಂಬಂಧವು ಕೇವಲ ಬಾಹ್ಯವೂ, ವಿರಳವೂ ಆಗಿದೆ. ಪರೀಕ್ಷೆಗಳ ಮೇಲೆ ಅವಾಸ್ತವ ಮಹತ್ವ ಇರಿಸಿರುವ ವಿದ್ಯಾರ್ಥಿಗಳ ಬುದ್ಧಿಯು ಬೌದ್ಧಿಕ ಗಟಾರುಗಳೇ ಆಗಿವೆ; ಕೆಲ ಟಿಪ್ಪಣಿಗಳ ಗೋಕುಹಾಕಿ ಪರೀಕ್ಷೆ ಗಳಲ್ಲಿ ಉತ್ತೀರ್ಣರಾಗುವುದರಿಂದ ಶಿಕ್ಷಣ ದಲ್ಲಿ ಹೊಸತನಕ್ಕೆ ಮಾರ್ಗವೇ ಇಲ್ಲ.

ವಿದ್ಯಾರ್ಥಿ ಗಲಭೆಗೆ ಇವು ಕೆಲ ಕಾರಣ ಗಳು. ಸಾಮಾಜಿಕ ವಾತಾವರಣದಿಂದಲೇ



‘ ಅನೋಮಿಕ್ ವ್ಯಕ್ತಿತ್ವ ’ ರಚಿತವಾಗಿದೆ. ನಮ್ಮ ನಾಯಕರ ಅಪಯಶಸ್ಸು, ಶಿಕ್ಷಣ ಪದ್ಧತಿಯ ನಿರರ್ಥಕತೆ, ಶಿಕ್ಷಕರ ಬೌದ್ಧಿಕ ಪ್ರವೃತ್ತಿಯ ಕೊರತೆ ಇವುಗಳನ್ನು ನಾವು ಗಂಭೀರವಾಗಿ ಗಮನಿಸಬೇಕು. ಇದಕ್ಕೆ ನಿಜವಾಗಿ ವಿದ್ಯಾರ್ಥಿಗಳು ಕಾರಣರೆಂದು ಹೇಳಲಾಗದು. ಪರಂಪರೆಯಿಂದ ಬಂದಿರುವ ವಿದ್ಯಾರ್ಥಿಗಳ ಹುಟ್ಟುಗುಣ ಬೇರಾಗಿಲ್ಲ. ಅದು ಬೇರೆ ಬೇರೆ ವಾತಾವರಣಕ್ಕೆ ಬೇರೆ ಬೇರೆ ಪ್ರತಿಕ್ರಿಯೆ ಕೊಡತ್ತಿದೆಯಷ್ಟೆ.

ಇದಕ್ಕೆ ಪರಿಹಾರವೇನು? ಶಾಶ್ವತವಾದ ಪರಿಹಾರ ಬೇಕಾದರೆ ಈ ವಿದ್ಯಾರ್ಥಿಗಲಭೆಗೆ ಮೂಲಕಾರಣವಾದುವುಗಳನ್ನು ಬೇರು ಸಮೇತ ಕಿತ್ತೊಗೆಯಬೇಕು.

**ಸಮಾಜದಲ್ಲಿ ಬದಲಾವಣೆ ಅವಶ್ಯ :**

ಪ್ರತಿ ವ್ಯಕ್ತಿಯು ತನ್ನ ವಾತಾವರಣಕ್ಕನುಗುಣವಾಗಿ ವರ್ತಿಸುತ್ತಾನೆ. ಈ ದೃಷ್ಟಿಯಿಂದ ಸಮಾಜವು ದರ್ಪಣವಿದ್ದಂತೆ.

**ಕೂಲೆ ಹೇಳಿದಂತೆ :**

“ ಒಬ್ಬರಿಗೊಬ್ಬರು ಕನ್ನಡಿಯು, ಒಬ್ಬೊಬ್ಬರ ಪ್ರತಿಬಿಂಬವ ತೋರುವುದು”

ಇಡೀ ಸಮಾಜದಲ್ಲೇ ಸಮಾಜ ಘಾತಕ ರೀತಿಗಳು ಪ್ರಬಲವಾಗಿದ್ದಾಗ ವಿದ್ಯಾರ್ಥಿಗಳಲ್ಲಿ ಮಾತ್ರ ಬೇರೆ ವರ್ತನೆಯನ್ನು ಹೇಗೆ ನಿರೀಕ್ಷಿಸಲು ಸಾಧ್ಯ. ವಿದ್ಯಾರ್ಥಿಗಳೂ ಸಮಾಜದ ಒಂದು ಭಾಗವಲ್ಲವೇ.

ಶಿಕ್ಷಣ ಪದ್ಧತಿಯಲ್ಲಿ ಚೇತನಪೂರ್ಣ ಬದಲಾವಣೆಗಳು ಜಾರಿಯಲ್ಲಿ ಬರುತ್ತಲಿವೆ. ಶಿಸ್ತು ವೈಯಕ್ತಿಕ ಸಮರ್ಪಣಭಾವದಿಂದ ಮಾತ್ರ ಬಂದೀತು. ಇದಕ್ಕೆ ಶಿಕ್ಷಕರು ಉತ್ತಮ ವ್ಯಕ್ತಿತ್ವವುಳ್ಳವರಾಗಿರುವುದರೊಡನೆ ವಿದ್ಯಾರ್ಥಿಗಳು ಶಿಕ್ಷಕರ ಆಶ್ರಯದಲ್ಲಿರುವಂತೆ ಇರಬೇಕು ಕಾಲೇಜುಗಳ ಪ್ರವೇಶದಲ್ಲಿ ಮಿತಿ, ಕಾಲೇಜುಗಳು ಹಾಗೂ ಉದ್ದಿಮೆಗಳ ನಡುವೆ ಪರಸ್ಪರ ಸಹಕಾರ, ಶಿಕ್ಷಕರಿಗೆ ಬೌದ್ಧಿಕ ಸ್ವಾತಂತ್ರ್ಯ, ಇವುಗಳು ಕೆಲವು ಅಂಶಗಳು.

ಕಲಿಯುವಿಕೆ ಹಾಗೂ ಕಲಿಸುವಿಕೆಗಳು ರಚನಾತ್ಮಕ ಕ್ರಿಯೆಗಳಾಗಬೇಕೇ ಹೊರತು ಗೋಕುಪಾಕುವ ಕ್ರಿಯೆಗಳಾಗಬಾರದು. “ ಭೂತಕಾಲದಲ್ಲಿ ಸಂಗ್ರಹಿಸಿದ ಮೌಲ್ಯಗಳನ್ನು ರಕ್ಷಿಸಿಕೊಂಡು ಭವಿಷ್ಯತ್ತಿಗೆ ರಚನಾತ್ಮಕ ಕೃತಿಗಳನ್ನು ನೀಡುವುದೇ ಸಮಾಜದ ಸದಸ್ಯರ ಕರ್ತವ್ಯವಾಗಬೇಕು.” ಎಂದು **ವೆಬರ್** ನುಡಿದಿದ್ದಾನೆ. ನಮ್ಮ ಸಮಾಜವು ರಚನಾತ್ಮಕ ಮಾರ್ಗದಲ್ಲಿ ಪ್ರಗತಿ ಸಾಧಿಸಬೇಕಾದರೆ ಹಿಂದಿನ ಮೌಲ್ಯಗಳನ್ನು ರಕ್ಷಿಸಿಕೊಂಡು, ಸಧ್ಯದಲ್ಲಿ ಬಂದಿರುವ ಅಡತಡೆಗಳನ್ನು ಪರಿಹರಿಸಿಕೊಂಡು, ಭವಿಷ್ಯತ್ತಿಗೆ ಭವ್ಯ ರಚನಾತ್ಮಕ ಕೃತಿಯನ್ನು ಅರ್ಪಿಸಬೇಕು. ವಿದ್ಯಾರ್ಥಿಗಲಭೆ ನಮ್ಮ ಸಮಾಜದ ಪ್ರಗತಿಯ ಹಾದಿಯಲ್ಲಿರುವ ಒಂದು ಮುಳ್ಳುಪೊದೆ. ಅದನ್ನು ಬೇರುಸಮೇತ ಕಿತ್ತಿದರೆ ನಮ್ಮ ಪ್ರಗತಿ ಸುಗಮವಾಗುತ್ತದೆ.

* * *

ಅಸಿ.

ನಿಮ್ಮ ಮೋಟಾರಿಗೆ ಏನು ಬೇಕಾಗಿದೆ?



# ಕೆ. ಅನಂತ ಆ್ಯಂಡ ಕಂಪನಿ

ಜ್ಯುಬಿಲಿ ಸರ್ಕಲ್, ಧಾರವಾಡ

ನಿಮ್ಮ ಎಲ್ಲ ಬೇಡಿಕೆಗಳನ್ನೂ ಪೂರೈಸುವದು.

ಧಾರವಾಡಕ್ಕೆ ಬಂದಾಗ—

ಸ್ಟೇಷನ್ ರೋಡಿನಲ್ಲಿರುವ

# ಗಿರಿಜಾ ಭವನ

ದಲ್ಲಿ ನಿಮ್ಮ ವಿಶ್ರಾಂತಿ ಹಾಗೂ ಉಪಹಾರಗಳನ್ನು ಪಡೆಯಲು

ಮರೆಯಬೇಡಿರಿ.

# ಸ್ವಾತಂತ್ರ್ಯ ಹೋರಾಟದಲ್ಲಿ ಹುತಾತ್ಮರಾದ ಕನ್ನಡಿಗರು

[ ಸ್ವಾತಂತ್ರ್ಯ ಸಮರದಲ್ಲಿ ಭಾರತದ ದಾಸ್ಯವಿಮೋಚನೆಗೆ ಆತ್ಮಾರ್ಪಣೆ ಮಾಡಿದವರನೇಕರು. ಅವರ ಆತ್ಮಾಹುತಿ ಸ್ವಾತಂತ್ರ್ಯಫಲವನ್ನು ಭಾರತಕ್ಕೆ ಒದಗಿಸಿತು. ಈ ಇಪ್ಪತ್ತು ವರ್ಷಗಳ ಕಾಲ ಅನುಭವಿಸಿರುವ ಸ್ವಾತಂತ್ರ್ಯಕ್ಕೆ ನಾವು ಈ ಹುತಾತ್ಮರಿಗೆ ಋಣ ಸಲ್ಲಿಸಬೇಕು. ಅವರ ತ್ಯಾಗ–ಸೇವೆಗಳನ್ನು ಕೃತಜ್ಞತಾಪೂರ್ವಕವಾಗಿ ನೆನಪು ಮಾಡಿಕೊಳ್ಳಬೇಕು. ಅನೇಕಾನೇಕ ತ್ಯಾಗವೀರರ ಪೈಕಿ ಕೆಲ ಪ್ರಮುಖ ಕನ್ನಡಿಗರ ವ್ಯಕ್ತಿಚಿತ್ರಣವನ್ನು ಇಲ್ಲಿ ಚಿತ್ರಿಸಲಾಗಿದೆ. ಆ ಹುತಾತ್ಮರ ಆಸೆ–ಆಕಾಂಕ್ಷೆಗಳು ನಮಗೆ ದಾರಿದೀಪವಾಗಲಿ. ಅವರ ಅಮರತ್ವ ರಾಷ್ಟ್ರದ ಪ್ರಗತಿಗೆ ಹೋರಾಡುವ ಶಕ್ತಿ–ಸಾಮರ್ಥ್ಯಗಳನ್ನು ನಮ್ಮ ಯುವಕರಲ್ಲಿ ತುಂಬಲಿ. ಅವರ ತ್ಯಾಗ ರಾಷ್ಟ್ರವ್ಯಾಪಕವಾಗಲಿ. —ಸಂ. ]

## ೧. ಮೈಲಾರ ಮಹದೇವಪ್ಪ

ಗಾಂಧೀಜೀಯವರ ಮಾರ್ಗದರ್ಶನದಲ್ಲಿ ರಾಷ್ಟ್ರಸೇವೆಗಾಗಿ ಸ್ವಾತಂತ್ರ್ಯಹೋರಾಟಕ್ಕೆ ಕಂಕಣಬದ್ಧರಾದ ಹಲವರಲ್ಲಿ ಮೈಲಾರ ಮಹದೇವಪ್ಪ ಒಬ್ಬರು. ಸಾಬರಮತಿ ಆಶ್ರಮದಲ್ಲಿ ಗಾಂಧೀಜಿಯವರ ಆಶ್ರಯ ಪಡೆದು, ಅಹಿಂಸಾ ಸೂತ್ರಗಳ ಲಗು–ಬಿಗುಗಳನ್ನು ಕಲಿತು, ತನ್ನ ಧರ್ಮಪತ್ನಿಯೊಡನೆ ಹಾವೇರಿತಾಲೂಕಿನ ಹೊಸರಿತ್ತಿಯ ಬಳಿಯ ಕೊರಡೂರಲ್ಲಿ ಸಾಬರಮತಿ ಆಶ್ರಮದ ಮಾದರಿಯ ಗ್ರಾಮಸೇವಾ ಆಶ್ರಮ ಪ್ರಾರಂಭಿಸಿ ಗ್ರಾಮೀಣ ಸೇವೆಗೆ ತೊಡಗಿದರು. ಮಹದೇವಪ್ಪ–ಸಿದ್ಧಮತಿ ಇವರೀರ್ವರೂ ಸ್ವಾತಂತ್ರ್ಯ ಹೋರಾಟದಲ್ಲಿ ಅನೇಕ ಸಲ ಜೈಲುವಾಸವನ್ನು ಅನುಭವಿಸಬೇಕಾಯಿತು. ಆದರೆ ೧೯೪೨ ರ 'ಚಲೇ ಜಾವ್" ಚಳುವಳಿಯಲ್ಲಿ ಮೈಲಾರ ಮಹದೇವಪ್ಪನವರು ತೋರಿದ ಸಂಘಟನಾ ಶಕ್ತಿ, ಚಾತುರ್ಯ ಸಾಹಸ ಅವರ್ಣನೀಯ. ಕರ್ನಾಟಕದ ಮೂಲೆ ಮೂಲೆಗಳಲ್ಲಿ ಇವರ ಸಾಹಸದ ಕಾರ್ಯ ಕತೆಯಾಗಿ ಸಾಗಿತು.

೧೯೪೨ ರ ಆಗಸ್ಟ ೯ ಕ್ಕೆ ಬ್ರಿಟಿಶರನ್ನು ಹೊರದೂಡುವ ನಿರ್ಣಯ ಕೈಕೊಂಡೊಡನೆ ರಾಷ್ಟ್ರದ ಅನೇಕ ಧುರೀಣರನ್ನು ಬಂಧಿಸಲಾಯಿತು. ಈ ಬಂಧನದ ಬಿಸಿ ಎಲ್ಲ ಮೂಲೆಗಳಿಗೂ ಹಬ್ಬತೊಡಗಿದೊಡನೆ ಮಹದೇವಪ್ಪ ತನ್ನ ಸಂಗಾತಿಗರೊಡನೆ ಕೊರಡೂರು ಆಶ್ರಮದಿಂದ ತಲೆ ತಪ್ಪಿಸಿಕೊಂಡು ಬ್ರಿಟಿಶರ ಆಡಳಿತದ ಬೇರು ಕಿತ್ತುವ ಕಾರ್ಯದಲ್ಲಿ ತೊಡಗಿದನು.

ಅಹಿಂಸಾ ಮಾರ್ಗದಲ್ಲೇ ಈ ಮಹತ್ವದ ಚಳುವಳಿಯಲ್ಲಿ ಕಾರ್ಯ ನಡೆಸಿದನು. ಅಜ್ಞಾತ ವಾಸದಲ್ಲಿದ್ದ ಮಹದೇವಪ್ಪನ ಪತ್ತೆಹಚ್ಚಲು ಬ್ರಿಟಿಶ ಸರ್ಕಾರ ಅಸಮರ್ಥವಾಯಿತು. ಆದರೂ ಅವರು ಅಹರ್ನಿಶ ಈ ಗುಂಪಿನ ನೆಲೆ ಕಂಡುಹಿಡಿಯಲು ಕಾರ್ಯನಿರತರಾಗಿದ್ದರು. ಇಂದು ಗುಡಿ, ನಾಳೆ ಗವಿ; ಒಂದು ದಿನ ಹಳ್ಳಿ, ಮತ್ತೊಂದು ದಿನ ಗಿಡಮರಗಳ ಆಶ್ರಯವೆನ್ನುತ್ತಾ ಇವರು ಮಾಡಿದ ಕಾರ್ಯ ರೋಮಾಂಚನಕಾರಿಯಾಗಿತ್ತು. ಅಧಿಕಾರಿಗಳಿಗೆ ಪೂರ್ವ ತಿಳುವಳಿಕೆ ಕೊಟ್ಟು ಆಯುಧಗಳನ್ನು ಕಸಿದುಕೊಳ್ಳುವುದು, ಬೊಕ್ಕಸವನ್ನು ದೋಚುವುದು, ಅಧಿಕಾರಿಗಳನ್ನು ಖಾಸಗಿ ಬಂಧನದಲ್ಲಿರಿಸಿ ಅವರ ಸಮಕ್ಷಮದಲ್ಲಿ ತೆರಿಗೆ ವಸೂಲು ಮಾಡುವುದು ಮುಂತಾದ ೭೪ ಕಾರ್ಯಕ್ರಮಗಳನ್ನು ಪೂರ್ತಿಮಾಡಿ ೭೫ ನೆ ಕಾರ್ಯಕ್ರಮ ಹೊಸರಿತ್ತಿಯ ಕಂದಾಯದ ಹಣ ಕಸಿಯುವುದೆಂದು ನಿರ್ಧರಿಸಿದ್ದರು. ಇದರ ಮಹತ್ವವೆಂದರೆ ಈ ೭೫ ನೆಯ ಕಾರ್ಯಕ್ರಮ ಗಾಂಧೀಜಿಯ ೭೫ ನೆಯ ವರ್ಷದ ಪ್ರಾರಂಭಕ್ಕೂ ಸಾಮ್ಯವಾಗುವಂತೆ ರೂಪಿಸಲಾಗಿತ್ತು. ''ಇದು ನಮ್ಮ ಕೊನೆಯ ಕಾರ್ಯವಾಗಬಹುದು. ಸಾಯಲು ಸಿದ್ಧರಿದ್ದವರೇ ಈ ಕೆಲಸಕ್ಕೆ ಮುಂದೆ ಬರಬೇಕು.'' ಎಂದು ಮಹದೇವಪ್ಪ ತನ್ನ ಸಂಗಡಿಗರಿಗೆ ಆದೇಶವಿತ್ತನು.

ಈ ಹೊಸರಿತ್ತಿಯ ಕಂದಾಯದ ಹಣ ಅಲ್ಲಿ ಒಂದು ಗುಡಿಯಲ್ಲಿ ಸಂಗ್ರಹಿಸಲಾಗಿತ್ತು. ಇದಕ್ಕೆ ೧೨ ಜನ ಸಶಸ್ತ್ರ ಪೋಲೀಸರ ಕಾವಲಿತ್ತು. ೧೯೪೩ ರ ಎಪ್ರಿಲ್ ೧ ರ ನಸುಕಿನಲ್ಲಿ ಹಣದೋಚುವ ಸಂಚು ಹಾಕಲಾಗಿತ್ತು. ಮುಂಜಾವಿನ ನಸುಕಿನಲ್ಲಿ ಕೆಲ ಸಶಸ್ತ್ರ ಪೋಲೀಸರು ಪ್ರಾತಃಕರ್ಮ ಪರಿಪೂರ್ತಿಗೆ ಹೋಗಿದ್ದರು. ಕೇವಲ ಮೂವರು ಮಾತ್ರ ಬೊಕ್ಕಸದ ಸುತ್ತು ಕಾಯುತ್ತಿದ್ದರು. ಈ ಸಮಯ ಸಾಧಿಸಿ ಮಹದೇವಪ್ಪನ ಸಂಗಡಿಗರಿಬ್ಬರು ಗುಡಿಯ ದ್ವಾರದಿಂದ ಒಳಗೆ ನುಗ್ಗಿದರು. ಅವರು ನುಗ್ಗುವಾಗ ಓರ್ವ ಪೋಲೀಸನು ಅವರಿಗೆ ಗುಂಡು ಹಾಕಬೇಕೆಂದು ಸಜ್ಜು ಮಾಡಿಕೊಳ್ಳುವುದರಲ್ಲಿಯೇ ಅಲ್ಲಿಗೆ ಧಾವಿಸಿದ ಮಹದೇವಪ್ಪ ಆ ಪೋಲೀಸನ ಮೇಲೆ ಹಾರಿ, ತೆಕ್ಕೆ ಹಿಡಿದು ಕೆಡವಿದ. ಒಬ್ಬ ಪೋಲೀಸ ಓಡಿಹೋದ, ಒಬ್ಬ ಎಲ್ಲಿಯೋ ಯಾರಿಗೂ ಕಾಣದೆ ಅಡಗಿದ. ಅಷ್ಟರಲ್ಲಿ ಇನ್ನಿಬ್ಬರು ಹೋರಾಟಗಾರರು ಒಳಗೆ ನುಗ್ಗಿದರು; ರೊಕ್ಕ ತುಂಬಿದ ಪೆಟ್ಟಿಗೆಯನ್ನು ಹೊರಲುದ್ಯುಕ್ತರಾದರು. ಅವರು ಅದನ್ನು ಹೊತ್ತು ಸಾಗಿದಂತೆ ಅದೇ ಗುಡಿಯಲ್ಲಿ ಅಡಗಿದ್ದ ಪೋಲೀಸನು ಮೈಲಾರ ಮಹದೇವಪ್ಪನಿಗೆ ಗುಂಡುಹಾಕಿದ. ಅದು ಕೈಗೆ ತಾಕಿತು. ಹಿಂತಿರುಗುವುದರಲ್ಲಿಯೇ ಇನ್ನೊಂದು ಗುಂಡು ಹಾಕಿದ; ಅದು ಬೆನ್ನಲ್ಲಿ ಹೊಕ್ಕಿತು. ಅಷ್ಟರಲ್ಲೇ ರೊಕ್ಕದ ಪೆಟ್ಟಿಗೆಯನ್ನು ಹೊರುತ್ತಿದ್ದವರು ಅದನ್ನು ಅಲ್ಲಿಯೇ ಇಟ್ಟು, ಆ ಠಕ್ಕ ಪೋಲೀಸನನ್ನು ಹತ ಮಾಡಲು ನುಗ್ಗಿದರು. ಆಗ ಮಹದೇವಪ್ಪ ಅವರನ್ನು ಕೂಗಿ "ನೀವು

ವ್ರತಬದ್ಧರು, ಅಹಿಂಸೆ ನಮ್ಮ ಅಸ್ತ್ರ, ನಾನು ಸತ್ತರೂ ಸರಿ, ಅವನಿಗೆ ಹಿಂಸೆ ಬೇಡ" ಎಂದು ನುಡಿದ. ಈ ಸಂದೇಶದೊಂದಿಗೆ ಅವನ ಪ್ರಾಣಪಕ್ಷಿಯೂ ಹಾರಿತ್ತು. ಅಹಿಂಸೆಯನ್ನೇ ತನ್ನ ಉಸಿರಾಗಿಸಿಕೊಂಡಿದ್ದ ಮಹದೇವಪ್ಪ ತನ್ನ ತತ್ವಕ್ಕೆ ಕೊನೆಯುಸಿರಿನ ವರೆಗೆ ಅಂಟಿಕೊಂಡಿದ್ದ. ಮೈಲಾರ ಮಹದೇವಪ್ಪ ಅಮರ. ಈ ಹುತಾತ್ಮನ ತತ್ವನಿಷ್ಠೆ ನಮ್ಮ ಜನತೆಗೆ ಆದರ್ಶವಾಗಲಿ.

### ೨. ವೀರ ನಾರಾಯಣ ಡೋಣಿ

೧೬ ವರ್ಷಗಳ ಎಳೆ ವಯಸ್ಸಿನಲ್ಲಿ ಸ್ವಾತಂತ್ರ್ಯ ಹೋರಾಟದ ಹೊಳೆಗೆ ಬಿದ್ದು ರಾಷ್ಟ್ರಮಾತೆಯ ಪಾದಗಳಡಿಯಲ್ಲಿ ತನ್ನ ಅಸು ನೀಗಿದ ವೀರ, ಹುಬ್ಬಳ್ಳಿಯ ವೀರನಾರಾಯಣ.

ಈಗ ೨೫ ವರ್ಷಗಳ ಹಿಂದಿನ ಘಟನೆ. ೧೯೪೨ ರ ಆಗಸ್ಟ್ ೧೫ ರಂದು ಹುಬ್ಬಳ್ಳಿಯಲ್ಲಿ ಪ್ರಚಂಡ ಮೆರವಣಿಗೆ. ವಿದ್ಯಾರ್ಥಿಗಳು ಜಯಕಾರ ಮಾಡುತ್ತ, ಸ್ವಾತಂತ್ರ್ಯ ಹೋರಾಟದ ಘೋಷಣೆಗಳನ್ನು ಮಾಡುತ್ತ ಹೊರಟಿದ್ದಾರೆ. ಮೆರವಣಿಗೆ ದುರ್ಗದಬೈಲು ಮುಟ್ಟುವುದರಲ್ಲಿ ಪೋಲೀಸರ ದಂಡು ಸಿದ್ಧವಾಗಿತ್ತು. ಅಂದಿನ ಮೆರವಣಿಗೆ ನಿರ್ಬಂಧಿಸಲ್ಪಟ್ಟಿತ್ತೆಂದೂ, ಅದು ಅಕ್ರಮವಾದುದೆಂದೂ, ಎಲ್ಲರೂ ಚೆದರಿ ಹೋಗಬೇಕೆಂದು ಆಜ್ಞೆ ಕೊಡಲಾಯಿತು. ಆದರೆ 'ಮಾಡುವ ಇಲ್ಲವೇ ಮಡಿಯುವ' ಎಂಬ ವೀರ ನಿರ್ಧಾರದಿಂದಲೇ ಬಂದಿದ್ದ ವೀರರು ಎಲ್ಲಿ ಚೆದುರಬೇಕು ? ಇಷ್ಟರಲ್ಲಿ ಕೆಲ ಕಿಡಿಗೇಡಿಗಳ ಹಸ್ತಚಳಕದಿಂದ ಪೋಲೀಸರ ಮೇಲೆ ಕಲ್ಲುಬಿದ್ದವು. ಇಷ್ಟೇ ನೆವ ಅವರಿಗೂ ಬೇಕಾಗಿತ್ತೇನೋ ಎಂಬಂತೆ 'ಗೋಳೀಬಾರ್' ಪ್ರಾರಂಭವಾಯಿತು. ಗುಂಡಿನ ಮಳೆ ಅಹಿಂಸಾ ವ್ರತಧಾರೀ ವಿದ್ಯಾರ್ಥಿಗಳ ಮೇಲೆ ಆಯಿತು. ಮೆರವಣಿಗೆಯ ಮುಂದಾಳಾಗಿದ್ದ ವೀರನಾರಾಯಣನೇ ಪ್ರಥಮ ಆಹುತಿಯಾಗಬೇಕಾಯಿತು. ಒಂದು ಗುಂಡು ಅವನ ಹೊಟ್ಟೆಯನ್ನೇ ಸೀಳಿ ಹೊರಬಂತು. ರಕ್ತಸ್ರಾವದಿಂದ ಅವನು ಅಲ್ಲಿಯೇ ಬಿದ್ದನು. ಅವನನ್ನು ಕೆಲ ಕ್ಷಣಗಳ ನಂತರ ಆಸ್ಪತ್ರೆಗೆ ಸಾಗಿಸಲಾಯಿತು. ಆದರೆ...ಅವನ ಪ್ರಾಣ ಉಳಿಸುವ ಪ್ರಯತ್ನ ನಿಷ್ಫಲವೆಂದು ಭಾಸವಾದಾಗ ಡಾಕ್ಟರರು ಈ ಬಾಲಕನ ಕೊನೆಯ ಆಶೆಯನ್ನು ಅರಿಯಲು, "ತಮ್ಮಾ, ವೀರನಾರಾಯಣ ! ನಿನಗೇನು ಬೇಕಪ್ಪಾ ?" ಎಂದು ಕೇಳಿದಾಗ, ವೀರನಾರಾಯಣನು ತನ್ನ ಕೊನೆಯ ಉಸಿರಿನಲ್ಲಿ "ಸ್ವರಾಜ್ಯ...ಬೇಕು" ಎಂದು ತೊದಲುತ್ತ ನುಡಿದ. ಅವನ ನುಡಿಯೊಡನೆ ಆ ಉಸಿರೂ ಕುಗ್ಗಿತು. ವೀರನಾರಾಯಣ ಕಣ್ಮುಚ್ಚಿದ.

ಆ ವೀರ ಬಾಲಕನು ಇಚ್ಛಿಸಿದ 'ಸ್ವರಾಜ್ಯ' ಇಂದು ಲಭಿಸಿದೆ. ಈ ವೀರನ ಆದರ್ಶ-ತ್ಯಾಗ ನಮ್ಮ ಬಾಲಕರಲ್ಲಿಯೂ ಬಂದರೆ ಆಗ ಮಾತ್ರ 'ರಾಮರಾಜ್ಯ' ಸಾಧ್ಯ. ವೀರನಾರಾಯಣನ ತ್ಯಾಗ ಅಮರ.

## ೩. ಬುರ್ಲಿ ಶೇಷಣ್ಣ

ಬ್ರಿಟಿಷರನ್ನು ನೆಲಕೀಳುವಂತೆ ಮಾಡಿದ ಒಂದು ಚಳುವಳಿಯೆಂದರೆ 'ಉಪ್ಪಿನ ಸತ್ಯಾಗ್ರಹ'. ೧೯೩೦ ರಲ್ಲಿ ನಡೆದ ಈ ಚಳುವಳಿಯಲ್ಲಿ ಭಾಗವಹಿಸಿದ ಸತ್ಯಾಗ್ರಹಿಗಳನ್ನು ಪೋಲೀಸರು ಬಹಳ ಕ್ರೂರವಾಗಿ ಶಿಕ್ಷಿಸಿದರು. ಈ ಕ್ರೌರ್ಯಕ್ಕೆ ಬಲಿಯಾದವರು ಅನೇಕರು. ಆದರೆ ಇವರ ಬಲಿದಾನ ಸ್ವಾತಂತ್ರ್ಯ ಹೋರಾಟಕ್ಕೆ ಬಲಕೊಟ್ಟಿತು. ರಾಷ್ಟ್ರದಲ್ಲಿ ಚೇತನವನ್ನುಂಟು ಮಾಡಿತು.

ಸುಮಾರು ೧೯೩೦ ರಲ್ಲಿ ಮಂಗಳೂರಿನಲ್ಲಿ ನಡೆದ ಒಂದು ಪ್ರಸಂಗ ರೋಮಾಂಚನಕಾರಿ ಬುರ್ಲಿ ಶೇಷಣ್ಣ ಮಂಗಳೂರು ಪಟ್ಟಣದಲ್ಲಿ ವಿದ್ಯಾರ್ಥಿಗಳ ಗುಂಪನ್ನು ಸಂಘಟಿಸಿ ಉಪ್ಪಿನ ಸತ್ಯಾಗ್ರಹಕ್ಕೆ ತಯಾರು ಮಾಡಿದ. ಅಂದು ನಿರ್ಬಂಧಿತ ಉಪ್ಪನ್ನು ಮೆರವಣಿಗೆಯಲ್ಲಿ ಮಾರುವ ನಿರ್ಧಾರ ಕೈಗೊಳ್ಳಲಾಗಿತ್ತು. ಈ ಮೆರವಣಿಗೆಯನ್ನು ಪೋಲೀಸರು ತಡೆದಾಗ ವಿದ್ಯಾರ್ಥಿ ತಂಡ ಮತ್ತಷ್ಟು ಬಲಗೊಂಡಿತು. ಮುಂದೆ ಕಾಲಿಟ್ಟರೆ ಲಾಠಿ ಪ್ರಹಾರ ಎಂಬ ಆಜ್ಞೆಗೆ ಸೊಪ್ಪು ಹಾಕದೆ ಬುರ್ಲಿ ಶೇಷಣ್ಣ ತನ್ನ ಒಂದು ಕೈಯಲ್ಲಿ ಬಾವುಟವನ್ನು ಹಿಡಿದು ಇನ್ನೊಂದು ಕೈಯಲ್ಲಿ ಉಪ್ಪನ್ನು ಹಿಡಿದು ಮುನ್ನುಗ್ಗಿದ. ಆ ವೀರ ಸತ್ಯಾಗ್ರಹಿಯ ಮೇಲೆ ಯಮದೂತ ಪೋಲೀಸರ ಲಾಠಿ ಪ್ರಹಾರ ಪ್ರಾರಂಭವಾಯಿತು. ಆ ಪೆಟ್ಟುಗಳನ್ನು ಲೆಖ್ಖಿಸದೆ ನುಗ್ಗುತ್ತಿದ್ದ ಶೇಷಣ್ಣನನ್ನು ಅನೇಕ ಪೋಲೀಸರು ಮುತ್ತಿ ಎಡೆಬಿಡದೆ ಹೊಡೆದರು. ಶೇಷಣ್ಣನ ಎಲುಬು ಪುಡಿ ಪುಡಿಯಾಗುವಂತೆ ಪೆಟ್ಟು. ಬುರ್ಲಿ ಮೂರ್ಛಿತನಾದ. ಅಲ್ಲಿಯೇ ಒಂದು ಕೊಠಡಿಯಲ್ಲಿ ಅವನನ್ನು ಹಾಕಿದರು. ಬಹಳ ಹೊತ್ತಿನ ನಂತರ ಅವನನ್ನು ಆಸ್ಪತ್ರೆಗೆ ಸಾಗಿಸಿದರು. ಸ್ವಲ್ಪ ಎಚ್ಚರ ಬಂದಾಗ ಬುರ್ಲಿ ಬಡಬಡಿಸಿದ, "ಮೆರವಣಿಗೆ ಏನಾಯಿತು.'' ಇವನ ರಾಷ್ಟ್ರನಿಷ್ಠೆ ಒಂದು ಆದರ್ಶ. ಇಂತಹ ಧೈರ್ಯಶಾಲಿಗಳ ನಾಡು ನಮ್ಮದಾಗಬೇಕು.

## ೪. ತೋಟಣ್ಣವರ ಸಾತಪ್ಪ

ಬೆಳಗಾವಿಜಿಲ್ಲೆಯ ಶಿವಾಪೂರಗ್ರಾಮದ ತೋಟಣ್ಣವರ ಸಾತಪ್ಪನವರು ಸ್ವಾತಂತ್ರ್ಯ ಚಳುವಳಿಯಲ್ಲಿ ಗ್ರಾಮಗಳಲ್ಲಿ ಜನಜಾಗೃತಿಗೆ ಅಸು ಅರ್ಪಿಸಿದ ವೀರರು. ೧೯೪೨ ರಲ್ಲಿ ಗಾಂಧೀಜಿಯವರ ಆದೇಶದಂತೆ ಬ್ರಿಟಿಶರ ಆಡಳಿತದಿಂದ ಗ್ರಾಮಗಳನ್ನು ಸತ್ಯಾಗ್ರಹಿಗಳು ವಹಿಸಿಕೊಳ್ಳಬೇಕೆಂಬುದನ್ನು ಶಿವಾಪುರದಲ್ಲಿ ಕಾರ್ಯರೂಪಕ್ಕೆ ತಂದ ಶ್ರೇಯ ಶ್ರೀ ಸಾತಪ್ಪನಿಗೆ ಸಲ್ಲುತ್ತದೆ. ಆಗಸ್ಟ್ ೧೫ ರಂದು ಶಿವಾಪೂರವು ಸ್ವಾತಂತ್ರ್ಯ ಗ್ರಾಮವೆಂದು ಘೋಷಿಸಿ ಅದರ ಆಡಳಿತ ಸೂತ್ರಗಳನ್ನು ಸತ್ಯಾಗ್ರಹಿಗಳು ಶ್ರೀ ಸಾತಪ್ಪನ ನೇತೃತ್ವದಲ್ಲಿ ವಹಿಸಿಕೊಂಡರು. ಅಂದು ಮುಂಜಾನೆ ಸ್ವೇಚ್ಛಾ ವಾತಾವರಣದಲ್ಲಿ ಜನ ಸಂತೋಷಗೊಂಡು ಜಯಭೇರಿ ಹೊಡೆಯುತ್ತ ಮೆರವಣಿಗೆ ಹೊರಟರು

ಹಳ್ಳಿಂ ಅಧಿಕಾರ ತ್ಯಾಗಮಾಡಲಿಲ್ಲವೆಂಬ ಇವರಣಕ್ಕೆ ಅವನ ದಫ್ತರುಗಳನ್ನು ಸತ್ಯಾಗ್ರಹಿಗಳು ಕಸಿದುಕೊಂಡ ಘಟನೆ ಬ್ರಿಟಿಶರನ್ನು ಉದ್ರಿಕ್ತಗೊಳಿಸಿತು. ಪೋಲೀಸರ ದಂಡೇ ಈಸೂರನ್ನು ಮುತ್ತಿತು. ಆಗ ಈ ದಂಡನ್ನು ಸತ್ಯಾಗ್ರಹಿಗಳು ಎದುರಿಸಿದರು. ಆಗ ಪೋಲೀಸ ಇನ್‌ಸ್ಪೆಕ್ಟರನ ತಲೆಯ ಮೇಲಿನ ಹ್ಯಾಟನ್ನು ಕಿತ್ತು ಅವನ ತಲೆಮೇಲೆ ಗಾಂಧೀಟೋಪಿ ಹಾಕಲು ಓರ್ವ ಬಾಲಿಕೆ ಮುಂದಾದಳು. ಇದರಿಂದ ಉದ್ರಿಕ್ತನಾದ ಆ ಪೋಲೀಸ್ ಅಧಿಕಾರಿ ಬಂದೂಕಿನಿಂದ ಆಕೆಯನ್ನು ಹೊಡೆಯಲು ಹೋದಾಗ ಓರ್ವ ಬಾಲಕನು ಆ ಗುಂಡಿನೇಟು ಆಕೆಗೆ ಬೀಳದಂತೆ ಆಕೆಯನ್ನು ತಳ್ಳಿಬಿಟ್ಟ. ಈ ಘಟನೆ ಗ್ರಾಮಸ್ಥರನ್ನು ಉದ್ರೇಕಗೊಳಿಸಿತು. ಒಂದು ಕಡೆ ಪೋಲೀಸರು ಗೋಳೀಬಾರು ಮಾಡಿದರೆ ಇನ್ನೊಂದೆಡೆ ಜನ ಅವರನ್ನು ಮುತ್ತಿ ಹತ ಮಾಡಿಸಲು ನಿಂತರು. ಸಬ್-ಇನ್‌ಸ್ಪೆಕ್ಟರ್ ಮತ್ತು ಅಮಲದಾರರು ಜನರ ಹೊಡೆತಕ್ಕೆ ಸತ್ತರು. ಅನೇಕ ಗ್ರಾಮಸ್ಥರ ರಕ್ತ ಈ ದುರಂತದ ಫಲವಾಗಿ ಹರಿಯಿತು. ಈ ಘಟನೆ ವಿಚಾರಣೆಗೆ ಬಂತು. ಈ ವಿಚಾರಣೆಗೆ ತುತ್ತಾದವರಲ್ಲಿ ಈಸೂರಿನ ವೀರಮಹಿಳೆಯರು ಗಮ-ನಾರ್ಹರು. ಶ್ರೀಮತಿ ಪಾರ್ವತಮ್ಮ, ಶ್ರೀಮತಿ ಹಾಲಮ್ಮ ಹಾಗೂ ಶ್ರೀಮತಿ ಸಿದ್ಧಮ್ಮ ಇವರು ಮೂವರಿಗೂ ಜೀವಾವಧಿ ಶಿಕ್ಷೆ ವಿಧಿಸಲಾಯಿತು. ಇವರ ತ್ಯಾಗ ಅಮರವಾದುದು. ಈ ವೀರ ವನಿತೆಯರು ನಮ್ಮ ಈಗಿನ ವನಿತೆಯರಿಗೆ ಸ್ಫೂರ್ತಿಯನ್ನಿತ್ತರೆ ಅವರ ತ್ಯಾಗ ಸಾರ್ಥಕವಾದೀತು.

* * *

" ನಿನ್ನ ರಕ್ತಧಾರೆ ಹರಿದು
ರಾಷ್ಟ್ರಕಾಯ್ತು ಮುಕ್ತಿಯು,
ನಿನ್ನ ಸಾವು–ನೋವು ನೋಡಿ,
ಬರಲಿ ತ್ಯಾಗ ಭಾವವು "

—ಕುವಲಯ



